# ಪ್ರಾಥಮಿಕ ಶಿಕ್ಷಣದಲ್ಲಿ ಲಿಂಗ-ಸಂಬಂಧಿ ಆಯಾಮಗಳು : ಸಮಾಜೋ-ಆರ್ಥಿಕ ಅಂಶಗಳು

(ಅರ್ಥಶಾಸ್ತ್ರ ವಿಷಯಕ್ಕೆ ಸಂಬಂಧಿಸಿದಂತೆ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನ ಮಹಾಪ್ರಬಂಧದ)

ಸಂಶೋಧಕರು

ಕೆ. ಸವಿತ

ಮಾರ್ಗದರ್ಶಕರು

ಡಾ. ಎಚ್.ಡಿ ಪ್ರಶಾಂತ್

ಪ್ರವಾಚಕರು ಮತ್ತು ಮುಖ್ಯಸ್ಥರು

ಅಭಿವೃದ್ಧಿ ಅಧ್ಯಯನ ವಿಭಾಗ





ಸಮಾಜ ವಿಜ್ಞಾನಗಳ ನಿಕಾಯ

ಅಭಿವೃದ್ಧಿ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೮

# ಪ್ರಾಥಮಿಕ ಶಿಕ್ಷಣದಲ್ಲಿ ಲಿಂಗ-ಸಂಬಂಧಿ ಆಯಾಮಗಳು : ಸಮಾಜೋ-ಆರ್ಥಿಕ ಅಂಶಗಳು

(ಅರ್ಥಶಾಸ್ತ್ರ ವಿಷಯಕ್ಕೆ ಸಂಬಂಧಿಸಿದಂತೆ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನ ಮಹಾಪ್ರಬಂಧದ)


ಸಂಶೋಧಕರು

ಕೆ. ಸವಿತ

ಮಾರ್ಗದರ್ಶಕರು

ಡಾ. ಎಚ್.ಡಿ ಪ್ರಶಾಂತ್

ಪ್ರವಾಚಕರು ಮತ್ತು ಮುಖ್ಯಸ್ಥರು

ಅಭಿವೃದ್ಧಿ ಅಧ್ಯಯನ ವಿಭಾಗ











ಸಮಾಜ ವಿಜ್ಞಾನಗಳ ನಿಕಾಯ

ಅಭಿವೃದ್ಧಿ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೮

# ಪ್ರಮಾಣ ಪತ್ರ

**ಪ್ರಾಥಮಿಕ ಶಿಕ್ಷಣದಲ್ಲಿ ಲಿಂಗ-ಸಂಬಂಧಿ ಆಯಾಮಗಳು : ಸಮಾಜೋ-ಆರ್ಥಿಕ ಅಂಶಗಳು** ಎಂಬ ವಿಷಯದ ಕುರಿತು ಡಾ. ಎಚ್.ಡಿ. ಪ್ರಶಾಂತ್ ಅವರ ಮಾರ್ಗದರ್ಶನದಲ್ಲಿ ಸಂಶೋಧನ ಅಧ್ಯಯನ ಮಾಡಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ.

ಈ ಮಹಾಪ್ರಬಂಧವನ್ನು ಇದುವರೆಗೂ ಯಾವುದೇ ಪದವಿಗಾಗಿ ಸಲ್ಲಿಸಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

K. Savitha

ಸ್ಥಳ : ವಿದ್ಯಾರಣ್ಯ

ದಿನಾಂಕ :

**ಕೆ. ಸವಿತ**
ಸಂಶೋಧನ ವಿದ್ಯಾರ್ಥಿನಿ
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ದೃಢೀಕರಣ ಪತ್ರ

**ಪ್ರಾಥಮಿಕ ಶಿಕ್ಷಣದಲ್ಲಿ ಲಿಂಗ-ಸಂಬಂಧಿ ಆಯಾಮಗಳು : ಸಮಾಜೋ-ಆರ್ಥಿಕ ಅಂಶಗಳು** ಎಂಬ ವಿಷಯದ ಕುರಿತು ಕೆ. ಸವಿತ ಅವರು ನನ್ನ ಮಾರ್ಗದರ್ಶನದಲ್ಲಿ ಸಂಶೋಧನ ಅಧ್ಯಯನ ಮಾಡಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದಾರೆ.

ಈ ಮಹಾಪ್ರಬಂಧವನ್ನು ಇದುವರೆಗೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ :

ಡಾ. ಎಚ್.ಡಿ. ಪ್ರಶಾಂತ್
ಮಾರ್ಗದರ್ಶಕರು ಮತ್ತು ಮುಖ್ಯಸ್ಥರು
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯದಲ್ಲಿ ಸಂಶೋಧನಾ ಅಧ್ಯಯನ ಕೈಗೊಳ್ಳಲು ಅವಕಾಶ ನೀಡಿದ ಅಂದಿನ ಮಾನ್ಯಕುಲಪತಿಗಳಾದ ಡಾ. ಕೆ.ವಿ. ನಾರಾಯಣ ಮತ್ತು ಡಾ. ಬಿ.ಎ. ವಿವೇಕ ರೈ ಅವರಿಗೆ, ಇಂದಿನ ಮಾನ್ಯಕುಲಪತಿಗಳಾಗಿರುವ ಡಾ. ಎ. ಮುರಿಗೆಪ್ಪ ಅವರಿಗೆ, ಮಾನ್ಯ ಕುಲಸಚಿವರಾದ ಡಾ. ಹಿ.ಚಿ. ಬೋರಲಿಂಗಯ್ಯ ಅವರಿಗೆ, ಮಾನ್ಯಉಪಕುಲಸಚಿವರಾದ ಡಾ. ಕೆ. ಪ್ರೇಮಕುಮಾರ ಅವರಿಗೆ, ಅಧ್ಯಯನಾಂಗದ ನಿರ್ದೇಶಕರಾದ ಡಾ. ಡಿ. ಪಾಂಡುರಂಗಬಾಬು ಅವರುಗಳಿಗೆ ಕೃತಜ್ಞತೆಗಳು.

ನನ್ನ ಅಧ್ಯಯನದ ಪ್ರಾರಂಭದಿಂದ ಎಲ್ಲಾ ರೀತಿಯ ಶೈಕ್ಷಣಿಕ ಪ್ರೋತ್ಸಾಹಗಳನ್ನು ನೀಡಿ ನನ್ನ ಶೈಕ್ಷಣಿಕ ಅಧ್ಯಯನಕ್ಕೆ ವಿಶ್ವಾಸ ತುಂಬಿ ಬೆಂಬಲಿಸಿ, ಪ್ರಬಂಧ ರಚನೆಯವರೆಗೆ ಸೂಕ್ತವಾದ ಸಲಹೆ ಸೂಚನೆ, ಪ್ರೋತ್ಸಾಹ ಮತ್ತು ಮಾರ್ಗದರ್ಶನ ನೀಡಿದ ಡಾ. ಎಚ್.ಡಿ. ಪ್ರಶಾಂತ್ ಅವರಿಗೆ ಕೃತಜ್ಞತೆಗಳು.

ವಿಭಾಗದಲ್ಲಿ ಆಂತರಿಕ ಸಂಶೋಧನಾ ವಿದ್ಯಾರ್ಥಿನಿಯಾದ ಸಂದರ್ಭದಿಂದ ಪ್ರಬಂಧ ರಚನೆಯವರೆಗೆ ಆತ್ಮೀಯತೆಯಿಂದ ಕುಟುಂಬದ ಸದಸ್ಯಳಂತೆ ಸೂಕ್ತ ಸಲಹೆಗಳನ್ನು ನೀಡಿ ಮಾರ್ಗದರ್ಶನ ಮಾಡಿದ ವಿಭಾಗದ ಸ್ಥಾಪಕ ಪ್ರಾಧ್ಯಾಪಕರಾದ ಡಾ. ಬಿ. ಶೇಷಾದ್ರಿ ಅವರಿಗೆ, ಡಾ. ಟಿ.ಆರ್. ಚಂದ್ರಶೇಖರ್ ಮತ್ತು ಡಾ. ಚಂದ್ರಪೂಜಾರಿ ಅವರಿಗೆ ಕೃತಜ್ಞತೆಗಳು.

ಅಭಿವೃದ್ಧಿ ಅಧ್ಯಯನ ವಿಭಾಗದಲ್ಲಿ ಪಿಎಚ್.ಡಿ. ಅಧ್ಯಯನವನ್ನು ನಡೆಸುವಂತೆ ಪ್ರೋತ್ಸಾಹಿಸಿ ನನ್ನನ್ನು ಕರೆತಂದ ಡಾ. ಸಿದ್ಧಗಂಗಮ್ಮ ಅವರಿಗೆ ಕೃತಜ್ಞತೆಗಳು.

ನನ್ನ ಅಧ್ಯಯನ ಸಂದರ್ಭದಲ್ಲಿ ಸೂಕ್ತ ಸಲಹೆ ನೀಡಿ ಬೆಂಬಲಿಸಿದ ಡಾ. ಎ. ಶ್ರೀಧರ್, ಶ್ರೀ ಜನಾರ್ದನ, ಶ್ರೀ. ಕೆ.ಸಿ. ಚನ್ನಮ್ಮ, ಡಾ. ಜೆ. ಕೃಷ್ಣ, ಶ್ರೀ ಹೆಚ್.ಎಸ್. ರವೀಂದ್ರ, ಶ್ರೀ ಕೆ. ಮಂಜಪ್ಪ, ಶ್ರೀಮತಿ ಬಿ. ಗಂಗಮ್ಮ ಗೌಳಿ, ಶ್ರೀ ಗಂಗಾಧರ ಇವರೆಲ್ಲರಿಗೂ ವಂದನೆಗಳು.

ನನ್ನ ಅಧ್ಯಯನ ವಿಷಯದ ಬಗ್ಗೆ ಚರ್ಚಿಸಿ ನನ್ನ ಆಲೋಚನೆಗಳು ವಿಸ್ತಾರವಾಗುವುದಕ್ಕೆ ಸಲಹೆ ಸಹಕಾರ ನೀಡಿದ ಡಾ. ಎಚ್.ಎಸ್. ಶ್ರೀಮತಿ, ಡಾ. ಕೆ.ಎಂ. ಮೇತ್ರಿ, ಡಾ. ಮಂಜುನಾಥ

ಬೇವಿನಕಟ್ಟೆ ಅವರಿಗೆ ಅಭಾರಿಯಾಗಿದ್ದೇನೆ. ಕೊರಟಗೆರೆ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಎಲ್ಲಾ ಅಧ್ಯಾಪಕ ವೃಂದದವರಿಗೂ, ಹೆಬ್ಬೂರು ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಅಧ್ಯಾಪಕರಾದ ಶ್ರೀ ಜಿ.ಕೆ. ನಾಗರಾಜ ಅವರಿಗೂ ಆಭಾರಿಯಾಗಿದ್ದೇನೆ.

ನನ್ನ ಅಧ್ಯಯನಕ್ಕೆ ಪ್ರೋತ್ಸಾಹ ನೀಡಿದ ಪ್ರೀತಿಯ ತಂದೆ ತಾಯಿಗಳಾದ ಶ್ರೀ ಜಿ. ಕಾಂತರಾಜ್, ಶ್ರೀಮತಿ ಲಕ್ಷ್ಮಮ್ಮ, ಅಣ್ಣಂದಿರಾದ ಎನ್. ಮುತ್ತುರಾಜ್, ಗಿರೀಶ್, ಶಿವಕುಮಾರ್, ತಮ್ಮಂದಿರಾದ ಕೆ. ನರಸಿಂಹರಾಜು, ಕೆ. ಶ್ರೀನಾಥ್, ಪುಟಾಣಿಗಳಾದ ಆರ್. ರೂಪಶ್ರೀ, ಆರ್. ಮನೋಜ್, ದೊಡ್ಡಪ್ಪಂದಿರಾದ ಶ್ರೀ ರಾಮಯ್ಯ ಮತ್ತು ನರಸೀಯಪ್ಪ ಅವರುಗಳಿಗೂ ಕೃತಜ್ಞತೆಗಳು.

ನನ್ನ ಅಧ್ಯಯನಕ್ಕೆ ಪೂರಕಮಾಹಿತಿ ನೀಡಿದ ಕೊರಟಗೆರೆ ಮತ್ತು ಕಮಲಾಪುರ ಪಟ್ಟಣ ಪಂಚಾಯತಿಗಳ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಶಿಕ್ಷಕರು, ಹಾಗೂ ಸಮಸ್ತ ನಾಗರಿಕರೆಲ್ಲರಿಗೂ ವಂದನೆಗಳು. ಅಧ್ಯಯನ ಸಂದರ್ಭದಲ್ಲಿ ಸರಿಯಾದ ಸಮಯಕ್ಕೆ ಪುಸ್ತಕಗಳನ್ನು ಒದಗಿಸಿದಂತಹ ಗ್ರಂಥಪಾಲಕರಿಗೂ, ಸಿಬ್ಬಂದಿ ವರ್ಗದವರಿಗೆ, ಅಧ್ಯಯನಕ್ಕೆ ಪ್ರತ್ಯೇಕ ಹಾಗೂ ಪರೋಕ್ಷವಾಗಿ ಸಹಕಾರ ನೀಡಿದ ಎಲ್ಲರಿಗೂ ವಂದನೆಗಳು.

ಕ್ಷೇತ್ರಕಾರ್ಯದ ಸಂದರ್ಭದಿಂದ ಕರಡು ತಿದ್ದುವವರಿಗೆ ಸಹಕಾರ ನೀಡಿದ ಸ್ನೇಹಿತರಾದ ಜಗದೀಶ್ ಕುಮಾರ್, ಜಾನೇಕಲ್ಲು ವೀರೇಶ, ಎಂ.ಎಸ್. ಪಾಟೀಲ್, ಮಹಾಂತೇಗೌಡ, ರಂಗನಾಥ್, ರವಿ, ಬಸವರಾಜ ಎ.ಡಿ. ಹನುಮಂತರಾಯ, ಉಮಾ ಪಾಟೀಲ್, ವೀಣಾ ಕುಲಕರ್ಣಿ, ವರಲಕ್ಷ್ಮೀ, ವಿಮಲಾ, ವಿಜಯಲಕ್ಷ್ಮಮ್ಮ ಮತ್ತು ಕೊರಟಗೆರೆಯ ಕೆ.ಎನ್. ನಟರಾಜ್, ವಸಂತಕುಮಾರ್, ಮಂಜುನಾಥ, ಸುಧೀರ್, ಕುಮಾರಿ ಇವರುಗಳನ್ನು ಸಹ ನೆನಸಿ ಕೊಳ್ಳುತ್ತೇನೆ.

ತಾಳ್ಮೆಯಿಂದ ಡಿ.ಟಿ.ಪಿ. ಮಾಡಿಕೊಟ್ಟ ಕಮಲಾಪುರದ ಎಸ್.ವಿ. ಗ್ರಾಫಿಕ್ಸ್‌ನ ಜೆ. ಶಿವಕುಮಾರ ಮತ್ತು ಜೆ. ಬಸವರಾಜು ಅವರಿಗೆ ವಂದನೆಗಳು.

**ಕೆ. ಸವಿತ**

# ಪರಿವಿಡಿ

# ಕೋಷ್ಟಕಗಳ ಪಟ್ಟಿ

# ಸಂಕ್ಷೇಪಗಳು

| | | |
|---|---|---|
| ಬಿ.ಆರ್.ಸಿ | - | ಕ್ಷೇತ್ರ ಸಂಪನ್ಮೂಲ ಕೇಂದ್ರ. |
| ಬಿ.ಆರ್.ಸಿ.ಸಿ. | - | ಕ್ಷೇತ್ರ ಸಂಪನ್ಮೂಲ ಕೇಂದ್ರ ಸಮನ್ವಯಾಧಿಕಾರಿ. |
| ಸಿ.ಇ.ಸಿ | - | ಮುಂದುವರಿಕೆಯ ಶಿಕ್ಷಣ ಕೇಂದ್ರ. |
| ಸಿ.ಆರ್.ಪಿ. | - | ಸಮೂಹ ಸಂಪನ್ಮೂಲ ವ್ಯಕ್ತಿ. |
| ಡಿ.ಇ.ಇ.ಪಿ. | - | ಜಿಲ್ಲಾ ಎಲಿಮೆಂಟರಿ ಶಿಕ್ಷಣ ಯೋಜನೆ. |
| ಡಿ.ಪಿ.ಇ.ಪಿ. | - | ಜಿಲ್ಲಾ ಪ್ರಾಥಮಿಕ ಕಾರ್ಯಕ್ರಮ. |
| ಡಯಟ್ | - | ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ. |
| ಇ.ಸಿ.ಸಿ.ಇ./ಇ.ಸಿ.ಇ. | - | ಶಾಲಾ ಪೂರ್ವ ಶಿಕ್ಷಣ/ಪೂರ್ವ ಪ್ರಾಥಮಿಕ ಶಿಕ್ಷಣ. |
| ಇ.ಜಿ.ಎಸ್. | - | ಶಿಕ್ಷಣ ಖಾತರಿ ಯೋಜನೆ. |
| ಎಂ.ಎಚ್.ಆರ್.ಡಿ. | - | ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯ. |
| ಎಂ.ಎಲ್.ಎಲ್. | - | ಕಲಿಕೆಯ ಕನಿಷ್ಠ ಮಟ್ಟಗಳು. |
| ಎಸ್.ಡಿ.ಎಂ.ಸಿ. | - | ಶಾಲಾ ಅಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿ. |
| ಓ.ಡಿ.ಎ. | - | Overaces Development Agenics. |
| ಎಸ್.ಡಿ.ಡಿ.ಐ. | - | Swedis International Development Agenics. |
| ಬಿ.ಎಂ.ಸಿ. | - | ಬೃಹತ್ ಮುಂಬೈ ಮುನಿಸಿಪಲ್ ಕಾರ್ಪೋರೇಷನ್. |
| ಎಸ್.ಎಸ್.ಎ. | - | ಸರ್ವ ಶಿಕ್ಷಣ ಅಭಿಯಾನ. |
| ಎನ್.ಸಿ.ಇ.ಆರ್.ಟಿ. | - | ರಾಷ್ಟ್ರೀಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ಸಂಸ್ಥೆ. |
| ಎ.ಐ.ಇ. | - | ಪರ್ಯಾಯ ಮತ್ತು ಆವಿಷ್ಕೃತ ಶಿಕ್ಷಣ. |

# ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವಿಧಾನ, ವ್ಯಾಪ್ತಿ ಮತ್ತು ಮಹತ್ವ

## ೧.೧. ಪ್ರಸ್ತಾವನೆ

ಪ್ರಸ್ತುತ ಜಾಗತೀಕ ಸಂದರ್ಭದಲ್ಲಿ ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಪ್ರಾಥಮಿಕ ಶಿಕ್ಷಣಕ್ಕೆ ಹೆಚ್ಚು ಪ್ರಾಮುಖ್ಯತೆ ನೀಡುತ್ತಿರುವುದನ್ನು ನಾವು ಕಾಣುತ್ತೇವೆ. ಶಿಕ್ಷಣ ಮಾನವ ಅಭಿವೃದ್ಧಿಗೆ ಅತ್ಯಂತ ಅಗತ್ಯವಾದ ಸಾಧನ ಎಂಬುದನ್ನು ಮಾನವ ಅಭಿವೃದ್ಧಿ ವರದಿಗಳು ಹಾಗೂ ಇತ್ತೀಚಿನ ಸಮಾಜ ಸಂಶೋಧನಾ ಅಧ್ಯಯನಗಳು ಒತ್ತಿ ಹೇಳುತ್ತಿವೆ. ಈ ಹಿನ್ನೆಲೆಯಲ್ಲಿ ಪ್ರಾಥಮಿಕ ಶಿಕ್ಷಣದಲ್ಲಿ ಇರಬಹುದಾದ ಲಿಂಗ-ಸಂಬಂಧಿ ಆಯಾಮಗಳನ್ನು ಸಮಾಜೋ-ಆರ್ಥಿಕ ಅಂಶಗಳ ದೃಷ್ಟಿಕೋನದಿಂದ ಅರ್ಥಮಾಡಿಕೊಳ್ಳಲು ಈ ಪ್ರಬಂಧದಲ್ಲಿ ಪ್ರಯತ್ನಿಸಲಾಗಿದೆ.

ಶಿಕ್ಷಣ ಮಾನವ ಸಮಾಜದ ಅಭಿವೃದ್ಧಿಗೆ ಕಾರಣವಾಗಿರುವಂತಹ ಅತ್ಯಂತ ಪ್ರಮುಖ ಹಾಗೂ ಪ್ರಬಲ ಸಾಧನ. ಆದರೆ ಭಾರತೀಯ ಸಮಾಜದಲ್ಲಿ ಮಹಿಳೆಯರಿಗೆ ಲಭ್ಯವಿರುವ ಶಿಕ್ಷಣಾವಕಾಶಗಳು ಪುರುಷನಿಗೆ ಹೋಲಿಸಿದಾಗ ಕಡಿಮೆ ಎಂದು ಹೇಳಬಹುದು. ಕಳೆದ ಕಾಲಮಾನಕ್ಕಿಂತ ಇಂದು ಸಂಖ್ಯಾತ್ಮಕ ದೃಷ್ಟಿಯಿಂದ ಮಹಿಳೆಯರಿಗೆ ಶೈಕ್ಷಣಿಕ ಅವಕಾಶಗಳಲ್ಲಿ ಹೆಚ್ಚಳ ಉಂಟಾಗಿರುವುದು ನಿಜ, ಆದರೆ ಹೀಗೆ ಹೆಚ್ಚಾಗಿರುವ ಅವಕಾಶಗಳ ಹಂಚಿಕೆಯಲ್ಲಿ ಸಮಾನತೆ ಕಂಡುಬರುತ್ತಿಲ್ಲ. ಅದಕ್ಕೆ ಹಲವಾರು ಕಾರಣಗಳಿರಬಹುದು. ಅದು ಶಾಲಾ ಭಾಗವಹಿಸುವಿಕೆಯಲ್ಲಿರಬಹುದು, ಸಾಕ್ಷರತೆಯ ಪ್ರಮಾಣದಲ್ಲಿರಬಹುದು, ದಾಖಲಾತಿಯಲ್ಲಿರಬಹುದು, ಹಾಜರಾತಿಯಲ್ಲಿರಬಹುದು. ಇದನ್ನು ಗಮನಿಸಿದ ಸರ್ಕಾರಗಳು ವಿವಿಧ ಯೋಜನೆಗಳ ಮೂಲಕ ಹಲವು ಶೈಕ್ಷಣಿಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಜಾರಿಗೊಳಿಸಿದರೂ ಸಹ, ಇಂದು ಸಾಕ್ಷರತೆಯಲ್ಲಿ ಪುರುಷರು ಮತ್ತು ಮಹಿಳೆಯರ ನಡುವೆ ವ್ಯತ್ಯಾಸ ಕಂಡುಬರುತ್ತಿದೆ. ಹೆಣ್ಣುಮಕ್ಕಳ ಶಿಕ್ಷಣದ ಪ್ರಗತಿಯೂ ಅವರ ದಾಖಲಾತಿ, ಅವರ ಶಾಲಾ ಹಾಜರಾತಿಗೆ ಸಮಾನವಾಗಿರುವುದಿಲ್ಲ. ಇದು ನಮ್ಮೆಲ್ಲರನ್ನು ಆತಂಕಕ್ಕೆ ಈಡುಮಾಡುವ ವಿಷಯವಾಗಿ ಕಂಡುಬರುತ್ತದೆ. ಅದರಲ್ಲಿಯೂ ಗ್ರಾಮೀಣ ಪ್ರದೇಶದ, ಶೈಕ್ಷಣಿಕ ವಿಷಯದಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಕ್ಕೆ ಸೇರಿದ ಹೆಣ್ಣುಮಕ್ಕಳ ವಿಷಯದಲ್ಲಿ ನಾವೆಲ್ಲರೂ ಹೆಚ್ಚು ತಲೆಕೆಡಿಸಿಕೊಳ್ಳಬೇಕಾದ ಅಗತ್ಯವಿದೆ. ರಾಷ್ಟ್ರ, ರಾಜ್ಯ, ಜಿಲ್ಲೆ, ತಾಲ್ಲೂಕುಗಳಲ್ಲಿ ಪ್ರಾದೇಶಿಕ ಭಿನ್ನತೆಯ ವ್ಯತ್ಯಾಸದಿಂದಾಗಿ

ಶೈಕ್ಷಣಿಕ ಅಭಿವೃದ್ಧಿ ಕಾರ್‍ಯಕ್ರಮಗಳು ನಿರೀಕ್ಷಿತ ಮಟ್ಟವನ್ನು ತಲುಪಿಲ್ಲ ಎನ್ನಬಹುದು. ಸಾಕ್ಷರತೆಗೆ ಸಂಬಂಧಿಸಿದಂತೆ ಲಿಂಗ-ಸಂಬಂಧಿ ಅಸಮಾನತೆಗಳು ತೀವ್ರವಾಗಿವೆ (ಟಿ.ಆರ್. ಚಂದ್ರಶೇಖರ್, ೨೦೦೬).

ಇಂಡಿಯಾದಲ್ಲಿ ಸ್ವಾತಂತ್ರ ಪೂರ್ವದಿಂದಲೂ ಶಾಲಾ ಶಿಕ್ಷಣದ ಸಾರ್ವತ್ರೀಕರಣಕ್ಕೆ ಬೇಡಿಕೆ ಇರುವುದನ್ನು ನಾವು ಕಾಣಬಹುದು. ಇದಕ್ಕೆ ಅನೇಕ ಆಯೋಗಗಳು ರಚನೆಗೊಂಡಿವೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ ವುಡ್ಸ್ ಆಯೋಗ (೧೮೫೪); ಹಂಟರ್ ಆಯೋಗ (೧೮೮೨); ಸಾರ್ಜೆಂಟ್ ಆಯೋಗ (೧೯೪೪) ಇತ್ಯಾದಿ (ವಿವರಣೆಗೆ ಮೂರನೇ ಅಧ್ಯಾಯ ನೋಡಿ). ನಿರ್ದಿಷ್ಟವಾಗಿ ಕಳೆದ ೬೦ ವರ್ಷಗಳಿಂದ ಪ್ರಾಥಮಿಕ ಶಾಲಾ ಶಿಕ್ಷಣಕ್ಕೆ ಹೆಚ್ಚು ಒತ್ತು ನೀಡಿ ಸಾರ್ವತ್ರೀಕರಣಗೊಳಿಸಬೇಕೆಂಬ ಪ್ರಯತ್ನ ನಡೆಯುತ್ತಿದೆ. ಈ ಹಿನ್ನೆಲೆಯಲ್ಲಿ ಸರ್ಕಾರಗಳು (ಕೇಂದ್ರ ಮತ್ತು ರಾಜ್ಯ) ಅನೇಕ ಶೈಕ್ಷಣಿಕ ಕಾರ್ಯಕ್ರಮಗಳನ್ನು ವಿವಿಧ ಯೋಜನೆಗಳ ಮೂಲಕ ಜಾರಿಗೊಳಿಸುತ್ತಾ ಬಂದಿದೆ. ಈ ಎಲ್ಲಾ ಕಾರ್ಯಕ್ರಮಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಪ್ರಾಥಮಿಕ ಶಿಕ್ಷಣಕ್ಕೆ ಹೆಚ್ಚು ಪ್ರಾಮುಖ್ಯತೆ ನೀಡಿರುವುದು ತಿಳಿದುಬರುತ್ತದೆ. ಪಂಚವಾರ್ಷಿಕ ಯೋಜನೆಗಳಲ್ಲಿ ಇಂತಿಷ್ಟು ಎಂದು ಹಣ ಹೂಡಿಕೆ ಮಾಡುವುದರ ಮೂಲಕ ಶಿಕ್ಷಣದ ಅಭಿವೃದ್ಧಿಗೆ ಸರ್ಕಾರಗಳು ಅನೇಕ ಯೋಜನೆಗಳನ್ನು ಜಾರಿಗೆ ತರುತ್ತಿವೆ. ಆದರೂ ಸಹ ಇಂದು ನಾವು ನಿರೀಕ್ಷಿಸಿದಷ್ಟು ಪ್ರಗತಿಯನ್ನು ಪ್ರಾಥಮಿಕ ಶಿಕ್ಷಣ ಕ್ಷೇತ್ರದಲ್ಲಿ ಕಾಣಲು ಸಾಧ್ಯವಾಗಿಲ್ಲ. ಒಂದು ಪಕ್ಷ ಕಂಡಿದ್ದರೂ ಅಲ್ಲಿ ಪ್ರಾದೇಶಿಕ ಅಸಮಾನತೆ, ಲಿಂಗ ತಾರತಮ್ಯ, ಜಾತಿ ತಾರತಮ್ಯ ಇರುವುದು ಅನೇಕ ಅಧ್ಯಯನಗಳು ಸಾಬೀತುಪಡಿಸಿವೆ. ಡ್ರೀಜ್ ಜೀನ್ ಅಂಡ್ ಅಮರ್ತ್ಯಸೇನ್ (೧೯೯೫ಬಿ); ರಾಮಚಂದ್ರನ್ (೨೦೦೩); ಶ್ರೀವಾಸ್ತವ (೧೯೯೭); ಎಚ್.ಡಿ. ಪ್ರಶಾಂತ್ (೨೦೦೪; ೨೦೦೫ ಮತ್ತು ೨೦೦೬); ಪ್ರೋಬ್ (೧೯೯೮); ಲೇತಿನ್ (೨೦೦೦).

ಈ ಮೇಲಿನ ಅಧ್ಯಯನಗಳನ್ನು ಗಮನಿಸಿದರೆ ೬-೧೪ ವರ್ಷ ವಯೋಮಾನದ ಮಕ್ಕಳಿಗೆ, ಸರ್ಕಾರ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ನೀಡಬೇಕು ಎಂಬ ನಿರ್ದೇಶನವಿದ್ದರೂ ಸಹ, ಇದು ಎಲ್ಲಾ ಜಾತಿ ವರ್ಗದವರಿಗೆ ಸಮಾನವಾಗಿ ತಲುಪಿಸಲು ಸಾಧ್ಯವಾಗುತ್ತಿಲ್ಲ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. ಹಾಗೆಯೇ ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸಲು ಸರ್ಕಾರ ಏನೆಲ್ಲಾ ಪ್ರಯತ್ನ ನಡೆಸಿದರೂ ಸಹ ಇಂದು ಸಾಕ್ಷರತೆಯಲ್ಲೂ ಮತ್ತು ಶಾಲಾ ಶಿಕ್ಷಣದಲ್ಲೂ ಸಮಾನತೆ ಕಂಡುಬರುತ್ತಿಲ್ಲ. ಅದರಲ್ಲಿಯೂ ಹೆಣ್ಣುಮಕ್ಕಳ ಶಾಲಾ ಭಾಗವಹಿಸುವಿಕೆಯು ಸಹ ಒಂದು ಬಹುದೊಡ್ಡ ಸವಾಲಾಗಿದೆ. ಇವರ ಶಾಲಾ ಭಾಗವಹಿಸುವಿಕೆಯನ್ನು ಅಭಿವೃದ್ಧಿಪಡಿಸುವ ಸಲುವಾಗಿ ಸರ್ಕಾರ ಶಿಷ್ಯವೇತನ, ಪಠ್ಯಪುಸ್ತಕ, ಕಿತ್ತೂರು ರಾಣಿ ಚೆನ್ನಮ್ಮ ಸ್ಕಾಲರ್ ಶಿಫ್, ಶಾಲಾಬ್ಯಾಗ್, ಕಸ್ತೂರಿ ಬಾ ಶಾಲೆ, ಸೈಕಲ್ ವಿತರಣೆ ಮತ್ತು ಕಲಿಕೆಗೆ ಸಂಬಂಧಿಸಿದಂತೆ ಅನೇಕ ಕಾರ್‍ಯಕ್ರಮಗಳನ್ನು ಅಳವಡಿಸಿಕೊಂಡಿದೆ.

ಆದರೂ ಶಾಲಾ ಶಿಕ್ಷಣದಲ್ಲಿ ಅಭಿವೃದ್ಧಿ ಮಂದಗತಿಯಲ್ಲಿ ಸಾಗುತ್ತಿದೆ. ಹಾಗೆಯೇ ಸಮಾನ ಶಾಲಾ ಶಿಕ್ಷಣದ ಸಾರ್ವತ್ರೀಕರಣದ ಕನಸ್ಸು ಕನಸಾಗಿಯೇ ಉಳಿದಿದೆ. ಅಲ್ಲದೇ ಸಾಕ್ಷರತೆ ಮತ್ತು ಶಾಲಾ ಶಿಕ್ಷಣದಲ್ಲಿ ಲಿಂಗ ಸಮಾನತೆಯನ್ನು ಸಾಧಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಉದಾಹರಣೆಗೆ ರಾಷ್ಟ್ರ ಮಟ್ಟದಲ್ಲಿ ಸಾಕ್ಷರತೆಯನ್ನು ಗಮನಿಸಿದಾಗ ಪ್ರತಿವರ್ಷ ಹೆಚ್ಚಾಗುತ್ತಾ ಬಂದಿದೆ. ಆದರೆ ಮಹಿಳೆಯರ ಸಾಕ್ಷರತೆಗಿಂತ ಪುರುಷರ ಸಾಕ್ಷರತೆ ಹೆಚ್ಚಾಗಿರುವುದು ಕಂಡುಬರುತ್ತದೆ. ಮಹಿಳೆಯರ ಮತ್ತು ಪುರುಷರ ಸಾಕ್ಷರತೆಯಲ್ಲಿ ಸಾಕಷ್ಟು ಅಂತರವಿರುವುದನ್ನು ನೋಡಬಹುದು. ಸಾಕ್ಷರತೆಯಲ್ಲಿಯ ಲಿಂಗ-ಸಂಬಂಧಿ ಅಂತರಗಳು ಮಹಿಳೆಯರ ಸ್ಥಾನಮಾನವನ್ನು ಪ್ರತಿನಿಧಿಸುತ್ತವೆ. ಸಾಕ್ಷರತೆಯಲ್ಲಿ ಲಿಂಗ-ಸಂಬಂಧಿ ಅಂತರವು ಅಧಿಕವಾಗಿದ್ದರೆ ಸಾಮಾನ್ಯವಾಗಿ ಆ ಪ್ರದೇಶದಲ್ಲಿ ಮಹಿಳೆಯರು ನಿರ್ಲಕ್ಷ್ಯಕ್ಕೆ ಒಳಗಾಗಿರುತ್ತಾರೆ. ಈ ಹಿಂದೆ ಸಾಕ್ಷರತೆಯನ್ನು ಅಖಂಡವಾಗಿ ಪರಿಭಾವಿಸಲಾಗುತ್ತಿತ್ತು. ಆದರೆ ಏಣಿ-ಶ್ರೇಣಿಗಳಿಂದ ಕೂಡಿದ ಸಮಾಜದ ಎಲ್ಲಾ ವರ್ಗಗಳಲ್ಲಿ ಮಹಿಳೆ ಮತ್ತು ಪುರುಷರಲ್ಲಿ ಸಾಕ್ಷರತೆಯೂ ಸಮಾನವಿರಲಾರದು. ಸಾಕ್ಷರತೆಯ ಲಿಂಗ-ಸಂಬಂಧಿ ಸ್ವರೂಪದ ಅನಾವರಣವು ಸಮಾಜದಲ್ಲಿಯ ಲಿಂಗ ಅಸಮಾನತೆಯನ್ನು ಪ್ರಕಟಪಡಿಸುತ್ತದೆ (ಜೆ. ಕೃಷ್ಣ, ೨೦೦೩).

ನಮ್ಮ ಸಂವಿಧಾನವು ಸಮಾನತೆ ಅವಕಾಶ ನೀಡಿ, ಜಾತಿ, ಧರ್ಮಾದಾರಿತ ಮತ್ತು ಲಿಂಗಧಾರಿತ ಭೇದವನ್ನು ನಿಷೇಧಿಸಿತ್ತಾದರೂ ವಾಸ್ತವದಲ್ಲಿ ಮಹಿಳಾ ಸಾಕ್ಷರತೆ ಪುರುಷರಿಗೆ ಸಮಾನವಾಗಿಲ್ಲ ಎಂಬುದು ವಿವಿಧ ಜನಗಣತಿ ವರದಿಗಳಿಂದ ತಿಳಿದುಬರುತ್ತದೆ. ನಮ್ಮ ದೇಶದ ಒಟ್ಟು ಜನಸಂಖ್ಯೆಯಲ್ಲಿ ಮಹಿಳೆಯರು ಸರಿ ಸುಮಾರು ಅರ್ಧದಷ್ಟು ಇದ್ದಾರೆ. ಮಹಿಳೆ ಮತ್ತು ಪುರುಷರ ಸಾಕ್ಷರತೆಯ ನಡುವೆ ಸಾಕಷ್ಟು ಅಂತರವಿದೆ. ಪುರುಷರ ಸಾಕ್ಷರತೆಯ ಪ್ರಮಾಣ ೧೯೫೧ರಲ್ಲಿ ೨೭.೧೬ ರಷ್ಟಿದ್ದರೆ, ಮಹಿಳೆಯರ ಸಾಕ್ಷರತಾ ಪ್ರಮಾಣ ೮.೮೬ರಷ್ಟಿತ್ತು. ಇದು ೨೦೦೧ರಲ್ಲಿ ಪುರುಷರ ಸಾಕ್ಷರತಾ ಪ್ರಮಾಣ ೭೫.೮೫ರಷ್ಟಿದ್ದರೆ ಮಹಿಳೆಯರ ಸಾಕ್ಷರತಾ ಪ್ರಮಾಣ ೫೪.೧೬ರಷ್ಟಿದೆ. ಇದನ್ನು ಗಮನಿಸಿದಾಗ ಸಮಾಜದಲ್ಲಿ ಇರುವ ಶೈಕ್ಷಣಿಕ ಅವಕಾಶಗಳ ಬಳಕೆಯಲ್ಲಿ ಲಿಂಗ ತಾರತಮ್ಯವು ಎಷ್ಟರಮಟ್ಟಿಗೆ ಇದೆ ಎಂಬುದು ಮೇಲುನೋಟಕ್ಕೆ ಗೊತ್ತಾಗುತ್ತದೆ.

ಮಹಿಳೆ ಮತ್ತು ಪುರುಷರ ಸಾಕ್ಷರತೆಯ ಪ್ರಮಾಣದಲ್ಲಿ ವ್ಯತ್ಯಾಸವಿರುವುದಷ್ಟೇ ಅಲ್ಲ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲೂ ಸಾಕ್ಷರತೆಯ ಪ್ರಮಾಣದಲ್ಲಿ ಅಗಾಧವಾದ ವ್ಯತ್ಯಾಸ ಗಳಿರುವುದು ಕಂಡುಬರುತ್ತದೆ. ೨೦೦೧ರ ಜನಗಣತಿಯ ಪ್ರಕಾರ ನಗರ ಪ್ರದೇಶದ ಮಹಿಳೆಯರ ಸಾಕ್ಷರತೆ ಪ್ರಮಾಣ ೭೩.೨೦ರಷ್ಟಿದ್ದರೆ, ಗ್ರಾಮೀಣ ಪ್ರದೇಶದ ಮಹಿಳೆಯರ ಸಾಕ್ಷರತಾ ಪ್ರಮಾಣ ಶೇಕಡ ೪೬.೭೦ರಷ್ಟಿದೆ. ಹಾಗೆಯೇ ನಗರ ಪ್ರದೇಶದ ಪುರುಷರ ಸಾಕ್ಷರತೆ ಪ್ರಮಾಣ ಶೇಕಡ ೮೬.೭೦ರಷ್ಟಿದ್ದರೆ, ಗ್ರಾಮೀಣ ಪ್ರದೇಶದ ಪುರುಷರ ಸಾಕ್ಷರತಾ ಪ್ರಮಾಣ ೭೧.೪೦ರಷ್ಟಿದೆ. ಇದರಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಪುರುಷರು ಮತ್ತು ಮಹಿಳೆಯರ ಸಾಕ್ಷರತೆಯನ್ನು

ನೋಡಿದರೆ ತುಂಬಾ ವ್ಯತ್ಯಾಸಗಳಿರುವುದು ಕಂಡುಬರುತ್ತದೆ. ಹಾಗೆಯೇ ರಾಜ್ಯ, ಜಿಲ್ಲಾ, ತಾಲ್ಲೂಕು, ಪಟ್ಟಣ ಪಂಚಾಯಿತಿ ಮಟ್ಟದಲ್ಲಿ ಸಾಕ್ಷರತೆಯನ್ನು ಗಮನಿಸಿದರೆ ತೀವ್ರ ವ್ಯತ್ಯಾಸವಿರುವುದು ತಿಳಿದು ಬರುತ್ತದೆ.

**೧.೨. ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ**

ಶಿಕ್ಷಣವು ಮಾನವ ಅಭಿವೃದ್ಧಿ ವಿಚಾರ ಪ್ರಣಾಳಿಕೆಯಲ್ಲಿ ಪ್ರಮುಖ ಸ್ಥಾನವನ್ನು ಪಡೆದಿದೆ. ಶಿಕ್ಷಣ ಎಲ್ಲಾ ಪ್ರದೇಶಗಳಲ್ಲಿ ಮತ್ತು ಎಲ್ಲಾ ಜನವರ್ಗಗಳಲ್ಲಿ ಸಮಾನವಾಗಿರುವುದಿಲ್ಲ. ಶಿಕ್ಷಣ ಅಥವಾ ಸಾಕ್ಷರತಾ ಪ್ರಮಾಣದಲ್ಲಿ ಸಹ ಪ್ರಾದೇಶಿಕ ಅಂತರ, ಅಸಮಾನತೆಗಳನ್ನು ಅನೇಕ ಅಧ್ಯಯನ ಗಳು ಗುರುತಿಸಿವೆ. ಇದೇ ರೀತಿ ಶಿಕ್ಷಣದಲ್ಲಿ ಪ್ರಾದೇಶಿಕ ಅಸಮಾನತೆಯ ಅಂತರಗಳು ತೀವ್ರವಾಗು ತ್ತವೆಯೋ ಅಥವಾ ಕುಗ್ಗುತ್ತಿವೆಯೋ ಎನ್ನುವುದನ್ನು ತಿಳಿಯಲು ಹಲವು ಅಧ್ಯಯನಗಳು ಪ್ರಯತ್ನಿಸಿವೆ. ಹಾಗೆಯೇ ಶಿಕ್ಷಣದ ಸಾಮಾಜಿಕ ಸ್ವರೂಪವನ್ನು ಹಿಡಿದಿಡುವ ಪ್ರಯತ್ನವನ್ನು ಕೆಲವು ಅಧ್ಯಯನಗಳು ಮಾಡಿವೆ. ಶಿಕ್ಷಣ, ಲಿಂಗ-ಸಂಬಂಧಿ ಆಯಾಮಗಳು, ಲಿಂಗ-ತಾರತಮ್ಯ ಇನ್ನು ಮುಂತಾದ ವಿಷಯಗಳನ್ನು ಕುರಿತು ನಡೆದಿರುವ ಅಧ್ಯಯನಗಳನ್ನು ಗುರುತಿಸಿವೆ. ನಮ್ಮ ಅಧ್ಯಯನದ ದೃಷ್ಟಿಯಿಂದ ಪ್ರಮುಖವಾದ ಅಧ್ಯಯನಗಳನ್ನು ಕಾಲಮಿತಿಯ ಒಳಗೆ ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದ್ದೇನೆ.

ಈ ಹಿನ್ನೆಲೆಯಲ್ಲಿ ನಮಗೆ ಪ್ರಮುಖವಾಗಿ ಕಂಡುಬರುವ ಅಧ್ಯಯನವೆಂದರೆ ಎಲಿಜಬೆತ್ ಎಂ. ಕಿಂಗ್ ಮತ್ತು ಎಂ. ಅನ್ನಿ ಹಿಲ್ಸ್ (೧೯೯೩) ರವರ ಮಹಿಳಾ ಶಿಕ್ಷಣ ಮತ್ತು ಅಭಿವೃದ್ಧಿ ಎಂಬುವುದರಲ್ಲಿ ಮಹಿಳೆಯರಿಗೆ ಶಿಕ್ಷಣವನ್ನು ಒದಗಿಸಿದರೆ ಯಾವ ರೀತಿ ಅಭಿವೃದ್ಧಿ ಸಾಧ್ಯವಾಗುತ್ತದೆ ಎಂಬುದನ್ನು ಗುರುತಿಸಿದ್ದಾರೆ. ಆರ್ಥಿಕ ಅಭಿವೃದ್ಧಿ ಎಂದರೆ ಆರ್ಥಿಕ ಪ್ರಗತಿ ಮತ್ತು ಜೀವನಮಟ್ಟ ಹೆಚ್ಚಳ ಎಂದಿದ್ದಾರೆ. ಮಹಿಳಾ ಶಿಕ್ಷಣದ ಮಟ್ಟ ಮತ್ತು ಶಿಕ್ಷಣದಲ್ಲಿನ ಲಿಂಗ-ಅಂತರಗಳು ಕುಟುಂಬದ ಯೋಗಕ್ಷೇಮ ಮತ್ತು ಆರ್ಥಿಕ ಬೆಳವಣಿಗೆಯ ಪ್ರಮುಖ ನಿರ್ಣಾಯಕ ಅಂಶಗಳಾಗಿವೆ. ಹೀಗಾಗಿ ಮಹಿಳಾ ಶಿಕ್ಷಣಕ್ಕೆ ಗಮನ ನೀಡದಿದ್ದರೆ ಅಭಿವೃದ್ಧಿ ವೆಚ್ಚ ಅಧಿಕವಾಗುವುದು. ಶಿಕ್ಷಣದಲ್ಲಿನ ಲಿಂಗ ಅಂತರವನ್ನು ನಿವಾರಿಸದಿದ್ದರೆ, ಸಾಮಾಜಿಕ ಚಲಕಗಳಲ್ಲಿ ಅಪೇಕ್ಷಿತ ಬೆಳವಣಿಗೆಗಳನ್ನು ಆರ್ಥಿಕ ಬೆಳವಣಿಗೆಯ ಉನ್ನತ ಮಟ್ಟಗಳಲ್ಲಷ್ಟೇ ಸಾಧಿಸಬಹುದು ಅಭಿವೃದ್ಧಿಯನ್ನಲ್ಲ ಎಂದಿದ್ದಾರೆ.

ರಾಮಚಂದ್ರನ್ ಅವರ (೧೯೯೭) "ಆನ್ ಕೇರಳ ಡೆವಲಪ್‌ಮೆಂಟ್ ಅಚೀವ್‌ಮೆಂಟ್ಸ್ ಇನ್ ಜೀನ್ ಡ್ರೇಜ್ ಆ್ಯಂಡ್ ಅಮಾರ್ತ್ಯಸೇನ್" (ಎಡಿಟ್ಸ್) ಇಂಡಿಯನ್ ಡೆವಲಪ್‌ಮೆಂಟ್ : ಸೆಲೆಕ್ಟ್ ರೀಜನಲ್ ಪ್ರಾಸ್‌ಪೆಕ್ಟೀವ್ಸ್ ಎಂಬ ಕೃತಿಯಲ್ಲಿ ಶಿಕ್ಷಣದ ಮಹತ್ವವನ್ನು ಕುರಿತು ಹೇಳಿದ್ದಾರೆ. ಶೈಕ್ಷಣಿಕ ಪ್ರಗತಿ ಮತ್ತು ಸಾಮಾಜಿಕ ಬದಲಾವಣೆಗಳ ನಡುವೆ ಅನೇಕ ಸಂಬಂಧವಿರುವುದನ್ನು ಇವರು ತಮ್ಮ ಅಧ್ಯಯನದಲ್ಲಿ ಕೇರಳದ ಉದಾಹರಣೆಗಳ ಜೊತೆಗೆ ದೃಢಪಡಿಸಿದ್ದಾರೆ. ವ್ಯಕ್ತಿಯ ಸ್ವ-ಪ್ರತಿಷ್ಠೆ, ಸ್ವ-ರಕ್ಷಣೆಗೆ, ಸಾಕ್ಷರತೆ ಮೂಲ ಸಾಧನ ಎಂದಿದ್ದಾರೆ. ಅಕ್ಷರ ಜ್ಞಾನವು ಸಂಪ್ರದಾಯ ಮತ್ತು ಜಾತಿ-

ಧರ್ಮ ಭೇದಗಳ ಸಂಕೋಲೆಗಳಿಂದ ಹೊರಬರಲು ನೆರವಾಗುತ್ತದೆ. ಸಮಾಜದಲ್ಲಿಯ ಸಾಂಪ್ರದಾಯಿಕ ನಂಬಿಕೆಗಳನ್ನು ಹೋಗಲಾಡಿಸಬೇಕಾದರೆ ಶಿಕ್ಷಣವು ಅತ್ಯಂತ ಪ್ರಮುಖ ಎಂದು ವಾದಿಸಿದ್ದಾರೆ.

ಅನಿತಾ ಕೆ. ಇವರು ೧೯೯೭ರಲ್ಲಿ ಮೈಸೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧವಾದ "ಎಜ್ಯುಕೇಷನಲ್ ಪ್ಲಾನಿಂಗ್ ಫಾರ್ ಸ್ಕೂಲ್ ಎಜ್ಯುಕೇಷನ್ : ಎ ಸ್ಟಡಿ ಫಾರ್ ತ್ರಿ ಡಿಸ್ಟ್ರಿಕ್ಟ್ಸ್ ಇನ್ ಕರ್ನಾಟಕ"ದಲ್ಲಿ ೭೦ ಮತ್ತು ೮೦ರ ದಶಕದಲ್ಲಿ ಉಂಟಾದ ಸಾಕ್ಷರತಾ ಬದಲಾವಣೆಯನ್ನು ವಿವರವಾಗಿ ಚರ್ಚೆಗೆ ಒಳಪಡಿಸಿದ್ದಾರೆ. ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಮಹಿಳೆಯರಲ್ಲಿ ಉಂಟಾಗಿರುವ ಬದಲಾವಣೆಯನ್ನು ಇವರು ತಮ್ಮ ಅಧ್ಯಯನದಲ್ಲಿ ಗುರುತಿಸಿದ್ದಾರೆ. ಶಾಲಾಭಿವೃದ್ಧಿ ಯೋಜನೆಗಳು ಹೇಗೆ ಜಾರಿಗೆ ಬಂದಿವೆ ಎಂಬುದನ್ನು ವಿವರಿಸಿದ್ದಾರೆ.

ಪ್ರೋಬ್ (೧೯೯೮) ಅವರ "ಪಬ್ಲಿಕ್ ರಿಪೋರ್ಟ್ ಆನ್ ಬೇಸಿಕ್ ಎಜ್ಯುಕೇಷನ್" ಎಂಬ ವರದಿಯಲ್ಲಿ ಅಕ್ಷರ ಕಲಿಯದ ಪಾಲಕರು ಶಿಕ್ಷಣಕ್ಕೆ ಹೆಚ್ಚಿನ ಮಹತ್ವ ಕೊಡುವುದಿಲ್ಲವೆಂದು ಸಾಮಾನ್ಯ ನಂಬಿಕೆ ಇದೆ. ಮಾಧ್ಯಮದಲ್ಲೂ ಈ ಮಾತೇ ಇದೆ. ಇದಕ್ಕೆ ವಿರುದ್ಧವಾಗಿ ಪಾಲಕರು ತಮ್ಮ ಮಕ್ಕಳ ವಿದ್ಯಾಭ್ಯಾಸದ ಬಗೆಗೆ ವಿಶೇಷ ಆಸಕ್ತಿ ವಹಿಸುತ್ತಾರೆ ಎಂಬುದು ಪ್ರೋಬ್ ಅಧ್ಯಯನ ದಿಂದ ಸಾಬೀತಾಗಿದೆ. ವಾಸ್ತವವಾಗಿ ಶೇಕಡ ೮೦ರಷ್ಟು ಪಾಲಕರು ಎಲ್ಲಾ ಮಕ್ಕಳಿಗೆ ಶಿಕ್ಷಣ ಕಡ್ಡಾಯ ವಾಗಿರಬೇಕೆಂದು ಅಭಿಪ್ರಾಯಪಟ್ಟಿದ್ದಾರೆ. ಶೇಕಡ ೯೮ರಷ್ಟು ಪಾಲಕರು ಗಂಡು ಮಕ್ಕಳು ಶಾಲೆ ಕಲಿಯಲು, ಶೇಕಡ ೮೯ರಷ್ಟು ಪಾಲಕರು ಹೆಣ್ಣುಮಕ್ಕಳು ಶಾಲೆ ಕಲಿಯಲು ಆಧ್ಯತೆ ನೀಡುವುದಾಗಿದೆ. ಆದರೆ ಪಾಲಕರಲ್ಲಿ ಕೆಲವೇ ಕೆಲವರು ಮಾತ್ರ ಹೆಣ್ಣುಮಕ್ಕಳಿಗೆ ವಿದ್ಯಾಭ್ಯಾಸ ಬೇಕಿಲ್ಲವೆಂದಿದ್ದಾರೆ. ಇನ್ನು ಕೆಲವು ಪೋಷಕರು ಶಿಕ್ಷಣವಿದ್ದರೆ ಮಾತ್ರ ಸಮಾಜದಲ್ಲಿ ಮುಂದುವರಿಯಲು ಸಾಧ್ಯ ಎಂದು ಹೇಳಿರುವುದನ್ನು ಪ್ರೋಬ್ ಅಧ್ಯಯನ ತಂಡ ಗುರುತಿಸಿದೆ.

ಥೇಕೆಡತ್ ಕೆ.ಕೆ. (೧೯೯೮) ಅವರ "ಶತಮಾನದ ಅಂಚಿನಲ್ಲಿ ಶಿಕ್ಷಣ" ಎನ್ನುವ ಗ್ರಂಥದಲ್ಲಿ ಶಾಲೆಗೆ ಹೋಗುವ ಮಕ್ಕಳ ಕುಟುಂಬದ ಆರ್ಥಿಕ ಸ್ಥಿತಿಗೂ ಮತ್ತು ಶೈಕ್ಷಣಿಕ ಹಿಂದುಳಿದಿರುವಿಕೆಗೂ ಅನೋನ್ಯ ಸಂಬಂಧವಿದೆ ಎಂದು ಥೇಕೆಡತ್ ಗುರುತಿಸಿದ್ದಾರೆ. ಮುಂಬೈನ ಮಹಾನಗರ ಪಾಲಿಕೆ ಶಾಲೆ ಗಳಿಗೆ ಹೋಗುವ ಮಕ್ಕಳ ಅಪೌಷ್ಟಿಕತೆ ಹಾಗೂ ಅದಕ್ಕೆ ಸಂಬಂಧಿಸಿದ ಕಾಯಿಲೆಗಳ ಕೆಲವು ಮಾಹಿತಿ ಗಳನ್ನು ವಿವರಿಸಿದ್ದಾರೆ. ಪ್ರಾಥಮಿಕ ಶಾಲೆಗಳಿಗೆ ಹೋಗುವ ಶೇಕಡ ೩.೦೫ ಲಕ್ಷ ವಿದ್ಯಾರ್ಥಿಗಳನ್ನು ಪರೀಕ್ಷಿಸಿದ ವೈದ್ಯರು ಅಪೌಷ್ಟಿಕತೆ ಮತ್ತು ನಿರ್ಲಕ್ಷಕ್ಕೆ ಸಂಬಂಧಿಸಿದಂತೆ ಸುಮಾರು ಮಕ್ಕಳು ಅನಾರೋಗ್ಯಕ್ಕೆ ಒಳಗಾಗಿದ್ದಾರೆ. ಇದರಲ್ಲಿ ಶೇಕಡ ೨೬.೭೬ರಷ್ಟು ಮಕ್ಕಳು ಅನ್ನಾಂಗಗಳ ಕೊರತೆ ಇದ್ದರೆ ಶೇಕಡ ೫ರಷ್ಟು ಮಕ್ಕಳು ರಕ್ತಹೀನತೆಯಿಂದ ಬಳಲುತ್ತಿದ್ದಾರೆ, ಶೇಕಡ ೪೯ರಷ್ಟು ಮಕ್ಕಳಲ್ಲಿ ಹಲ್ಲಿನ ದೋಷ ತೊಂದರೆ ಕಂಡುಬಂದಿವೆ. ಈ ಮಕ್ಕಳನ್ನು ಏಪ್ರಿಲ್ ೧೯೯೬ ಮತ್ತು ಮಾರ್ಚ್ ೧೯೯೭ರ ನಡುವೆ 'ಬೃಹತ್ ಮುಂಬೈ ಮುನಿಸಿಪಲ್ ಕಾರ್ಪೋರೇಷನ್' (BMC) ವೈದ್ಯಕೀಯ

ಅಧಿಕಾರಿಗಳು ಪರೀಕ್ಷಿಸಿದ್ದರು ಎಂದು ಹೇಳಿದ್ದಾರೆ. ಅಧ್ಯಯನಕಾರರು ವಿಶೇಷವಾಗಿ ಬಡತನಕ್ಕೂ ಮಕ್ಕಳ ಆರೋಗ್ಯಕ್ಕೂ, ಮಕ್ಕಳ ಶಾಲಾ ಭಾಗವಹಿಸುವಿಕೆಗೂ ಯಾವ ರೀತಿ ಸಹ-ಸಂಬಂಧವಿದೆ ಎಂಬುದನ್ನು ಬಿಡಿಸಿ ಹೇಳಿದ್ದಾರೆ.

ಅನಿತಾ ಬಿ.ಕೆ. (೨೦೦೦)ರಲ್ಲಿ "ವಿಲೇಜ್ ಕಾಸ್ಟ್ ಅಂಡ್ ಎಜ್ಯುಕೇಷನ್" ಎನ್ನುವ ಕೃತಿಯಲ್ಲಿ ಸಮಾರೋಪವೂ ಸೇರಿದಂತೆ ಒಟ್ಟು ಎಂಟು ಅಧ್ಯಾಯಗಳಿವೆ. ಈ ಗ್ರಂಥವೂ ಕ್ಷೇತ್ರ ಧಾರಿತವಾದ ಮಾಹಿತಿ ಒಳಗೊಂಡು ವಿಶ್ಲೇಷಣೆಯ ಮೇಲೆ ರೂಪುಗೊಂಡಿದೆ. ಅಧ್ಯಯನಕ್ಕೆ ತುಮಕೂರು ಜಿಲ್ಲೆಯನ್ನು ಸೀಮಿತಗೊಳಿಸಿಕೊಂಡಿದ್ದಾರೆ. ಇವರು ತಮ್ಮ ಅಧ್ಯಯನದಲ್ಲಿ ನಗರ ಮತ್ತು ಗ್ರಾಮೀಣ ಪ್ರದೇಶಗಳ ವ್ಯತ್ಯಾಸವನ್ನು ಗುರುತಿಸುವ ಪ್ರಯತ್ನವನ್ನು ಮಾಡಿದ್ದಾರೆ. ಆ ಪ್ರಯತ್ನವನ್ನು ಶೈಕ್ಷಣಿಕ ಸಮಾಜಶಾಸ್ತ್ರೀಯ ದೃಷ್ಟಿಕೋನದಿಂದ ವಿವರಣೆ ನೀಡಿದ್ದಾರೆ. ನಿರ್ದಿಷ್ಟವಾಗಿ ಸಾಮಾಜಿಕ, ಸಾಂಸ್ಕೃತಿಕ ಪರಿಸರದ ಪ್ರಕ್ರಿಯೆಗಳು ಹಾಗೂ ಶಾಲೆ ನೆಲೆಗೊಂಡಿರುವ ಸ್ಥಳೀಯ ಸಾಮಾಜಿಕ ರಚನೆಯಲ್ಲಿ ಪ್ರತಿಬಿಂಬಿಸುತ್ತದೆ ಎಂಬುದನ್ನು ಹಿಡಿದಿಡಲು ಪ್ರಯತ್ನಿಸಿದ್ದಾರೆ.

ಇನ್ನು ಮೂಲಭೂತ ಸೌಲಭ್ಯಗಳು, ಮಕ್ಕಳ ಆರೋಗ್ಯ ಸ್ಥಿತಿ, ಶಿಕ್ಷಕರ ಬೋಧನಾ ವಿಧಾನ ಇತ್ಯಾದಿ ಅಂಶಗಳು ಮಕ್ಕಳ ಕಲಿಕೆಯ ಜೊತೆ ಜೊತೆಗೆ, ಶಿಕ್ಷಕರ ಬೋಧನಾ ಸಾಮರ್ಥ್ಯವನ್ನು ನಿರ್ಧರಿಸುವ ಅಂಶಗಳಾಗಿವೆ ಎಂಬುದನ್ನು ಸ್ಪಷ್ಟಪಡಿಸುತ್ತಾರೆ. ಕರ್ನಾಟಕದಲ್ಲಿನ ಸಾಕ್ಷರತೆಯನ್ನು ಕೇರಳ ರಾಜ್ಯದ ಸಾಕ್ಷರತೆಯ ಜೊತೆಗೆ ಹೋಲಿಸುತ್ತಾ, ಕೇರಳ ರಾಜ್ಯವು ಯಾವ ಯಾವ ಯೋಜನೆ ಗಳನ್ನು ಅಳವಡಿಸಿಕೊಂಡಿದೆ ಎಂಬುದನ್ನು ವಿವರಿಸುವ ಪ್ರಯತ್ನವನ್ನು ಅಧ್ಯಯನದಲ್ಲಿ ಮಾಡಿದ್ದಾರೆ. ಗ್ರಾಮೀಣ ಪ್ರದೇಶಗಳಲ್ಲಿ ಶಿಕ್ಷಣ ಏಕೆ ಹಿಂದುಳಿದಿದೆ? ಮತ್ತು ಶಾಲೆಗಳಲ್ಲಿನ ಕಲಿಕಾ ಗುಣಮಟ್ಟದ ಬಗ್ಗೆ ಸಂಕ್ಷಿಪ್ತವಾಗಿ ವಿವರಿಸಿದ್ದಾರೆ. ಒಟ್ಟಾರೆಯಾಗಿ ಈ ಅಧ್ಯಯನದಲ್ಲಿ ಮೂಲಭೂತ ಸೌಲಭ್ಯಗಳು, ಆದಾಯ, ಜಾತಿ, ಸಾಮಾಜಿಕ ಮತ್ತು ಆರ್ಥಿಕ ಅಂಶಗಳು ಶೈಕ್ಷಣಿಕ ಹಿಂದುಳಿಯುವಿಕೆಗೆ ಪ್ರಮುಖ ವಾದ ಕಾರಣಗಳಾಗಿವೆ ಎಂಬ ಅಭಿಪ್ರಾಯವನ್ನು ಅಧ್ಯಯನಕಾರರು ವ್ಯಕ್ತಪಡಿಸಿದ್ದಾರೆ.

ರೇಖಾ ಕೌಲ್ (೨೦೦೧) ಅವರ "ಅಸೆಸ್ಸಿಂಗ್ ಪ್ರೈಮರಿ ಎಜ್ಯುಕೇಷನ್ ಗೋಯಿಂಗ್ ಬಿಯಾಂಡ್ ದಿ ಕ್ಲಾಸ್ ರೂಂ" ಎನ್ನುವ ಲೇಖನದಲ್ಲಿ ವಿವಿಧ ಆದಾಯದ ಗುಂಪುಗಳನ್ನು ತುಲನಾತ್ಮಕವಾಗಿ ವಿಶ್ಲೇಷಿಸಿದ್ದಾರೆ. ಇವರ ಲೇಖನದಲ್ಲಿ ಪ್ರಮುಖವಾಗಿ ಕಂಡುಬರುವ ಅಂಶವೆಂದರೆ ಬಡತನದ ರೇಖೆಗಿಂತ ಕೆಳಗಿರುವ ಕುಟುಂಬಗಳಲ್ಲಿ ಹೆಣ್ಣುಮಕ್ಕಳ ಶಿಕ್ಷಣಕ್ಕೆ ಕೊನೆಯ ಆದ್ಯತೆ ನೀಡುತ್ತಿರುವುದನ್ನು ಇವರು ಗುರುತಿಸಿದ್ದಾರೆ. ತಳಜಾತಿ ಹಾಗೂ ಅಲ್ಪಸಂಖ್ಯಾತ ಸಮುದಾಯಗಳಲ್ಲಿ ಹೆಣ್ಣುಮಕ್ಕಳ ಶಿಕ್ಷಣಕ್ಕೆ ಹೆಚ್ಚಿನ ಅವಕಾಶವಿಲ್ಲ ಎಂಬುದನ್ನು ಇವರು ಸ್ಪಷ್ಟಪಡಿಸಿದ್ದಾರೆ.

ರೇಖಾ ವಾಜೀರ್ (೨೦೦೧) ಅವರ "ದಿ ಜೆಂಡರ್ ಗ್ಯಾಪ್ ಇನ್ ಬೇಸಿಕ್ ಎಜ್ಯುಕೇಷನ್, ಎನ್.ಜಿ.ಓ. ಆಸ್ ಚೇಂಜ್ ಏಜನ್ಸಿ" ಎನ್ನುವ ಪುಸ್ತಕದಲ್ಲಿ ಹೆಣ್ಣುಮಕ್ಕಳ ಶಿಕ್ಷಣದ ಅಭಿವೃದ್ಧಿ

ಕುರಿತು ಸರ್ಕಾರೇತರ ಸಂಸ್ಥೆಗಳು ಯಾವ ಬಗೆಯ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕೆಂಬುದನ್ನು ತಿಳಿಸಿದ್ದಾರೆ. ಪಠ್ಯಕ್ರಮ ರೂಪಿಸುವಲ್ಲಿ ಶಾಲಾ ದಾಖಲಾತಿ, ಹಾಜರಾತಿ ಹೆಚ್ಚಿಸುವಲ್ಲಿ, ಮಧ್ಯದಲ್ಲಿ ಶಾಲೆ ಬಿಡುವ ಹೆಣ್ಣುಮಕ್ಕಳನ್ನು ಮತ್ತೆ ದಾಖಲಿಸುವುದು ಹಾಗೂ ಶಿಕ್ಷಕರ ತರಬೇತಿಗಳಲ್ಲಿ, ಶಿಕ್ಷಣದ ಪ್ರಾಮುಖ್ಯತೆಯನ್ನು ಜನರಿಗೆ ತಿಳಿಸುವಲ್ಲಿ, ಶಾಲಾ ಆಡಳಿತದಲ್ಲಿ ಸಮುದಾಯದ ಭಾಗವಹಿಸುವಿಕೆಯನ್ನು ಪರಿಣಾಮಕಾರಿಗೊಳಿಸುವ ನಿಟ್ಟಿನಲ್ಲಿ ಸರ್ಕಾರೇತರ ಸಂಸ್ಥೆಗಳು ಹೆಚ್ಚು ಪರಿಣಾಮಕಾರಿಯಾಗಿ ಭಾಗವಹಿಸ ಬೇಕಾದ ಅಗತ್ಯವಿದೆ ಎಂಬುದನ್ನು ಅಧ್ಯಯನಕಾರರು ಚರ್ಚಿಸಿದ್ದಾರೆ.

ಉಷಾ ರಾಮ್‌ಕುಮಾರ್ (೨೦೦೨) ಅವರ "ವುಮೆನ್ಸ್ ಎಜ್ಯುಕೇಷನ್ ಇನ್ ವೆಸ್ಟ್ರನ್ ಗಾಟ್ಸ್ ರೀಜನ್ಸ್ ಆಫ್ ಕರ್ನಾಟಕ" ಎಂಬ ಲೇಖನದಲ್ಲಿ ಸರ್ಕಾರವು ಹೆಣ್ಣುಮಕ್ಕಳ ಶಿಕ್ಷಣಕ್ಕಾಗಿ ನೀಡಿದ ಉತ್ತೇಜನಗಳು ಕೂಡ ಅವರನ್ನು ಶಾಲೆಗೆ ಕರೆತರಲು ಮತ್ತು ಶಿಕ್ಷಣ ಮುಂದುವರಿಸಲು ನೆರವಾಗಿದೆ. ಸಾಕ್ಷರತೆ ಆಂದೋಲನಗಳು, ಮಹಿಳಾ ಸಬಲೀಕರಣಕ್ಕಾಗಿ ನಡೆಸಿದ ಪ್ರಯತ್ನಗಳು, ಅಧ್ಯಯನ ನಡೆಸಿದ ಪ್ರದೇಶದಲ್ಲಿನ ಮಹಿಳೆಯರ ಸಾಕ್ಷರತೆ ಹೆಚ್ಚಿಸಲು ಸಹಾಯವಾಗಿದೆ. ಆದರೂ ಹೆಣ್ಣು ಮಕ್ಕಳಿಗೆ ವಿಸ್ತರಿಸಲಾದ ಶಾಲಾ ಸೌಲಭ್ಯಗಳಲ್ಲಿ ಮತ್ತು ಶಾಲಾ ಶಿಕ್ಷಣದಲ್ಲಿ ಪಾಲ್ಗೊಳ್ಳುವ ಪ್ರಮಾಣದಲ್ಲಿ ಪ್ರಾದೇಶಿಕ ಅಂತರವು ಗಣನೀಯವಾಗಿದೆ ಎಂದಿದ್ದಾರೆ.

ಅಂಜು ಗ್ರೋವರ್ (೨೦೦೨) ಅವರು "ಭಾರತದಲ್ಲಿ ಲಿಂಗ-ಸಮಾನತೆ" ಎನ್ನುವ ಲೇಖನದಲ್ಲಿ ಪ್ರಾಥಮಿಕ ಶಿಕ್ಷಣದಲ್ಲಿ ಲಿಂಗ-ಸಮಾನತೆ ತರುವ ಉದ್ದೇಶದಿಂದ ಸರ್ಕಾರ ಹಲವಾರು ಕಾರ್ಯಕ್ರಮಗಳನ್ನು ಹಾಕಿಕೊಂಡರೂ ಸಹ ಅದು ವಿಫಲವಾಗಿದೆ. ಈ ಕಾರ್ಯಕ್ರಮಗಳು ಅಥವಾ ಯೋಜನೆಗಳು ಸಾಧಿಸ ಬೇಕೆಂದು ಇಟ್ಟುಕೊಂಡಂತಹ ಗುರಿಯನ್ನು ತಲುಪಿಲ್ಲ. ಇಂತಹ ಯೋಜನೆಗಳು ವಿನ್ಯಾಸ ಹಾಗೂ ಅನುಷ್ಠಾನದಲ್ಲಿ ಫಲಾನುಭವಿಗಳ ಕೊರತೆಯಿಂದ ಯಶಸ್ವಿಗೊಳಿಸುವಲ್ಲಿ ವಿಫಲವಾಗಿವೆ. ಇನ್ನು ಅನೇಕ ಯೋಜನೆಗಳು ಅನುಷ್ಠಾನದಲ್ಲಿನ ಲೋಪದೋಷಗಳಿಂದ ಯಶಸ್ವಿಯಾಗಿಲ್ಲ ಎಂದು ತಿಳಿಸಿ ದ್ದಾರೆ. ಇದಕ್ಕೆ ಹೊಸ ಹೊಸ ಯೋಜನೆಗಳನ್ನು ರೂಪಿಸಿ, ಅನುಷ್ಠಾನಕ್ಕೆ ತರುವ ಜೊತೆಯಲ್ಲಿಯೇ ಮಹಿಳೆಯರ/ಹೆಣ್ಣುಮಕ್ಕಳ ಶಾಲಾ ಭಾಗವಹಿಸುವಿಕೆಯನ್ನು ಹೆಚ್ಚು ಮಾಡಬೇಕು. ಜೊತೆಗೆ ಶಾಲಾ ಹಂತದಲ್ಲಿಯೇ ಲಿಂಗ ಅಸಮಾನತೆಯಿಂದ ಉಂಟಾಗುವ ಶೋಷಣೆಯ ವಿವಿಧ ಮುಖಗಳನ್ನು ತಿಳಿಸಬೇಕು. ಆ ಮೂಲಕ ಮಹಿಳಾಭಿವೃದ್ಧಿಗಾಗಿ ರೂಪಿಸಿ, ಆಚರಣೆಗೆ ತರುತ್ತಿರುವ ಕಾರ್ಯಕ್ರಮಗಳನ್ನು ಬಳಸಿಕೊಳ್ಳುವ ನಿಟ್ಟಿನಲ್ಲಿ ಮಹಿಳೆಯರನ್ನು ಜಾಗೃತಿ ಮೂಡಿಸುವ ಅಗತ್ಯ ಒತ್ತಿಹೇಳಿದ್ದಾರೆ.

ಆರ್. ಇಂದಿರಾ (೨೦೦೨) ಅವರು "ಮಹಿಳೆ, ಸಮಾಜ ಮತ್ತು ಸಂಸ್ಕೃತಿ" ಎಂಬ ಗ್ರಂಥದಲ್ಲಿ ಒಂಬತ್ತು ಅಧ್ಯಾಯಗಳಿದ್ದು, ಅದರಲ್ಲಿ ಪ್ರತಿಯೊಂದು ಅಧ್ಯಾಯವೂ ಮಹಿಳೆಯನ್ನು ಕುರಿತು ವಿಶ್ಲೇಷಿಸಲಾಗಿದೆ. ಅಧ್ಯಾಯ ಐದರಲ್ಲಿ "ಶಿಕ್ಷಣ ವ್ಯವಸ್ಥೆ ಮತ್ತು ಮಹಿಳೆ" ಎಂಬುದರಲ್ಲಿ ಸಂವಿಧಾನ ಸರ್ವರಿಗೂ ಸಮಾನತೆಯನ್ನು ನೀಡಿ ಲಿಂಗಭೇದವನ್ನು ವಿಧಿಸಿ ನಿವಾರಿಸಿದರೂ ವಾಸ್ತವ್ಯದಲ್ಲಿ

ಮಹಿಳಾ ಶಿಕ್ಷಣ ಅಂದುಕೊಂಡಷ್ಟು ಪ್ರಗತಿಯನ್ನು ಸಾಧಿಸಿಲ್ಲ. ಸಮಾಜದಲ್ಲಿ ಶಿಕ್ಷಣ ಅವಕಾಶಗಳ ಬಳಕೆಯಲ್ಲಿ ಲಿಂಗ-ತಾರತಮ್ಯ ಎಷ್ಟರಮಟ್ಟಿಗೆ ಕಾರ್ಯ ಪ್ರವೃತ್ತವಾಗಿದೆ ಎಂಬುದನ್ನು ವಿವರಿಸುತ್ತಾ ಹಿಂದೆಂದಿಗಿಂತ ಇಂದು ಶಿಕ್ಷಣದ ಎಲ್ಲ ಮಟ್ಟಗಳಲ್ಲೂ ಮಹಿಳೆಯರ ದಾಖಲಾತಿಯ ಪ್ರಮಾಣದಲ್ಲಿ ಹೆಚ್ಚಳ ಉಂಟಾಗಿದೆಯಾದರೂ, ದೇಶದ ಅನೇಕ ಭಾಗಗಳಲ್ಲಿ ಮಹಿಳಾ ಅನಕ್ಷರತೆಯ ಪ್ರಮಾಣ ದಿಗ್ಭ್ರಮೆ ಹುಟ್ಟಿಸುವಷ್ಟು ಕೆಳಮಟ್ಟದಲ್ಲಿದೆ. ಕಡ್ಡಾಯ ಹಾಗೂ ಉಚಿತ ಪ್ರಾಥಮಿಕ ಶಿಕ್ಷಣವೆನ್ನುವುದು ಅನೇಕ ಸಂದರ್ಭಗಳಲ್ಲಿ ಘೋಷಣೆಯ ಮಟ್ಟದಲ್ಲೇ ಉಳಿದಿರುವುದು ಶೋಚನೀಯ ಎಂದಿದ್ದಾರೆ. ಈ ಶೋಚನೀಯ ಸ್ಥಿತಿಗೆ ಸಾಮಾಜಿಕ ಸಂರಚನೆಯೊಳಗೆ ಇರುವ ಮಹಿಳಾ ವಿರೋಧಿ ಮನೋಪ್ರವೃತ್ತಿ ಆಚರಣೆಗಳನ್ನು ಸ್ಥಳೀಯ ಮಟ್ಟದಲ್ಲಿಯೇ ಅರ್ಥಮಾಡಿಕೊಂಡು, ಆ ಹಂತದಲ್ಲಿಯೇ ಮಹಿಳಾ ಜಾಗೃತಿಯನ್ನು ಉಂಟುಮಾಡುವಲ್ಲಿ ಬಹುತೇಕ ಕಾರ್ಯಕ್ರಮಗಳು ವಿಫಲವಾಗಿವೆ. ಈ ಬಗೆಯ ಕಾರ್ಯಕ್ರಮಗಳನ್ನು ರೂಪಿಸುವ ಯೋಜನಾಕಾರರು ಹೊಂದಿರುವ ಟಾಪ್ ಡೌನ್ ಅಪ್ರೋಚ್ ಮನೋಪ್ರವೃತ್ತಿ ಇದಕ್ಕೆ ಪ್ರಮುಖ ಕಾರಣ ಎಂದಿದ್ದಾರೆ. ಹೀಗಾಗಿ ಮಹಿಳಾ ಸಬಲೀಕರಣವನ್ನು ಶೈಕ್ಷಣಿಕ ನೆಲೆಯಲ್ಲಿ ಮಾಡುವಾಗ ಸ್ಥಳೀಯ ಸಮಾಜಿಕ ಸಂರಚನೆಯನ್ನು ಅರ್ಥಮಾಡಿಕೊಳ್ಳುವ ಅಗತ್ಯವನ್ನು ಲೇಖಕರು ಬಹಳ ಗಂಭೀರವಾಗಿ ವಿಶ್ಲೇಷಿಸಿದ್ದಾರೆ.

ಸಾಕ್ಷರತೆ ಹಾಗೂ ಶಾಲಾ ದಾಖಲಾತಿಗಳ ಪ್ರಮಾಣದಲ್ಲಿ ಹೆಚ್ಚಳ ಉಂಟಾಗಿರುವುದು ನಿಜ. ಆದರೆ ಈ ಹೆಚ್ಚಳ ಭಾರತದ ವಿವಿಧ ಭಾಗಗಳಲ್ಲಿ ಸಮಾನವಾಗಿ ಹಂಚಿಕೆಯಾಗಿಲ್ಲ. ಕೇರಳ ರಾಜ್ಯ ದಲ್ಲಿ ಅತಿ ಹೆಚ್ಚಿನ (ಶೇಕಡ ೮೬.೯೩) ಮಹಿಳಾ ಸಾಕ್ಷರತೆಯಿದ್ದರೆ, ರಾಜಾಸ್ಥಾನದಲ್ಲಿ ಅತ್ಯಂತ ಕಡಿಮೆ (ಶೇಕಡ ೨೦.೮೪) ಮಟ್ಟದ ಮಹಿಳಾ ಸಾಕ್ಷರತೆಯನ್ನು ನಾವು ಕಾಣಬಹುದು. ದೇಶದಲ್ಲಿಯೇ ಮಹಿಳಾ ಜನಸಂಖ್ಯೆಯನ್ನು ಅಧಿಕ ಸಂಖ್ಯೆಯಲ್ಲಿ ಹೊಂದಿರುವ ರಾಜ್ಯಗಳಾದ ಉತ್ತರ ಪ್ರದೇಶ, ಬಿಹಾರ, ರಾಜಾಸ್ಥಾನ ಮುಂತಾದ ರಾಜ್ಯಗಳಲ್ಲೇ ಮಹಿಳಾ ಸಾಕ್ಷರತೆಯ ಪ್ರಮಾಣವೂ ಅತ್ಯಂತ ಕೆಳಮಟ್ಟದಲ್ಲಿರುವುದು ವಿಷಾದನೀಯ ಎಂದಿದ್ದಾರೆ. ಸ್ತ್ರೀ ಸಾಕ್ಷರತೆಯ ಪ್ರಮಾಣದಲ್ಲಿ ರಾಜ್ಯವಾರು ವ್ಯತ್ಯಾಸಗಳಿರುವುದಷ್ಟೇ ಅಲ್ಲ, ಗ್ರಾಮ-ನಗರಗಳ ನಡುವೆಯ ಅಂತರ ವರ್ಗ, ಜಾತಿ, ಧರ್ಮ, ಕೌಟುಂಬಿಕ ರಚನೆಯ ಹಿನ್ನಲೆಯಲ್ಲಿ ಶೈಕ್ಷಣಿಕ ಅಭಿವೃದ್ಧಿ ಹೊಂದಿರುವ ಮತ್ತು ಹೊಂದದೇ ಇರುವವರ ಅಂತರ ದಿನದಿಂದ ದಿನಕ್ಕೆ ಹೆಚ್ಚುತ್ತಲೇ ಇದೆ ಎನ್ನುವ ಆತಂಕವನ್ನು ಆರ್. ಇಂದಿರಾ ಅವರು ವ್ಯಕ್ತಪಡಿಸಿದ್ದಾರೆ. ಸ್ಥಳೀಯ ಸಾಂಸ್ಕೃತಿಕ ದೃಷ್ಟಿಯಿಂದ ನೋಡಿದರೆ ಈ ವ್ಯತ್ಯಾಸ ಮತ್ತಷ್ಟು ಸ್ಪಷ್ಟವಾಗಿ ಎದ್ದುಕಾಣುತ್ತದೆ ಎಂದು ತಿಳಿಸಿದ್ದಾರೆ.

ಕುರುಹುರಿ ವೆಂಕಟ ಜಗನ್ನಾಥ್‌ರಾವ್ (೨೦೦೨) ಅವರು ಆಂಧ್ರ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುವ ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ "ಎನ್‌ರೋಲ್‌ಮೆಂಟ್ ಅಂಡ್ ಡ್ರಾಪೌಟ್

ಇನ್ ಪ್ರೈಮರಿ ಎಜ್ಯುಕೇಷನ್ ಆಫ್ ಟ್ರೈಬಲ್ಸ್" (ಎ ಕಂಪ್ಯಾರಿಟಿವ್ ಸ್ಟಡಿ ಆಫ್ ಸಬ್ ಪ್ಲ್ಯಾನ್ ಅಂಡ್ ನಾನ್ ಸಬ್‌ಪ್ಲಾನ್ ಏರಿಯಾಸ್ ಇನ್ ವಿಜಯನಗರ ಡಿಸ್ಟ್ರಿಕ್ಟ್) ಈ ಪ್ರಬಂಧದಲ್ಲಿ ಬುಡಕಟ್ಟು ಸಮುದಾಯದಲ್ಲಿ ಮಕ್ಕಳು ಶಾಲೆಗೆ ದಾಖಲಾಗುತ್ತಿಲ್ಲ. ಮಕ್ಕಳು ಶಾಲೆಗೆ ದಾಖಲಾದರೂ ಸಹ ಮಧ್ಯದಲ್ಲಿ ಶಾಲೆ ಬಿಡುವವರಲ್ಲಿ ಹೆಣ್ಣುಮಕ್ಕಳ ಸಂಖ್ಯೆ ಹೆಚ್ಚಾಗಿದೆ. ಬುಡಕಟ್ಟು ಸಮುದಾಯದ ಮಕ್ಕಳ ಶೈಕ್ಷಣಿಕ ಪ್ರಗತಿಗಾಗಿ (ಅಭಿವೃದ್ಧಿ) ಸರ್ಕಾರವು ಪಂಚವಾರ್ಷಿಕ ಯೋಜನೆಗಳಲ್ಲಿ ಹಲವಾರು ಕಾರ್ಯಕ್ರಮಗಳನ್ನು ಜಾರಿಗೆ ತರಲಾಯಿತು. ಉದಾಹರಣೆಗೆ ಉಚಿತ ಶಿಕ್ಷಣ, ಸ್ಥಳೀಯವಾಗಿ ವಸತಿ ಶಾಲೆಗಳನ್ನು ತೆರೆಯುವುದು ಇತ್ಯಾದಿಗಳು. ಆದರೂ ಸಹ ಶಾಲಾ ದಾಖಲಾತಿ ಮತ್ತು ಹಾಜರಾತಿಯಲ್ಲಿ ಹೆಣ್ಣುಮಕ್ಕಳ ಶಿಕ್ಷಣದ ಪ್ರಮಾಣ ಗಂಡು ಮಕ್ಕಳ ಶಿಕ್ಷಣಕ್ಕೆ ಹೋಲಿಸಿದರೆ ಇಳಿಮುಖವಾಗಿದೆ. ಇದಕ್ಕೆ ಕಾರಣ ಅವರ ಅನಕ್ಷರತೆ, ಬಡತನ, ಮತ್ತು ಸಾಮಾಜಿಕ ಪರಿಸ್ಥಿತಿ ಕಾರಣವಾಗಿದೆ ಎಂದು ವಾದಿಸಿದ್ದಾರೆ.

ಟಿ.ಆರ್. ಚಂದ್ರಶೇಖರ್ (೨೦೦೩) ಅವರು "ಕರ್ನಾಟಕ ಅಭಿವೃದ್ಧಿಯ ಸಾಮಾಜಿಕ ನೆಲೆಗಳು" ಎಂಬ ಕೃತಿಯಲ್ಲಿ ಮೂರು ಭಾಗಗಳಿವೆ. ಇದರಲ್ಲಿ ಲೇಖಕರು ಅಭಿವೃದ್ಧಿಯನ್ನು ಸಾಮಾಜಿಕ ನೆಲೆಯಲ್ಲಿ ಅನಾವರಣಗೊಳಿಸಲು ಪ್ರಯತ್ನಿಸಿದ್ದಾರೆ. ಅಭಿವೃದ್ಧಿಗೆ ಸಂಬಂಧಿಸಿದಂತೆ ಕರ್ನಾಟಕದ ಸಾಧನೆಗಳನ್ನು ಭಿನ್ನ ರೀತಿಯಲ್ಲಿ ವಿವರಿಸುತ್ತಾ, 'ಹಿಂದುಳಿದ ಜಿಲ್ಲೆಗಳಲ್ಲಿ ಶಿಕ್ಷಣ ಕಾಯಕಲ್ಪ' ಎಂಬ ಅಧ್ಯಾಯದಲ್ಲಿ ಬಿಜಾಪುರ, ಬಾಗಲಕೋಟೆ, ಬಳ್ಳಾರಿ, ಬೀದರ್, ಗುಲ್ಬರ್ಗ, ರಾಯಚೂರು ಮತ್ತು ಕೊಪ್ಪಳ ಈ ಜಿಲ್ಲೆಗಳನ್ನು ಅತ್ಯಂತ ಹಿಂದುಳಿದ ಜಿಲ್ಲೆಗಳೆಂದು ಗುರುತಿಸಲಾಗಿದೆ. ಇದನ್ನು ಮಾನವ ಅಭಿವೃದ್ಧಿ ವರದಿ ಮತ್ತು ಜನಗಣತಿ ವರದಿ ಸ್ಪಷ್ಟಪಡಿಸಿವೆ. ವರಮಾನ ಸಾಕ್ಷರತೆಯ ನೆಲೆಯಿಂದ ನೋಡಿದರೆ, ಸದರಿ ಏಳು ಜಿಲ್ಲೆಗಳ ಸಾಕ್ಷರತೆ ಸಾಪೇಕ್ಷಿತ ಸ್ಥಾನಮಾನ, ಉಳಿದ ಜಿಲ್ಲೆಗಳ ಸ್ಥಾನಮಾನಕ್ಕಿಂತ ಕೆಳಮಟ್ಟದಲ್ಲಿರುವುದು ಸ್ಪಷ್ಟಪಡಿಸಲಾಗಿದೆ. ಆ ಮೂಲಕ ಲೇಖಕರು ಹಿಂದುಳಿದ ಜಿಲ್ಲೆಗಳ ಅಭಿವೃದ್ಧಿ ಸ್ಥಿತಿಗತಿಗಳನ್ನು ಚರ್ಚಿಸಲು ಪ್ರಯತ್ನಿಸಿದ್ದಾರೆ. ಶಾಲೆಗೆ ಸೇರದ ಮಕ್ಕಳ ಪ್ರಮಾಣದ ಪ್ರಾದೇಶಿಕ ಸ್ವರೂಪವು ತುಂಬಾ ಕುತೂಹಲಕಾರಿಯಾಗಿದೆ ಎಂದಿದ್ದಾರೆ. ರಾಜ್ಯದ ಒಟ್ಟು ೬-೧೪ ವಯೋಮಾನದ ಮಕ್ಕಳಲ್ಲಿ ಏಳು ಹಿಂದುಳಿದ ಜಿಲ್ಲೆಗಳ ಪಾಲು ಶೇಕಡ ೨೮.೯. ಆದರೆ ರಾಜ್ಯದಲ್ಲಿ ಒಟ್ಟು ಶಾಲೆಗೆ ಸೇರದ ೬-೧೪ ವಯೋಮಾನದ ಮಕ್ಕಳಲ್ಲಿ ಹಿಂದುಳಿದ ಏಳು ಜಿಲ್ಲೆಗಳ ಪಾಲು ಶೇಕಡ ೫೫.೬೭. ರಾಜ್ಯದಲ್ಲಿನ ಒಟ್ಟು ಶಾಲೆಗೆ ಸೇರದ ಮಕ್ಕಳಲ್ಲಿ ಅರ್ಧಕ್ಕಿಂತ ಅಧಿಕ ಮಕ್ಕಳು ಹಿಂದುಳಿದ ಏಳು ಜಿಲ್ಲೆಗಳಲ್ಲಿ ಮಡುಗಟ್ಟುಕೊಂಡಿರುವುದು ತಿಳಿದುಬರುತ್ತದೆ ಎಂದು ಆತಂಕವನ್ನು ವ್ಯಕ್ತಪಡಿಸಿದ್ದಾರೆ. ಯಾವ ದೇಶ-ಪ್ರದೇಶದಲ್ಲಿ ೦-೬ರ ವಯೋಮಾನದ ಎಳೆಯ ಮಕ್ಕಳ ಪ್ರಮಾಣವು ಶೇಕಡ ೧೦ಕ್ಕಿಂತ ಅಧಿಕವಾಗಿರುತ್ತದೋ ಅಲ್ಲಿ ಜನಸಂಖ್ಯೆಯ ಬೆಳವಣಿಗೆ ತೀವ್ರವಾಗಿರುತ್ತದೆ ಮತ್ತು ಅದರ ಒತ್ತಡ ಅಗಾಧವಾಗಿರುತ್ತದೆ ಎಂದು ತಿಳಿಸಿದ್ದಾರೆ.

ಮಾಲಿನಿ ಭಟ್ಟಾಚಾರ್ಯ (೨೦೦೩) ಅವರ "ಭಾರತದಲ್ಲಿ ಶಿಕ್ಷಣ ಮತ್ತು ಮಹಿಳೆ" ಎನ್ನುವ ಲೇಖನದಲ್ಲಿ ಮಹಿಳೆಯರಿಗೆ ಕೊಡುವ ಶಿಕ್ಷಣವು ಸಾಮಾಜಿಕ ಜನತೆಯ ಎಲ್ಲಾ ರೂಪಗಳನ್ನು ಪ್ರಶ್ನಿಸುವಂತದಾಗಿರಬೇಕು. ಸಮಾಜದ ವಿವಿಧ ಸ್ತರದಿಂದ ಬರುವ ಮಹಿಳೆಯರು ವಿವಿಧ ರೀತಿಯ ಸಾಮಾಜಿಕ ಮತ್ತು ರಾಜಕೀಯ ಅಧೀನತೆಗೆ ಒಳಗಾಗಿರುತ್ತಾರೆ. ಶಿಕ್ಷಣ ವ್ಯವಸ್ಥೆಗೆ ಕಾರಣವಾದ ಸಾಮಾಜಿಕ ವ್ಯವಸ್ಥೆಯಲ್ಲಿಯೇ ಕ್ರಾಂತಿಕಾರಕ ಬದಲಾವಣೆಯನ್ನುಂಟು ಮಾಡುವುದು ಅಗತ್ಯವಾಗಿದೆ. ಇದು ಜನಪರವಾದ ಪ್ರಜಾಸತ್ತಾತ್ಮಕವಾದ ಚಳುವಳಿಯಿಂದ ಮಾತ್ರ ಸಾಧ್ಯ. ಅಂತಹ ಚಳುವಳಿಯಲ್ಲಿ ಮಹಿಳೆಯರೂ ಪ್ರಮುಖ ಪಾತ್ರವಹಿಸಬೇಕು ಎಂದು ತಿಳಿಸಿದ್ದಾರೆ.

ವಿ.ಪಿ. ನಿರಂಜನಾರಾಧ್ಯ (೨೦೦೪) ಅವರ "ಶಾಲೆಗಳು ರಾಜಕೀಯ ಪಕ್ಷಗಳ ಶಾಖಾ ಕಚೇರಿ ಗಳಾಗಬೇಕೆ?" ಎನ್ನುವ ಲೇಖನದಲ್ಲಿ ಶಿಕ್ಷಣವು ಮಾನವನ ಹಕ್ಕು. ಇದನ್ನು ಯಾರು ಕಿತ್ತುಕೊಳ್ಳುವುದಕ್ಕೆ ಸಾಧ್ಯವಿಲ್ಲ ಎಂದು ವಿಶ್ಲೇಷಿಸುತ್ತಾ, ಶಾಲೆಗಳಲ್ಲಿ ಪಕ್ಷ ರಾಜಕೀಯವನ್ನು ಹುಟ್ಟು ಹಾಕುವ ಮೂಲಕ ಸಾರ್ವತ್ರೀಕರಣ ಪ್ರಕ್ರಿಯೆಯನ್ನು ಮೊಟಕುಗೊಳಿಸಿ, ಪ್ರಜಾಪ್ರಭುತ್ವಕ್ಕೆ ತಿಲಾಂಜಲಿಯಿಟ್ಟು, ಸರ್ವಾಧಿಕಾರಿ ವ್ಯವಸ್ಥೆಗೆ ಬುನಾದಿ ಹಾಕಿ, ತನ್ನದೇ ಆದ ಓಟ್ ಬ್ಯಾಂಕ್ ಒಂದನ್ನು ಸೃಷ್ಟಿಸಿಕೊಳ್ಳುವ ಹುನ್ನಾರ ನಡೆದಿದೆ. ಇದನ್ನು ನಾಗರಿಕ ಸಮಾಜ ಒಕ್ಕೊರಲಿನಿಂದ ಖಂಡಿಸಬೇಕು. ಪ್ರಜಾಸತ್ತೆಯ ಉಳಿವಿಗಾಗಿ ಹೋರಾಡಬೇಕಾದ ಅನಿವಾರ್ಯತೆ ಬಂದಿದೆ. ಶಾಲೆಗಳನ್ನು ಪಕ್ಷ ರಾಜಕೀಯದಿಂದ ದೂರ ಉಳಿಸಬೇಕಾದ ಈ ಹೋರಾಟದಲ್ಲಿ ಎಲ್ಲಾ ಪ್ರಗತಿಪರ ಶಕ್ತಿಗಳ ಬೆಂಬಲ ನಿರ್ಣಾಯಕವಾಗಲಿದೆ. ಶಾಲೆಗಳು ಕಲಿಕೆಯ ಪ್ರಾಥಮಿಕ ಕೇಂದ್ರಗಳಾಗಿ ಉಳಿಯಬೇಕೇ ಹೊರತು ಯಾವುದೇ ರಾಜಕೀಯ ಪಕ್ಷಗಳ ಶಾಖಾ ಕಚೇರಿಗಳಾಗಬಾರದು ಎಂದು ವಿವರಿಸಿದ್ದಾರೆ.

ಎಚ್.ಡಿ. ಪ್ರಶಾಂತ್ (೨೦೦೫) ಅವರ " ಈಶಾನ್ಯ ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣ ಮತ್ತು ಸಮಾಜ" ಎಂಬ ಪುಸ್ತಕದಲ್ಲಿ ಪ್ರಸ್ತಾವನೆಯೂ ಸೇರಿದಂತೆ ಏಳು ಅಧ್ಯಯನಗಳಿವೆ. ಪ್ರಾಥಮಿಕ ಶಿಕ್ಷಣದ ಪ್ರಾಮುಖ್ಯತೆ, ಸಾರ್ವತ್ರಿಕತೆ ಹಾಗೂ ಶಿಕ್ಷಣವನ್ನು ಪಡೆಯುವುದು ಒಂದು ಮೂಲಭೂತ ಹಕ್ಕು ಎನ್ನುತ್ತಾರೆ. ಸಾಕ್ಷರತೆಯಲ್ಲಿ ಪ್ರಾದೇಶಿಕ, ಸಾಮಾಜಿಕ ಅಸಮಾನತೆ ಮತ್ತು ಶೈಕ್ಷಣಿಕ ಅಸಮಾನತೆಯ ಜೊತೆಗೆ ಗ್ರಾಮೀಣ, ನಗರ, ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಸಾಕ್ಷರತೆ ಯಲ್ಲಿನ ಲಿಂಗ-ತಾರತಮ್ಯದ ಬಗ್ಗೆ ವಿವರಿಸಿದ್ದಾರೆ. ಮಕ್ಕಳ ಶಿಕ್ಷಣ ಮತ್ತು ಬದಲಾಗುತ್ತಿರುವ ಪೋಷಕರ ಮನೋಭಾವ ಮಕ್ಕಳ ಶಿಕ್ಷಣಕ್ಕೆ ನೀಡಬೇಕಾದ ಪ್ರೇರಕಾಂಶಗಳು ಗಂಡು ಮತ್ತು ಹೆಣ್ಣುಮಕ್ಕಳ ನಡುವಿನ ಶಿಕ್ಷಣದ ವ್ಯತ್ಯಾಸವನ್ನು ಗುರುತಿಸುತ್ತಾ, ಶಿಕ್ಷಣದ ಅಭಿವೃದ್ಧಿಯಲ್ಲಿ ಸಮುದಾಯದ ಭಾಗವಹಿಸುವಿಕೆಯನ್ನು ತೊಡಗಿಸಿಕೊಳ್ಳಬೇಕು ಎನ್ನುವ ಅಂಶವನ್ನು ಸ್ಪಷ್ಟಪಡಿಸಿದ್ದಾರೆ. ಗ್ರಾಮಮಟ್ಟದಲ್ಲಿ ಈ ತಾರತಮ್ಯ ಅತ್ಯಾಧಿಕವಾಗಿದೆ ಎಂಬುದನ್ನು ಅಧ್ಯಾಯ ಮೂರರಲ್ಲಿ ಸಾಬೀತು ಪಡಿಸಿದ್ದಾರೆ. ಅಧ್ಯಯನ ನಡೆಸಿದ ಗ್ರಾಮಗಳಲ್ಲಿ ಮತ್ತು ಗ್ರಾಮ ಪಂಚಾಯಿತಿಗಳಲ್ಲಿ ಸಾಕ್ಷರತೆ

ನಿರುತ್ಸಾಹದಾಯಕವಾಗಿದೆ ಎಂದು ತಿಳಿಸುತ್ತಾ, ಇದಕ್ಕೆ ಮಹಿಳಾ ಶಿಕ್ಷಣದ ಬಗ್ಗೆ ಸ್ಥಳೀಯರು ಗ್ರಾಮಸ್ಥರು ಹೊಂದಿರುವ ಔದಾಸೀನ್ಯವೇ ಪ್ರಮುಖ ಕಾರಣವಾಗಿದೆ ಎಂದು ಹೇಳಿದ್ದಾರೆ. ಗ್ರಾಮ ಮಟ್ಟದಲ್ಲಿ ಮಹಿಳೆಯರ ಶಿಕ್ಷಣ ಮತ್ತು ಸಾಕ್ಷರತೆಯ ಸಾಮಾಜಿಕ ಆಯಾಮ ಕುರಿತಂತೆ ಹೆಚ್ಚಿನ ಅಧ್ಯಯನಗಳು ಆಗಬೇಕಾಗಿದೆ ಎಂದಿದ್ದಾರೆ.

ಪ್ರಶಾಂತ್ ಎಚ್.ಡಿ. (೨೦೦೬) ಅವರ "ಶಾಲಾ ಶಿಕ್ಷಣದ ವಿಕೇಂದ್ರೀಕರಣ ಎಸ್.ಡಿ.ಎಂ.ಸಿ ಕಾರ್ಯಕ್ಷಮತೆ" ಎನ್ನುವ ಪುಸ್ತಕದಲ್ಲಿ ಮೂರು ಅಧ್ಯಾಯಗಳನ್ನು ಮಾಡಿಕೊಂಡು ಮುಖ್ಯವಾಗಿ ಸಂಶೋಧನೆಯ ಮೂಲ ಸಿದ್ಧಾಂತಗಳನ್ನು ತಮ್ಮ ಅಧ್ಯಯನದಲ್ಲಿ ತೊಡಗಿಸಿಕೊಂಡಿದ್ದಾರೆ. ಅಧ್ಯಯನದ ವಿಧಾನ ವಿವರಿಸುತ್ತಾ ಸಮುದಾಯದ ಸಹಭಾಗಿತ್ವ ಯಾಕೆ, ಅದರ ಪ್ರಯತ್ನಗಳು, ಮತ್ತು ಅಧ್ಯಯನ ಮಿತಿ, ಮಹತ್ವವನ್ನು ವಿವರಿಸಿದ್ದಾರೆ. ಶಾಲಾ ಶಿಕ್ಷಣದಲ್ಲಿ ವಿಕೇಂದ್ರೀಕರಣ ನಡೆದು ಬಂದ ದಾರಿಯನ್ನು ಹೇಳುತ್ತಾ, ಅಂದು ಮತ್ತು ಇಂದು ಇರುವ ಪ್ರಯತ್ನಗಳೇನು ಎಂಬುದನ್ನು ವಿಶ್ಲೇಷಣೆಗೆ ಒಳಪಡಿಸುವ ಮೂಲಕ, ಎಸ್.ಡಿ.ಎಂ.ಸಿಯನ್ನು ಹೊಸದಾಗಿ ನೋಡುವ ಪ್ರಯತ್ನ ಮಾಡಿದ್ದಾರೆ. ಶಾಲಾ ನಿರ್ವಹಣೆಯಲ್ಲಿ ಎಸ್.ಡಿ.ಎಂ.ಸಿಯ ಪಾತ್ರ ಏನು, ಸಭೆ, ನಿರ್ಣಯಗಳು, ಸಮನ್ವಯತೆ ಮತ್ತು ಶಾಲಾ ಶಿಕ್ಷಣದಲ್ಲಿ ಸಮುದಾಯದ ಭಾಗವಹಿಸುವಿಕೆಯನ್ನು ವಿವರಿಸಿದ್ದಾರೆ. ಹಾಗೆಯೇ ಬಾಲಕಿಯರ ಶಿಕ್ಷಣಕ್ಕೆ ಹೆಚ್ಚು ಒತ್ತು ಕೊಡುವತ್ತ ಎಸ್.ಡಿ.ಎಂ.ಸಿಯ ಪಾತ್ರವೇನು ಎಂಬುದನ್ನು ತಮ್ಮ ಕೃತಿಯಲ್ಲಿ ತೋರಿಸಿದ್ದಾರೆ. ಒಟ್ಟಾರೆಯಾಗಿ ತಳಮಟ್ಟದಿಂದ ಸುಧಾರಿಸಬೇಕಾದ ಸಾಮಾಜಿಕ ಜವಾಬ್ದಾರಿಯ ಬಗೆಗಿನ ನಿರ್ಣಯಾತ್ಮಕ ವಾದದ ಮೂಲಕ ಸಾಮಾಜಿಕ, ಆರ್ಥಿಕ ಭಿನ್ನತೆಯ ಜೊತೆ ಜೊತೆಗೆ, ಶಾಲಾ ಶಿಕ್ಷಣದಲ್ಲಿನ ತೊಡಕುಗಳು ಮತ್ತು ಪರಿಹಾರಗಳನ್ನು ತಮ್ಮ ಸಂಶೋಧನೆಯಲ್ಲಿ ಲೇಖಕರು ಕಂಡುಕೊಂಡಿದ್ದಾರೆ.

ಶಿವರಾಜ ಬಿ.ಕೆ. ವಿಠೋಬ ಭೀಮಣ್ಣ (೨೦೦೫) ಅವರ "ಶಿಕ್ಷಣ ಮತ್ತು ಪ್ರಾದೇಶಿಕ ಅಸಮತೋಲನ" ಎಂಬ ಲೇಖನದಲ್ಲಿ ಪ್ರಮುಖವಾಗಿ ಶಿಕ್ಷಣವನ್ನು ನಿರ್ಧರಿಸುವ ಅಂಶಗಳಾದ ಶಿಕ್ಷಣದ ಪ್ರಮಾಣ, ಶಾಲೆಗಳ ಸಂಖ್ಯೆ, ಶಿಕ್ಷಕರ ಸಂಖ್ಯೆ, ಶಾಲೆ ಬಿಟ್ಟ ಮಕ್ಕಳ ಸಂಖ್ಯೆ ಇವುಗಳನ್ನು ಆಧರಿಸಿ, ಆಯಾ ಪ್ರದೇಶಕ್ಕೆ ಅನುಗುಣವಾಗಿ ಹೊಂದಿರುವ ಅಸಮಾನತೆಯನ್ನು ವಿವಿಧ ದತ್ತಾಂಶಗಳ ಮೂಲಕ ವಿವರಿಸಿದ್ದಾರೆ. ಎಲ್ಲಾ ರಂಗದಲ್ಲೂ ಪ್ರಾದೇಶಿಕ ಅಸಮಾನತೆ ಎದ್ದುಕಂಡಂತೆ ಶಿಕ್ಷಣದಲ್ಲಿಯೂ ಪ್ರಾದೇಶಿಕ ಅಸಮಾನತೆ ಕಂಡುಬರುತ್ತದೆ. ಸಾಕ್ಷರತೆ ಪ್ರಮಾಣವನ್ನು ವಿಭಾಗವಾರು ನೋಡಿದಾಗ ಗುಲ್ಬರ್ಗದಲ್ಲಿ ಪ್ರತಿಶತ ೫೦.೬ಆರಷ್ಟಿದ್ದರೆ, ಬೆಂಗಳೂರಿನಲ್ಲಿ ಪ್ರತಿಶತ ೬೩.೯೧ರಷ್ಟಿದ್ದೆ. ಸಾಕ್ಷರತೆಯ ಪ್ರಮಾಣವು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿದೆ. ಇದಕ್ಕೆ ಹಲವಾರು ಕಾರಣಗಳನ್ನು ಗುರುತಿಸಿದ್ದಾರೆ. ಸಾಮಾಜಿಕ, ಆರ್ಥಿಕ, ನೈಸರ್ಗಿಕ ಮತ್ತು ರಾಜಕೀಯ ಕಾರಣಗಳು ಬಹುಮುಖ್ಯವಾದವು ಎಂದಿದ್ದಾರೆ. ಇವುಗಳಲ್ಲಿ ನೈಸರ್ಗಿಕ ಸಂಪನ್ಮೂಲಗಳ ಅಸಮರ್ಪಕ ಹಂಚಿಕೆ, ದೋಷಪೂರಿತ ಆರ್ಥಿಕ ನೀತಿ,

ದಕ್ಷ ಆಡಳಿತ ಕೊರತೆ, ಬಂಡವಾಳ ಕೊರತೆ, ಜಾತಿವ್ಯವಸ್ಥೆ, ಅಸಮರ್ಪಕ ಆರ್ಥಿಕ ಯೋಜನೆಗಳು, ಬಡತನ ಇನ್ನು ಮುಂತಾದ ಕಾರಣಗಳನ್ನು ಗುರುತಿಸಿದ್ದಾರೆ. ಸರ್ಕಾರಿ ಮತ್ತು ಸರ್ಕಾರೇತರ ಸಂಘ ಸಂಸ್ಥೆಗಳು ಪ್ರಾಥಮಿಕ ಶಿಕ್ಷಣದ ಪ್ರಗತಿಗಾಗಿ ಹಾಕಿಕೊಂಡ ಯೋಜನೆಗಳು ವಿಫಲವಾಗುತ್ತಿವೆ. ಇದಕ್ಕೆ ಆಡಳಿತ ಯಂತ್ರದ ಕೊರತೆಯಿರಬಹುದು ಅಥವಾ ರಾಜಕೀಯ ಪ್ರಭಾವಗಳಂತಹ ಹಲವಾರು ಕಾರಣ ಗಳಿವೆ. ಈ ಎಲ್ಲಾ ಕಾರಣಗಳನ್ನು ಬಗೆಹರಿಸುವ ನಿಟ್ಟಿನಲ್ಲಿ ಸರ್ಕಾರ ಮತ್ತು ಆಡಳಿತ ವರ್ಗ ರಾಜ್ಯದಲ್ಲಿ ಶೈಕ್ಷಣಿಕವಾಗಿ ಹಿಂದುಳಿದ ಪ್ರದೇಶಗಳತ್ತ ಹೆಚ್ಚು ಗಮನಹರಿಸಬೇಕು. ಇಲ್ಲದಿದ್ದರೆ ಶೈಕ್ಷಣಿಕ ಸೌಲಭ್ಯದಿಂದ ವಂಚಿತವಾದ ಜಿಲ್ಲೆಗಳು ಹಿಂದುಳಿಯುತ್ತಲೆ ಹೋಗುತ್ತವೆ. ಸೌಲಭ್ಯಗಳು ಪಡೆದುಕೊಂಡ ಜಿಲ್ಲೆಗಳು ಹಾಗೆಯೇ ಮುಂದುವರಿಯುತ್ತವೆ, ಇಲ್ಲದಿದ್ದರೆ ಅಭಿವೃದ್ಧಿಯಲ್ಲಿ ಪ್ರಾದೇಶಿಕ ಅಸಮಾನತೆಯನ್ನು ಹೋಗಲಾಡಿಸಲು ಸಾಧ್ಯವಿಲ್ಲ ಎಂದು ವಾದಿಸುತ್ತಾರೆ.

ದಯಾನಂದ (೨೦೦೫) ಅವರ "ಲಿಂಗ ಅಸಮಾನತೆಯ ವಿಭಿನ್ನ ಮುಖಗಳು" ಎಂಬುವುದರಲ್ಲಿ ಶತಮಾನಗಳಿಂದಲೂ ಲಿಂಗ ಅಸಮಾನತೆ ಮಾನವ ಸಮಾಜವನ್ನು ಕಾಡುತ್ತಿದೆ. ಇಂದಿನ ಆಧುನೀಕ ಕಂಪ್ಯೂಟರ್ ಯುಗವು ಇದರಿಂದ ಹೊರತಾಗಿಲ್ಲ. ಪ್ರಪಂಚದ ಅರ್ಧದಷ್ಟು ಜನರು ಮಹಿಳೆಯರೇ ಆದರೂ ಅವರು ಪುರುಷರಿಗೆ ಸಮಾನರಾಗಿಲ್ಲದಿರುವುದು, ಸಾಮಾಜಿಕ ದುರಂತವೇ ಸರಿ ಎಂದು ತಿಳಿಸುತ್ತಾರೆ. ಇಂದು ಮಹಿಳೆ ವಿವಿಧ ಸಮಸ್ಯೆಗಳ ಸುಳಿಯಲ್ಲಿ ಸಿಲುಕಿದ್ದಾಳೆ. ಇಂತಹ ಇಕ್ಕಟ್ಟಿನ ಪರಿಸ್ಥಿತಿಯಲ್ಲಿ ಲಿಂಗ ಅಸಮಾನತೆಯನ್ನು ಹೋಗಲಾಡಿಸುವ ಅಗತ್ಯವಿದೆ ಎಂದು ಪ್ರತಿಪಾದಿಸಿದ್ದಾರೆ.

ಟಿ.ಆರ್. ಚಂದ್ರಶೇಖರ್ (೨೦೦೬) ಅವರ "ಕರ್ನಾಟಕದ ಪ್ರಾಥಮಿಕ ಶಿಕ್ಷಣದ ಸ್ಥಿತಿ-ಗತಿ" ಎನ್ನುವ ಲೇಖನವು ಆನುಷಾಂಗಿಕ ಮಾಹಿತಿಯನ್ನು ಆಧರಿಸಿ ಕಟ್ಟಲಾಗಿದೆ. ಲೇಖಕರು ಪ್ರಮುಖವಾಗಿ ಮೂರು ಆಯಾಮಗಳನ್ನು ಚರ್ಚೆಗೆ ಒಳಪಡಿಸಿದ್ದಾರೆ. ಪ್ರಾದೇಶಿಕ ಸ್ವರೂಪ, ಜಾತಿ ಸ್ವರೂಪ, ಲಿಂಗಸಂಬಂಧಿ ಸ್ವರೂಪಗಳನ್ನು ಚರ್ಚಿಸುತ್ತಾ, ಮಧ್ಯದಲ್ಲಿ ಶಾಲೆ ಬಿಡುವ ಮಕ್ಕಳ ಸಮಸ್ಯೆಗೆ ಅನೇಕ ಕಾರಣಗಳನ್ನು ಗುರುತಿಸಿದ್ದಾರೆ. ಸಾಮಾಜಿಕ, ರಾಜಕೀಯ, ಚಾರಿತ್ರಿಕ ಕಾರಣಗಳು ಬಹುಮುಖ್ಯ ಎಂದಿದ್ದಾರೆ. ಉಚಿತ ಪಠ್ಯಪುಸ್ತಕ, ಸಮವಸ್ತ್ರ, ಊಟ ಇತ್ಯಾದಿ ಸೌಲಭ್ಯಗಳನ್ನು ಒದಗಿಸುವುದರಿಂದ ಸ್ವಲ್ಪಮಟ್ಟಿಗೆ ಕಡಿಮೆಗೊಳಿಸಲಾಗಿದೆ. ಆದರೆ ಸಮುದಾಯದ ವಲಸೆಗಳು ಪುನಾವರ್ತನೆಯಾಗುವ ಪ್ರದೇಶಗಳಲ್ಲಿ ಮಕ್ಕಳು ಶಾಲೆ ಬಿಡುವುದನ್ನು ಕಡಿಮೆಗೊಳಿಸಲು ಉದ್ಯೋಗ ಭದ್ರತೆಯೂ ಪ್ರಮುಖ ವಾಗುತ್ತದೆ ಎಂದು ಪ್ರತಿಪಾದಿಸಲಾಗಿದೆ.

ವಿಲ್‌ಫ್ರೆಡ್ ಡಿಸೋಜ (೨೦೦೬) ಅವರ "ರೈತರಿಗೆ ಆಸೆ, ಕಂಪನಿಗಳಿಗೆ ಲಾಭದ ದಾಹ, ಶಿಕ್ಷಣದಿಂದ ವಂಚಿತವಾಗುತ್ತಿರುವ ಕಂದಮ್ಮಗಳು" ಎಂಬ ಲೇಖನದಲ್ಲಿ ದುಡ್ಡಿನ ಆಸೆಗಾಗಿ ರೈತ ಕುಟುಂಬಗಳು ತಮ್ಮ ಮಕ್ಕಳ ಬದುಕನ್ನು ಬಲಿಕೊಡುತ್ತಿರುವ ದಾರುಣ ಸತ್ಯವನ್ನು ಲೇಖಕರು ವಿವರಿಸಿದ್ದಾರೆ. ಸಾಲದ ಬಲೆಯಲ್ಲಿ ಸಿಲುಕಿ ಅದರಿಂದ ಹೊರಬರಲು ತವಕಿಸುತ್ತಿರುವ ರೈತ

ಸಮುದಾಯ ಯಾವುದೇ ರೀತಿಯಲ್ಲಿ ತಮಗೆ ಲಾಭ ತರುವ ಹೊಸ ಅವಕಾಶವನ್ನು ಬಾಚಿಕೊಳ್ಳಲು ತವಕಪಡುವುದು ಅತ್ಯಂತ ಸಹಜವೆಂದಿದ್ದಾರೆ. ಬಹುರಾಷ್ಟ್ರೀಯ ಬೀಜೋತ್ಪಾದನಾ ಕಂಪನಿಗಳು ಸೃಷ್ಟಿಮಾಡಿರುವ ಇಂತಹ ಜಾಲವೊಂದರಲ್ಲಿ ಸಿಲುಕಿರುವ ರೈತರು, ತಮ್ಮ ಕೃಷಿ ಪದ್ಧತಿಯನ್ನೇ ಅವರಿಗೆ ಕೊಟ್ಟು, ಅಲ್ಪಸ್ವಲ್ಪ ಲಾಭ ಮಾಡುವ ಗುಂಗಿನಲ್ಲಿ ತಮ್ಮ ಮಕ್ಕಳ ಜೀವನವನ್ನೇ ಬಲಿ ಕೊಡುತ್ತಿದ್ದಾರೆ ಎಂದು ಆತಂಕವನ್ನು ವ್ಯಕ್ತಪಡಿಸಿದ್ದಾರೆ. ದಾವಣಗೆರೆ ಜಿಲ್ಲೆಯ ಹರಪನಹಳ್ಳಿ ತಾಲ್ಲೂಕಿನ ಗ್ರಾಮಪಂಚಾಯಿತಿ ವ್ಯಾಪ್ತಿಗೆ ಬರುವ ಶಾಲೆಗಳಲ್ಲಿ ಮಕ್ಕಳು ಇಲ್ಲ, ದಾಖಲಾಗಿದ್ದರೂ, ದಾಖಲಾತಿ ಮತ್ತು ಹಾಜರಾತಿಯಲ್ಲಿ ವ್ಯತ್ಯಾಸ ಅಥವಾ ಅಂತರವಿರುವುದನ್ನು ಕಾಣಬಹುದಾಗಿದೆ. ಈ ಮಕ್ಕಳೆಲ್ಲಾ ಸ್ಥಳೀಯ ಜಾಗದಲ್ಲಿ ನಿರ್ಮಾಣವಾಗಿರುವ ಬೀಜೋತ್ಪಾದನಾ ಕೇಂದ್ರಗಳಲ್ಲಿ ದುಡಿಯಲು ಹೋಗಿದ್ದಾರೆ. ಇನ್ನೊಂದು ಕಡೆ ಬಾಲಕಾರ್ಮಿಕತೆಯ ಅಮಾನವೀಯ ಆಚರಣೆ. ಇದು ಈ ಜಿಲ್ಲೆಗೆ ಮಾತ್ರ ಸೀಮಿತವಾಗಿಲ್ಲ. ಬೇರೆ ಬೇರೆ ಜಿಲ್ಲೆಗಳಲ್ಲೂ ನಡೆಯುತ್ತಿರಬಹುದು. ಇದರತ್ತ ಶಿಕ್ಷಣ ಇಲಾಖೆ ಮತ್ತು ಕಾರ್ಮಿಕ ಇಲಾಖೆಗಳು ಈಗಲಾದರೂ ಹೆಚ್ಚೆತ್ತುಕೊಂಡು ಶಿಕ್ಷಣದಿಂದ ವಂಚಿತರಾದ ಮಕ್ಕಳನ್ನು ಮತ್ತೆ ಶಾಲೆಗೆ ಕರೆತರುವ ಪ್ರಯತ್ನ ನಡೆಯಬೇಕು ಎಂದಿದ್ದಾರೆ.

ಸುಂದರ ಕೇನಾಜಿ (೨೦೦೬) ಅವರ "ಸರ್ಕಾರಿ ಶಾಲೆಗಳಲ್ಲಿ ಮಕ್ಕಳ ಶಿಕ್ಷಣ : ಪೋಷಕರು ಎಡವಿರುವುದು ಎಲ್ಲಿ?" ಎಂಬ ಲೇಖನದಲ್ಲಿ ತಮ್ಮ ಮಕ್ಕಳಿಗೆ ಪ್ರಾಥಮಿಕ ಶಿಕ್ಷಣ ನೀಡುವಾಗ ಪೋಷಕರು ಎಲ್ಲಿ ಎಡವಿದ್ದಾರೆ ಎಂಬುವುದನ್ನು ಚರ್ಚಿಸಿದ್ದಾರೆ. ವ್ಯಾಪಾರಿ ಘಟಕಗಳಂತೆ ತಲೆ ಎತ್ತಿ ಸ್ಪರ್ಧೆಗೆ ನಿಂತಿರುವ, ಅನೇಕ ಸರ್ಕಾರೇತರ ಶಾಲೆಗಳು ಬಾಹ್ಯ ಆಡಂಬರದ ಮುಂಚೋಣಿಯಲ್ಲಿರುವ ಶಾಲೆ, ಪೋಷಕರು, ಗ್ರಾಮೀಣ ಪ್ರದೇಶದಲ್ಲಿರುವ ದೂರದ ಶಾಲೆಯನ್ನೇ ಆಯ್ಕೆ ಮಾಡುತ್ತಿರುವುದು ತಮ್ಮ ಪ್ರತಿಷ್ಠೆಯ ವಿಚಾರ ಎಂದು ಭಾವಿಸುತ್ತಿದ್ದಾರೆ. ಮನೆಯ ಅಂಗಳದ ಬದಿಯಲ್ಲಿಯೇ ಇರುವ ಸರ್ಕಾರಿ ಶಾಲೆಗಳ ಬಗ್ಗೆ ಗಮನ ಕೊಡದೆ, ಒಂದು ರೀತಿ ಅಸ್ಪೃಶ್ಯತೆಯಿಂದ ನೋಡುವ ಬೆಳವಣಿಗೆ ಅಘಾತಕಾರಿ ಏನಿಸುತ್ತದೆ ಎಂದಿದ್ದಾರೆ. ವಾಸ್ತವಿಕವಾಗಿ ಇಂದಿನ ಸರ್ಕಾರಿ ಶಾಲೆಗಳು, ಗುಣಾತ್ಮಕ ಶಿಕ್ಷಣದ ದೃಷ್ಟಿಯಿಂದ ಎಷ್ಟೊಂದು ಮುಂದುವರಿದಿದೆ ಎಂಬುವುದು ನಮ್ಮ ಸಮಾಜದ ಬಹುತೇಕರಿಗೆ ಇನ್ನೂ ಗೊತ್ತಿಲ್ಲ. ಪರೀಕ್ಷೆಗಾಗಿ ಕಂಠಪಾಠ ಮಾಡಿಸಿ ಅಂಕ ಗಿಟ್ಟಿಸುವ, ಇಂಗ್ಲಿಷ್ ಕಲಿಸುವ ಶಾಲೆಗಳು ಮಾತ್ರ, ಶಾಲೆಗಳೆಂಬ ಪೂರ್ವಗ್ರಹಕ್ಕೆ ಸಿಲುಕಿರುವ ಕಾರಣ, ಸರ್ಕಾರಿ ಶಾಲೆಯ ಮೌಲ್ಯ ಗಳು ಕಳೆಗುಂದುತ್ತಿವೆ. ಸರ್ಕಾರೇತರ ಶಾಲೆಗಳ ಬಾಹ್ಯ ಆಡಂಬರ ಹಾಗೂ ಆರ್ಥಿಕ ಹಣೆಬಾರಕ್ಕಾಗಿ ಜೀವನ ಸವೆಸುವ ನಮ್ಮ ಪೋಷಕ ಬಂಧುಗಳು, ಅದರ ಶೇಕಡ ೨೨ ಭಾಗದಷ್ಟು ಗಮನವನ್ನು ಕಲಿಕೆಗೆ ಕೊಟ್ಟು, ತಮ್ಮ ಮಗುವನ್ನು ಹತ್ತಿರದ ಶಾಲೆಗೆ ಕಳುಹಿಸಿ, ನೆಮ್ಮದಿಯಿಂದ ಇರಬಹುದಲ್ಲವೇ? ಸರ್ಕಾರೇತರ ಶಾಲೆಗೆ ಕಳುಹಿಸುವ ಪೋಷಕರು ತೆಗೆದುಕೊಳ್ಳುವ ಶೈಕ್ಷಣಿಕ ಕಾಳಜಿಯನ್ನು ಇಲ್ಲಿ ಅಂದರೆ ಸರ್ಕಾರಿ ಶಾಲೆಗಳಲ್ಲಿ ತೆಗೆದುಕೊಂಡು ಅನಗತ್ಯ ಆರ್ಥಿಕ ನಷ್ಟ ಹಾಗೂ ಒತ್ತಡಗಳನ್ನು

ತಪ್ಪಿಸಬಹುದಲ್ಲ? ಆದರೆ ತಮ್ಮ ಪ್ರತಿಷ್ಠೆಯನ್ನು ಮಾತ್ರ ಬಿಟ್ಟು ಬಿಡಬೇಕಾಗುತ್ತದೆ. ಶಿಕ್ಷಣ ವ್ಯವಸ್ಥೆಯಲ್ಲಿ ನಡೆಯುವ ಪ್ರತಿಷ್ಠೆಯ ಅಂಶವೇ ಒಂದು ಮಗುವಿನ ಭವಿಷ್ಯವನ್ನು ಬಲಿ ತೆಗೆದು ಕೊಳ್ಳುವುದಾಗಿದೆ. ಗುಣಾತ್ಮಕ ಶಿಕ್ಷಣವನ್ನು ನೀಡುವಲ್ಲಿ ಸರ್ಕಾರಿ ಶಾಲೆಗಳಲ್ಲಿ ನೀಡುವ ವ್ಯವಸ್ಥೆಯ ಮುಂದೆ ಸರ್ಕಾರೇತರ ಶಾಲೆಗಳು ಎಂದೆಂದಿಗೂ ಸ್ಪರ್ಧಿಸಲಾರವು ಎಂದಿದ್ದಾರೆ.

ರತನ್ ನಬೀಸ್ ಮತ್ತು ತಾನಿಯಾ ಚಟರ್ಜಿ (೨೦೦೭) ಅವರ "ಎನ್‌ರೋಲಿಂಗ್ ಅಂಡ್ ರಿಟೈನಿಂಗ್ ಸ್ಲಮ್ ಚಿಲ್ಡ್ರನ್ ಇನ್ ಫಾರ್ಮಲ್ ಸ್ಕೂಲ್ಸ್, ಎ ಫೀಲ್ಡ್ ಸರ್ವೇ ಇನ್ ಈಸ್ಟರ್ನ್ ಸ್ಲಮ್ಸ್ ಆಫ್ ಕೋಲ್ಕತ" ಎನ್ನುವ ಲೇಖನದಲ್ಲಿ ಕೋಲ್ಕತಾದ ಪೂರ್ವ ಕೊಳಗೇರಿ ಪ್ರದೇಶದಲ್ಲಿನ ಶೈಕ್ಷಣಿಕ ಸ್ಥಿತಿ-ಗತಿಯನ್ನು ವಿವರಿಸುವ ಪ್ರಯತ್ನ ಲೇಖಕರು ಮಾಡಿದ್ದಾರೆ. ಸರ್ವಶಿಕ್ಷಣ ಅಭಿಯಾನ ಬಂದ ಮೇಲೆ ಅಲ್ಪಪ್ರಮಾಣದಲ್ಲಿ ಕೊಳಗೇರಿಗಳಲ್ಲಿ ದಾಖಲಾತಿ ಮತ್ತು ಹಾಜರಾತಿಯಲ್ಲಿ ಪ್ರಗತಿ ಕಂಡಿದೆ. ಆದರೆ ಹೆಣ್ಣುಮಕ್ಕಳ ದಾಖಲಾತಿ ಈ ಪ್ರದೇಶದಲ್ಲಿ ನಿರೀಕ್ಷಿತ ಪ್ರಮಾಣದಲ್ಲಿ ಉತ್ತಮವಾಗಿಲ್ಲ ಎಂದಿದ್ದಾರೆ. ಇನ್ನು ಅನೇಕ ಮಕ್ಕಳು ಮಧ್ಯದಲ್ಲೇ ಶಾಲೆ ಬಿಡುತ್ತಿದ್ದಾರೆ. ಇವರಲ್ಲಿ ಹೆಣ್ಣುಮಕ್ಕಳ ಸಂಖ್ಯೆ ಹೆಚ್ಚು ಎಂದು ಹೇಳಿದ್ದಾರೆ. ಇವರು ವಲಸೆ ಹೋಗಿ ಕಾರ್ಮಿಕ ವರ್ಗಕ್ಕೆ ಸೇರುತ್ತಾರೆ. ಇಂತಹ ಪರಿಸ್ಥಿತಿಗಳಲ್ಲಿ ಅಂತಹ ವಿದ್ಯಾರ್ಥಿಗಳನ್ನು ಗುರುತಿಸಿ, ಅವರ ಮನೆಗೆ ಹೋಗಿ ಪೋಷಕರೊಂದಿಗೆ ಚರ್ಚಿಸಿ, ಅವಕಾಶ ವಂಚಿತರಾದ ಮಕ್ಕಳನ್ನು ಮತ್ತೇ ಶಾಲೆಗೆ ಕರೆತರುವ ಪ್ರಯತ್ನ ಇನ್ನು ಹೆಚ್ಚಿನ ಮಟ್ಟದಲ್ಲಿ ಮಾಡಬೇಕು ಎಂದು ಅಭಿಪ್ರಾಯಪಟ್ಟಿದ್ದಾರೆ. ಹೀಗೆ ಶಾಲೆ ಬಿಟ್ಟ ಮಕ್ಕಳಲ್ಲಿ ಹೆಣ್ಣು ಮಕ್ಕಳನ್ನು ಶಾಲೆಗೆ ಕರೆತರುವುದು ಬಹಳ ದೊಡ್ಡ ಸಮಸ್ಯೆಯಾಗಿದೆ. ಇದನ್ನು ನಾಗರಿಕ ಸಮಾಜದಲ್ಲಿ ಜಾಗೃತಿ ಮೂಡಿಸುವ ಮೂಲಕ ಉತ್ತಮ ಪಡಿಸಲು ಸಾಧ್ಯ ಎಂಬ ಅಭಿಪ್ರಾಯವನ್ನು ಅವರು ವ್ಯಕ್ತಪಡಿಸಿದ್ದಾರೆ.

ಮಧು ಎಸ್. ಪರಂಜಪೆ (೨೦೦೭) ಅವರ "ಅನ್ ಈವನ್ ಡಿಸ್ಟ್ರಿಬ್ಯೂಷನ್ ಆಫ್ ಎಜ್ಯುಕೇಷನ್ ಇನ್ ಮಹಾರಾಷ್ಟ್ರ : ರೂರಲ್, ಅರ್ಬನ್, ಜೆಂಡರ್ ಅಂಡ್ ಕ್ಯಾಸ್ಟ್ ಇನ್ ಈಕ್ವಾಲಿಟೀಸ್" ಎನ್ನುವ ಲೇಖನದಲ್ಲಿ ಮಹಾರಾಷ್ಟ್ರ ರಾಜ್ಯದ ಶೈಕ್ಷಣಿಕ ಸ್ಥಿತಿ-ಗತಿಯನ್ನು ವಿವರಿಸುತ್ತಾ, ಗ್ರಾಮೀಣ ಭಾಗದಲ್ಲಿ ಸಾಮಾಜಿಕವಾಗಿ ಹಿಂದುಳಿದ ವರ್ಗಗಳಲ್ಲಿ ಶಿಕ್ಷಣದ ವಿತರಣೆಯು ಉತ್ತಮ ವಾಗಿಲ್ಲ. ಗ್ರಾಮೀಣ ಮತ್ತು ನಗರ ಎರಡೂ ಭಾಗಗಳಲ್ಲಿ ಶಿಕ್ಷಣ ಪ್ರಸಾರದ ಅಸಮಾನತೆ ಮಹಿಳೆ ಯರಲ್ಲಿ ಪುರುಷರಿಗಿಂತ ಹೆಚ್ಚಾಗಿದೆ. ಗ್ರಾಮೀಣ ಭಾಗದಲ್ಲಿ ಜಾತಿ ಆಧಾರಿತ ಶಿಕ್ಷಣದ ಅಸಮಾನತೆ ಅಧಿಕವಾಗಿದೆ. ಶಿಕ್ಷಣ ಪಡೆದುಕೊಳ್ಳುವಲ್ಲಿ ನಗರದ ಪುರುಷರಲ್ಲಿ ಕಡಿಮೆ ತಾರತಮ್ಯ ಮತ್ತು ಗ್ರಾಮೀಣ ಮಹಿಳೆಯರಲ್ಲಿ ಹೆಚ್ಚಿನ ತಾರತಮ್ಯಗಳು ಕಂಡುಬರುತ್ತವೆ ಎಂಬುದನ್ನು ಈ ಅಧ್ಯಯನ ದೃಢಪಡಿಸಿದೆ.

ಎಂ. ನಂಜುಂಡಸ್ವಾಮಿ (೨೦೦೭) ಅವರ "ಗ್ರಾಮೀಣ ಪ್ರದೇಶದಲ್ಲಿನ ಪ್ರಾಥಮಿಕ ಶಿಕ್ಷಣದ ಸಮಸ್ಯೆಗಳು" ಎಂಬ ಲೇಖನದಲ್ಲಿ ಸಮಾಜದ ಎಲ್ಲಾ ವರ್ಗದ ಮಕ್ಕಳಿಗೆ ಉಚಿತ, ಕಡ್ಡಾಯ,

ಪ್ರಾಥಮಿಕ ಶಿಕ್ಷಣ ಒದಗಿಸುವ ಜವಾಬ್ದಾರಿಯನ್ನು ಸರ್ಕಾರ ಪೂರ್ಣಗೊಳಿಸಬೇಕಾಗಿದೆ. ಗ್ರಾಮೀಣ ಪ್ರದೇಶದ ಶೈಕ್ಷಣಿಕ ಪ್ರಗತಿಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಸಮನ್ವಯ ಶಿಕ್ಷಣದ ನೀತಿ ರೂಪಿಸಿ, ಪಂಚವಾರ್ಷಿಕ ಯೋಜನೆಯಲ್ಲಿ ಪ್ರಾಥಮಿಕ ಶಿಕ್ಷಣಕ್ಕೆ ಹೆಚ್ಚಿನ ಪ್ರಾಶಸ್ತ್ಯ ನೀಡಬೇಕು. ಪ್ರಾಥಮಿಕ ಶಿಕ್ಷಣದ ಗುಣಮಟ್ಟವನ್ನು ಹೆಚ್ಚಿಸಲು ಪಠ್ಯಕ್ರಮ, ಬೋಧನಾ ಕ್ರಮ ಮತ್ತು ಶಿಕ್ಷಣ ಸಾಧನ ಸಲಕರಣೆಗಳನ್ನು ಪೂರೈಸಲು ಸರ್ಕಾರ, ಶಿಕ್ಷಕರು, ಪೋಷಕರು ಇಡೀ ಸಮಾಜವೇ ಶ್ರಮಿಸ ಬೇಕು. ಮಧ್ಯದಲ್ಲಿಯೇ ಶಾಲೆಯನ್ನು ಬಿಡುವ ಮಕ್ಕಳ ಸಂಖ್ಯೆಯನ್ನು ಕಡಿಮೆಗೊಳಿಸಲು ಸಮುದಾಯ ಸಹಭಾಗಿತ್ವ ಸೂಕ್ತವೆನಿಸುತ್ತದೆ.

ಗ್ರಾಮೀಣ ಪ್ರದೇಶಗಳಲ್ಲಿರುವ ಬಡತನ, ಅಸಮಾನತೆ, ನಿರುದ್ಯೋಗ, ಅನಕ್ಷರತೆ, ಜಾತೀಯತೆ ಇವುಗಳನ್ನು ಹೋಗಲಾಡಿಸುವಂತಹ ಪ್ರಯತ್ನವನ್ನು ವ್ಯಕ್ತಿ, ಸಂಘ-ಸಂಸ್ಥೆಗಳು, ಸರ್ಕಾರ ಮತ್ತು ಸಮಾಜವು ಜಂಟಿಯಾಗಿ ಮಾಡಬೇಕಾಗಿದೆ. ಆಗ ಮಾತ್ರ ಗ್ರಾಮೀಣ ಪ್ರದೇಶದಲ್ಲಿ ಪ್ರಾಥಮಿಕ ಶಿಕ್ಷಣ ಸುಧಾರಣೆಯಾಗಲು ಸಾಧ್ಯ ಎಂಬ ಆಶಯವನ್ನು ವ್ಯಕ್ತಪಡಿಸಿದ್ದಾರೆ.

ಜ್ಯೋತಿ ಶಶಿಕುಮಾರ್ (೨೦೦೭) ಅವರ 'ಮಹಿಳಾ ಸಮಾಜಿಕತೆ' ಎನ್ನುವ ಪುಸ್ತಕದಲ್ಲಿ ಪ್ರಮುಖವಾಗಿ ಎರಡು ಭಾಗವಾಗಿ ವಿಂಗಡಿಸಿಕೊಂಡಿದ್ದಾರೆ. ಇದರಲ್ಲಿ ಸಮಾಜ ಮತ್ತು ಮಹಿಳೆ ಎನ್ನುವ ಭಾಗದಲ್ಲಿ ಶಿಕ್ಷಣ ವ್ಯವಸ್ಥೆ ಮತ್ತು ಮಹಿಳೆಯನ್ನು ಕುರಿತು ಚರ್ಚಿಸಿದ್ದಾರೆ. ಭಾರತದ ಜನಸಂಖ್ಯೆಯಲ್ಲಿ ಅರ್ಧದಷ್ಟು ಮಹಿಳೆಯರಿದ್ದಾರೆ. ಆದರೆ ಇಲ್ಲಿ ಮಹಿಳಾ ಸಾಕ್ಷರತೆ ಮತ್ತು ಶಿಕ್ಷಣ ಅತ್ಯಂತ ಕಡಿಮೆ ಮಟ್ಟದಲ್ಲಿದೆ. ಬಹುಮಟ್ಟಿಗೆ ಮಹಿಳೆಯರು ಶಿಕ್ಷಣದಿಂದ ವಂಚಿತರಾಗಿದ್ದಾರೆ. ಇದಕ್ಕೆ ಕಾರಣ ನಮ್ಮ ಸಮಾಜಿಕ ವ್ಯವಸ್ಥೆ ಹಾಗೂ ಶಾಲಾ ಪದ್ಧತಿ. ಇದರ ಜೊತೆಗೆ ಕುಟುಂಬಗಳಲ್ಲಿ ಇಂದಿಗೂ ಹೆಣ್ಣುಮಕ್ಕಳ ಶಿಕ್ಷಣದ ಬಗ್ಗೆ ತಾತ್ಸರ ಮನೋಭಾವವಿದೆ. ಗಂಡು ಮತ್ತು ಹೆಣ್ಣುಮಕ್ಕಳ ನಡುವೆ ತಾರತಮ್ಯ ಪಕ್ಷಪಾತವಿದೆ. ಹೆಣ್ಣುಮಕ್ಕಳ ಶಾಲಾ ಭಾಗವಹಿಸುವಿಕೆಗೆ ಸಾಂಪ್ರದಾಯ, ಕಟ್ಟುಪಾಡುಗಳು ಬಾಲಕಿಯರ ಮೇಲೆ ಹೆಚ್ಚು ಹೇರಲಾಗುತ್ತಿದೆ. ಹಾಗೆಯೇ ಹೆಣ್ಣುಮಕ್ಕಳಿಗೆ ಕೌಟುಂಬಿಕ, ಸಾಮಾಜಿಕ ಶಿಕ್ಷಣ ಸಂಸ್ಥೆಗಳಲ್ಲಿ ಲಿಂಗಭೇದದಿಂದಾಗಿಯೇ ಉತ್ತಮ ಕಲಿಕೆಯ ಅವಕಾಶ ದೊರೆಯುತ್ತಿಲ್ಲ ಎಂಬ ಅಭಿಪ್ರಾಯವನ್ನು ಲೇಖಕರು ವ್ಯಕ್ತಪಡಿಸಿದ್ದಾರೆ.

ಹೀಗೆ ಪ್ರಾಥಮಿಕ ಶಿಕ್ಷಣದ ವಿವಿಧ ಆಯಾಮ ಕುರಿತು ಅನೇಕ ಅಧ್ಯಯನಗಳು ನಮಗೆ ಸಿಗುತ್ತವೆ. ಒಟ್ಟಾರೆ ಇದುವರೆಗೂ ನಡೆದಿರುವ ಅಧ್ಯಯನಗಳಿಂದ ತಿಳಿದುಬರುವ ಅಂಶಗಳೆಂದರೆ ಬಹುತೇಕ ಅಧ್ಯಯನಗಳ ವ್ಯಾಪ್ತಿಯು ರಾಜ್ಯ, ಜಿಲ್ಲೆ, ಹೆಚ್ಚೆಂದರೆ ತಾಲ್ಲೂಕು ಮಟ್ಟಕ್ಕೆ ಸೀಮಿತವಾಗಿವೆ. ಇನ್ನೂ ಕೆಲವು ಅಧ್ಯಯನಗಳು ಗ್ರಾಮಮಟ್ಟದಲ್ಲಿ ನಡೆದಿದ್ದರೂ ಅವು ವಿರಳ. ಗ್ರಾಮ ಹಾಗೂ ವಾರ್ಡ್ ಮಟ್ಟದಲ್ಲಿ ಶೈಕ್ಷಣಿಕ ವ್ಯವಸ್ಥೆಯ ಸಾಮಾಜಿಕ ಸ್ವರೂಪವನ್ನು ಹಿಡಿದಿಡುವಲ್ಲಿ ಹಾಗೂ ಪ್ರಾಥಮಿಕ ಶಿಕ್ಷಣದಲ್ಲಿ ಲಿಂಗ-ಸಂಬಂಧಿ ಆಯಾಮಕ್ಕೆ ಇರುವ ಸಾಮಾಜಿಕ-ಆರ್ಥಿಕ ಅಂಶಗಳನ್ನು

ತಿಳಿಸುವಲ್ಲಿ ಕೆಲವು ಅಧ್ಯಯನಗಳು ವಿಫಲವಾಗಿವೆ. ಇನ್ನು ಕೆಲವು ಅಧ್ಯಯನಗಳು ಶಾಲಾ ಭಾಗವಹಿಸುವಿಕೆಯನ್ನು ಶಿಕ್ಷಣ ಏಕಮಾತ್ರ ಚಲಕವಾಗಿ ವಿಶ್ಲೇಷಿಸಿವೆ. ಆದರೆ ಶಾಲೆಯ ಕ್ರಿಯಾತ್ಮಕ ಚಟುವಟಿಕೆಯು ಶಾಲೆ ನೆಲೆಗೊಂಡಿರುವ ಪರಿಸರದ ಸಾಮಾಜಿಕ-ಆರ್ಥಿಕ ಅಂಶಗಳಿಂದ ಪ್ರತಿಬಿಂಬಿತ ವಾಗಿರುತ್ತದೆ ಎನ್ನುವ ಅಂಶವನ್ನು ಕೆಲವು ಅಧ್ಯಯನಗಳು ಎತ್ತಿ ಹಿಡಿಯುವಲ್ಲಿ ವಿಫಲವಾಗಿವೆ.

ಈ ಕಾರಣದಿಂದ (ಶಾಲಾ ಶಿಕ್ಷಣದಲ್ಲಿ ಇರಬಹುದಾದ ಲಿಂಗ-ಸಂಬಂಧಿ ಆಯಾಮವನ್ನು ಅರ್ಥಮಾಡಿಕೊಳ್ಳಬೇಕಾದ ಅಗತ್ಯವಿದೆ. ಲಿಂಗ-ಸಂಬಂಧಿ ಆಯಾಮಗಳು ಶಾಲಾ ಶಿಕ್ಷಣದಲ್ಲಿ ಹೇಗೆ) ಇದೆ ಎಂಬುದನ್ನು ಪರಿಭಾವಿಸಿಕೊಳ್ಳುವುದು, (ಇದಕ್ಕೂ ಪ್ರಾದೇಶಿಕ ಅಭಿವೃದ್ಧಿಗೂ, ಶೈಕ್ಷಣಿಕ ಹಿಂದುಳಿದಿರುವಿಕೆಗೂ ಸಂಬಂಧವಿದೆಯೇ? ಹಾಗೆಯೇ ಲಿಂಗ-ಸಂಬಂಧಿ ಅಸಮಾನತೆಗಳಿಗೂ ಅಧ್ಯಯನ ಕ್ಷೇತ್ರದ ಸಾಮಾಜಿಕ ಅಂಶಗಳಿಗೂ ಸಂಬಂಧವಿದೆಯೆ? ಹೆಣ್ಣು ಮಕ್ಕಳ ಶೈಕ್ಷಣಿಕ ಅಭಿವೃದ್ಧಿಗೆ ಸಾಮಾಜಿಕ ಅಂಶಗಳು ಎಷ್ಟರಮಟ್ಟಿಗೆ ತೊಡಕಾಗಿವೆ? ಆರ್ಥಿಕ ಅಂಶಗಳು ಎಷ್ಟರಮಟ್ಟಿಗೆ ತಡೆಯೊಡ್ಡುತ್ತಿವೆಯೇ?) ಹೀಗೆ ಮೇಲಿನ ಪ್ರಶ್ನೆಗಳಿಗೆ ಉತ್ತರಗಳನ್ನು ಸ್ಥಳೀಯ ಸಾಮಾಜಿಕ-ಆರ್ಥಿಕ ನೆಲೆಯಲ್ಲಿ ಕಂಡುಕೊಳ್ಳುವುದು ಪ್ರಸ್ತುತ ಅಧ್ಯಯನದ ಮೂಲ ಆಶಯ.

ನಿರ್ದಿಷ್ಟವಾಗಿ ಏಕೆ ಹೆಣ್ಣುಮಕ್ಕಳ ಶಾಲಾ ಭಾಗವಹಿಸುವಿಕೆಯೂ ನಿರೀಕ್ಷಿತ ಮಟ್ಟವನ್ನು ತಲುಪುತ್ತಿಲ್ಲ? ಇದಕ್ಕೆ ಇರುವ ಕಾರಣಗಳೇನು? ಸಾಮಾಜಿಕವಾದ ಕಾರಣಗಳೇ? ಆರ್ಥಿಕವಾದ ಕಾರಣಗಳೇ? ಶೈಕ್ಷಣಿಕವಾದ ಕಾರಣಗಳೇ? ರಾಜಕೀಯವಾದ ಕಾರಣಗಳೇ? ಇವುಗಳಲ್ಲಿ ಯಾವುದರ ಪ್ರಭಾವ ಹೆಚ್ಚು. ಇಂತಹ ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡುಕೊಳ್ಳುವ ಪ್ರಯತ್ನ ಅನೇಕ ಅಧ್ಯಯನ ಗಳ ಮೂಲಕ ನಡೆದಿದೆ.

ಹೀಗಾಗಿ ಪ್ರಸ್ತುತ ಅಧ್ಯಯನದಲ್ಲಿ ಲಿಂಗ-ಸಂಬಂಧಿ ಆಯಾಮದ ಸ್ವರೂಪ, ಶಾಲೆಗೆ ಕಳುಹಿಸುವ ಪೋಷಕರ ಮನೋಪ್ರವೃತ್ತಿ, ಆದಾಯ, ಜಾತಿ, ವೃತ್ತಿ, ಭೂಮಿ, ಕುಟುಂಬದ ರಚನೆ, ವಿವಾಹ ಮುಂತಾದ ಅಂಶಗಳು ಹೆಣ್ಣುಮಕ್ಕಳ ಶಿಕ್ಷಣದ ಮೇಲೆ ಹೇಗೆ ಪ್ರಭಾವ ಬೀರುತ್ತವೆ ಎಂಬುದನ್ನು ಅರ್ಥಮಾಡಿಕೊಳ್ಳುವುದು ಈ ಅಧ್ಯಯನದ ಮೂಲ ಆಶಯ. ಶಿಕ್ಷಣದಲ್ಲಿ ಲಿಂಗಸಂಬಂಧಿ ಆಯಾಮ ಕುರಿತು ನಡೆದಿರುವ ಅಧ್ಯಯನಗಳು ಕರ್ನಾಟಕದ ಮಟ್ಟಿಗೆ ಕಡಿಮೆ ಎಂದು ಹೇಳಬಹುದು. ವಿಶೇಷವಾಗಿ ಅಧ್ಯಯನದಲ್ಲಿ ಪ್ರಾಥಮಿಕ ಶಿಕ್ಷಣಕ್ಕೆ ಹೆಚ್ಚಿನ ಮಹತ್ವವನ್ನು ಕೊಡಲಾಗಿದೆ. ಈ ಕ್ಷೇತ್ರದ ಅಭಿವೃದ್ಧಿಗೆ ಅನೇಕ ಸಮಸ್ಯೆಗಳಿವೆ. ಇವುಗಳು ಪ್ರತಿ ಶಾಲಾ ಮಟ್ಟದಲ್ಲಿ ಹೇಗಿದೆ ಮತ್ತು ಶಾಲೆ ನೆಲೆಗೊಂಡಿರುವ ವಾರ್ಡ್‌ಮಟ್ಟದ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹೆಣ್ಣುಮಕ್ಕಳ ಶಾಲಾ ಭಾಗವಹಿಸುವಿಕೆಯನ್ನು ಅರ್ಥಮಾಡಿಕೊಳ್ಳುವುದು ಈ ಅಧ್ಯಯನದ ಮತ್ತೊಂದು ಆಶಯ. ಹಾಗೆಯೇ ಹೆಣ್ಣುಮಕ್ಕಳು ಶಾಲಾ ಶಿಕ್ಷಣದಲ್ಲಿ ವಂಚಿತರಾಗಲು ಇರಬಹುದಾದ ಲಿಂಗ-ಸಂಬಂಧಿ ಪ್ರಶ್ನೆಗಳನ್ನು ಮಗುವಿನ ಕೌಟುಂಬಿಕ ರಚನೆಯ ನೆಲೆಯಲ್ಲಿ ಅರ್ಥಮಾಡಿಕೊಳ್ಳಲು ಪ್ರಸ್ತುತ ಪ್ರಬಂಧದಲ್ಲಿ ಪ್ರಯತ್ನಿಸಲಾಗಿದೆ.

## ೧.೩. ಅಧ್ಯಯನದ ಉದ್ದೇಶಗಳು

೧. ಶಾಲಾ ಶಿಕ್ಷಣದ ಸಾರ್ವತ್ರೀಕರಣಕ್ಕೆ ನಡೆದಿರುವ ಪ್ರಯತ್ನಗಳನ್ನು ವಿಶ್ಲೇಷಿಸುವುದು.

೨. ಮಹಿಳಾ ಶಿಕ್ಷಣ ನಡೆದು ಬಂದ ದಾರಿಯನ್ನು ಗುರುತಿಸುವ ಜೊತೆಗೆ ಸ್ವಾತಂತ್ರ್ಯ ನಂತರದಲ್ಲಿ ಮಹಿಳಾ ಶಿಕ್ಷಣದ ಪ್ರಗತಿಯನ್ನು ಗುರುತಿಸುವುದು.

೩. ಶಾಲಾ ದಾಖಲಾತಿ ಮತ್ತು ಮಧ್ಯದಲ್ಲಿ ಶಾಲೆ ಬಿಟ್ಟ ಮಕ್ಕಳಲ್ಲಿ ಲಿಂಗ-ಸಂಬಂಧಿ ಸ್ವರೂಪವನ್ನು ಗುರುತಿಸುವುದು.

೪. ಹೆಣ್ಣುಮಕ್ಕಳ ಶಿಕ್ಷಣಕ್ಕೂ ಕುಟುಂಬದ ಆರ್ಥಿಕ ಪರಿಸ್ಥಿತಿಗೂ ಇರುವ ಸಂಬಂಧವನ್ನು ಅರ್ಥಮಾಡಿಕೊಳ್ಳುವುದು.

೫. ಮಕ್ಕಳ ಶಿಕ್ಷಣದ ಬಗ್ಗೆ ಪೋಷಕರ ಮನೋಪ್ರವೃತ್ತಿಯನ್ನು ವಿಶ್ಲೇಷಿಸುವುದು.

೬. ಹೆಣ್ಣುಮಕ್ಕಳ ಶೈಕ್ಷಣಿಕ ಅಭಿವೃದ್ಧಿಗೆ ಸರ್ಕಾರಗಳು ರೂಪಿಸಿದ ಯೋಜನೆಗಳು ಹೇಗೆ ಆಚರಣೆಗೆ ಬಂದಿದೆ ಎಂಬುದನ್ನು ಪರಿಶೀಲಿಸುವುದು.

## ೧.೪. ಅಧ್ಯಯನದ ವಿಧಾನ

ಈ ಸಂಶೋಧನಾ ಪ್ರಬಂಧವು ಎಂಫಿರಿಕಲ್ ಅಧ್ಯಯನವಾಗಿರುವುದರಿಂದ ಪ್ರಾಥಮಿಕ ಮತ್ತು ಆನುಷಾಂಗಿಕ ಈ ಎರಡು ಮೂಲಗಳಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಮೊದಲನೆಯದಾಗಿ ವಸ್ತುನಿಷ್ಟ ವಿಶ್ಲೇಷಣೆಗಾಗಿ ಆನುಷಾಂಗಿಕ ಮೂಲಗಳಾದ ಪ್ರಕಟಿತ ಮತ್ತು ಅಪ್ರಕಟಿತ ಗ್ರಂಥಗಳಿಂದ ಮಾಹಿತಿ ಮತ್ತು ಅಂಕಿ-ಸಂಖ್ಯೆಗಳನ್ನು ಕಲೆಹಾಕಲಾಗಿದೆ. ಇವುಗಳಲ್ಲಿ ಶಾಲೆಗಳ ದಾಖಲೆಗಳು, ಶಿಕ್ಷಣ ಇಲಾಖೆಯ ಪ್ರಕಟಣೆಗಳು, ಶಿಕ್ಷಣ ಆಯೋಗಗಳ ವರದಿಗಳು, ಜನಗಣತಿ ವರದಿಗಳು, ಮಾನವ ಅಭಿವೃದ್ಧಿ ವರದಿಗಳು, ಕರ್ನಾಟಕ ಸರ್ಕಾರದ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ವರದಿಗಳು, ಯೋಜನಾ ಇಲಾಖೆಯ ಪ್ರಕಟಣೆಗಳಿಂದ ಮತ್ತು ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳು ಪ್ರಕಟಿಸುವ ಜಿಲ್ಲಾ ಅಂಕಿ-ಅಂಶದಿಂದ ಮಾಹಿತಿಯನ್ನು ಪಡೆಯಲಾಗಿದೆ. ಜೊತೆಗೆ ಬೇರೆ ಬೇರೆ ವಿಶ್ವ ವಿದ್ಯಾಲಯಕ್ಕೆ ಸಲ್ಲಿಸಿದ ಸಂಪ್ರಬಂಧಗಳು, ಸಮಾಜ ಸಂಶೋಧನಾ ಪತ್ರಿಕೆಗಳು ಇತ್ಯಾದಿ ಮೂಲಗಳಿಂದ ಮಾಹಿತಿಯನ್ನು ಪಡೆಯಲಾಗಿದೆ.

ಶಿಕ್ಷಣದಲ್ಲಿ ಇರುವ ಲಿಂಗ-ಸಂಬಂಧಿ ಆಯಾಮಗಳ ಬಗ್ಗೆ ರಾಜ್ಯ, ರಾಷ್ಟ್ರ ಮತ್ತು ಅಂತರಾಷ್ಟ್ರೀಯ ನಿಯತಕಾಲಿಕೆಗಳಲ್ಲಿ ಬಂದಿರುವ ಮಾಹಿತಿಯನ್ನು ಪಡೆಯಲಾಗಿದೆ. ಶಿಕ್ಷಣ ಕ್ಷೇತ್ರ ಮತ್ತು ಮಹಿಳಾ ಅಧ್ಯಯನದಲ್ಲಿ ಪರಿಣಿತ ಹೊಂದಿದ ವಿವಿಧ ತಜ್ಞರೊಂದಿಗೆ ನಡೆದ ಅನೌಪಚಾರಿಕ ಚರ್ಚೆ, ಸಂವಾದ, ವಿಚಾರ ಸಂಕಿರಣಗಳಲ್ಲಿ ಮಂಡಿತವಾದ ಉಪನ್ಯಾಸಗಳನ್ನು ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಅಧ್ಯಯನಕ್ಕೆ ಪೂರಕವಾದ ಪ್ರಾಥಮಿಕ ಮಾಹಿತಿಯನ್ನು ಕ್ಷೇತ್ರಕಾರ್ಯದ ಮೂಲಕ

ಸಂಗ್ರಹಿಸಲಾಗಿದೆ. ಕ್ಷೇತ್ರಕಾರ್ಯಕ್ಕೆ ಎರಡು ಪಟ್ಟಣ ಪಂಚಾಯತಿಗಳನ್ನು ಆಯ್ಕೆಮಾಡಿಕೊಳ್ಳಲಾಗಿದೆ. ಒಂದು ಕೊರಟಗೆರೆ ಪಟ್ಟಣ ಪಂಚಾಯಿತಿ. ಇದು ತುಮಕೂರು ಜಿಲ್ಲೆಯಲ್ಲಿ ಬರುವ ಒಂದು ತಾಲ್ಲೂಕು ಕೇಂದ್ರ. ಈ ಪಟ್ಟಣ ಪಂಚಾಯಿತಿಯು ಕರ್ನಾಟಕದಲ್ಲಿ ಶೈಕ್ಷಣಿಕವಾಗಿ ಮುಂದುವರಿದ ಬೆಂಗಳೂರು ವಿಭಾಗದಲ್ಲಿದೆ. ಮತ್ತೊಂದು ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ಕಮಲಾಪುರ ಪಟ್ಟಣ ಪಂಚಾಯಿತಿ. ಇದು ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದ ಹೈದ್ರಾಬಾದ್ ಕರ್ನಾಟಕ ಪ್ರದೇಶ ದಲ್ಲಿದೆ. ಈ ಪಟ್ಟಣಗಳಲ್ಲಿ ಬರುವ ಒಟ್ಟು ಕುಟುಂಬಗಳಲ್ಲಿ ಶೇಕಡ ೧೦ರಷ್ಟು ಕುಟುಂಬಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಜೊತೆಗೆ ಈ ಎರಡು ಪಟ್ಟಣಗಳಲ್ಲಿ ಇರುವ ೨೦ ಶಾಲೆಗಳನ್ನು ಮತ್ತು ೬೦೦ ಕುಟುಂಬಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಇದರಲ್ಲಿ ಪರಿಶಿಷ್ಟ ಜಾತಿಗೆ ಸೇರಿದ ೧೫೦ ಕುಟುಂಬಗಳು, ಪರಿಶಿಷ್ಟ ಪಂಗಡಕ್ಕೆ ಸೇರಿದ ೧೫೦ ಕುಟುಂಬಗಳು, ಮತ್ತು ಮುಸ್ಲಿಂ ಸಮುದಾಯಕ್ಕೆ ಸೇರಿದ ೧೫೦ ಕುಟುಂಬಗಳು, ಇತರ ಸಮುದಾಯಗಳಿಗೆ ಸೇರಿದ ೧೫೦ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಲಾಗಿದೆ. ಹೀಗೆ ಆಯ್ಕೆ ಮಾಡಿಕೊಂಡ ಕುಟುಂಬಗಳ ಸಾಮಾಜಿಕ, ರಾಜಕೀಯ, ಶೈಕ್ಷಣಿಕ ಹಾಗೂ ಆರ್ಥಿಕ ಸ್ಥಿತಿ-ಗತಿಗಳು ಮಕ್ಕಳ ಶಿಕ್ಷಣದ ಮೇಲೆ ಯಾವ ರೀತಿಯ ಪರಿಣಾಮವನ್ನುಂಟು ಮಾಡಿದೆ ಎಂಬುದನ್ನು ಅರ್ಥಮಾಡಿಕೊಳ್ಳಲು ಮಾಹಿತಿ ಸಂಗ್ರಹಿಸಲಾಗಿದೆ. ಅಧ್ಯಯನ ಕ್ಷೇತ್ರದಲ್ಲಿನ ಜಾತಿವಾರು ಜನಸಂಖ್ಯೆ, ಭೂಹಿಡುವಳಿ, ಶಿಕ್ಷಣಮಟ್ಟ, ಸಾಮಾಜಿಕ ಸ್ಥಿತಿ-ಗತಿಗಳನ್ನು ಜಾತಿವಾರು ಸಂಗ್ರಹಿಸಲಾಗಿದೆ. ಎರಡನೆದಾಗಿ ಪ್ರಾಥಮಿಕ ಮಾಹಿತಿಯು ಪ್ರಶ್ನಾವಳಿಗಳನ್ನು ಬಳಸಿ, ಶಿಕ್ಷಕರು, ಪೋಷಕರು, ಎಸ್.ಡಿ.ಎಂ.ಸಿ. ಸದಸ್ಯರುಗಳನ್ನು ನೇರವಾಗಿ ಸಂದರ್ಶನ ಮಾಡಿ ಚರ್ಚಿಸುವ ಮೂಲಕ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

ಶಾಲೆ ಬಿಟ್ಟ ಮಕ್ಕಳನ್ನು ಮತ್ತು ಪೋಷಕರನ್ನು ಕೇಸ್ ಸ್ಟಡಿ ಮಾಡಲಾಗಿದೆ. ನಿಮ್ಮ ಮಕ್ಕಳು ಶಾಲೆ ಬಿಡಲು ಪ್ರಮುಖ ಕಾರಣವೇನು? ಅವುಗಳು ಆರ್ಥಿಕ ಮತ್ತು ಸಾಮಾಜಿಕ ಕಾರಣಗಳೇ ಇತ್ಯಾದಿ ಪ್ರಶ್ನೆಗಳನ್ನು ಕೇಳಲಾಗಿದೆ. ಪ್ರಶ್ನಾವಳಿಗಳು ಹಲವಾರು ಸೂಚಿಗಳ ಆಧಾರದ ಮೇಲೆ ರೂಪಿಸಲಾಗಿದೆ. ಕುಟುಂಬದ ವಿವರ, ಶೈಕ್ಷಣಿಕ ಮಟ್ಟ, ಭೂಹಿಡುವಳಿ, ಜಾತಿ, ಶಾಲೆಗಳಲ್ಲಿನ ಸೌಲಭ್ಯಗಳು ಇತ್ಯಾದಿ ಅಂಶಗಳ ಹಿನ್ನೆಲೆಯಲ್ಲಿ ಪ್ರಶ್ನಾವಳಿಗಳನ್ನು ತಯಾರಿಸಿ ಪ್ರಾಥಮಿಕ ಮಾಹಿತಿ ಪಡೆಯಲಾಗಿದೆ. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಪ್ರದೇಶದ ಜನರು ತಮ್ಮ ಮಕ್ಕಳ ಶಿಕ್ಷಣದ ಬಗ್ಗೆ ಅದರಲ್ಲಿಯೂ, ಹೆಣ್ಣುಮಕ್ಕಳ ಶಿಕ್ಷಣದ ಬಗ್ಗೆ ಯಾವ ಮನೋಪ್ರವೃತ್ತಿ ಹೊಂದಿದ್ದಾರೆ ಎಂಬುದನ್ನು ನೇರವಾಗಿ ಸಂದರ್ಶಿಸಿ ಅವರಿಂದ ಮಾಹಿತಿ ಪಡೆದುಕೊಳ್ಳಲಾಗಿದೆ. ಸಂಗ್ರಹಿಸಿದ ಮಾಹಿತಿ ಯನ್ನು ವಿಭಾಗಿಸಿ, ಕೋಷ್ಟಕಗಳನ್ನಾಗಿ ಬಳಸಿ ವಿಶ್ಲೇಷಿಸಲಾಗಿದೆ. ಕೋಷ್ಟಕಗಳು ಬಳಸದೇ ಇರುವ ಭಾಗಗಳಲ್ಲಿ ಶೇಕಡವಾರು ಪ್ರಮಾಣದಲ್ಲಿ ಮಾಹಿತಿಯನ್ನು ವಿಶ್ಲೇಷಿಸಲಾಗಿದೆ. ಹೀಗೆ ಮಾಹಿತಿಯನ್ನು ವಿಶ್ಲೇಷಿಸಿದರೂ, ಕ್ಷೇತ್ರಕಾರ್ಯಕ್ಕೆ ಆಯ್ಕೆ ಮಾಡಿಕೊಂಡ ಪ್ರದೇಶದ ಭೌಗೋಳಿಕ ಪರಿಸರ, ಸಾಮಾಜಿಕ,

ಆರ್ಥಿಕ ಪರಿಸ್ಥಿತಿ, ಸಾಕ್ಷರತೆಯ ಪ್ರಮಾಣ ಮತ್ತು ಶಿಕ್ಷಣದ ಬಗ್ಗೆ ಸ್ಥಳೀಯರ ಮನೋಪ್ರವೃತ್ತಿ ಇತ್ಯಾದಿ ಅಂಶಗಳನ್ನು ಸೂಕ್ಷ್ಮವಾಗಿ ಪರಿಗಣಿಸಲಾಗಿದೆ.

### ೧.೫. ಅಧ್ಯಯನ ಕ್ಷೇತ್ರದ ಆಯ್ಕೆ

ಪ್ರಾದೇಶಿಕ ಅಸಮಾನತೆ ಅಧ್ಯಯನ ಸಮಿತಿಯು ರಾಜ್ಯದ ತಾಲ್ಲೂಕುಗಳನ್ನು ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ, ಹಿಂದುಳಿದ, ಸ್ವಲ್ಪ ಹಿಂದುಳಿದ, ಅತ್ಯಂತ ಹಿಂದುಳಿದ ತಾಲ್ಲೂಕುಗಳು ಎಂದು ಗುರುತಿಸಲು ಆರ್ಥಿಕ, ಸಾಮಾಜಿಕ ಕ್ಷೇತ್ರಗಳಿಗೆ ಸಂಬಂಧಿಸಿದ ಸುಮಾರು ೩೪ ಸೂಚ್ಯಾಂಕಗಳನ್ನು ಬಳಸಿಕೊಂಡಿದೆ. ಅದರಲ್ಲಿ ಶಿಕ್ಷಣವು ಒಂದು. ಶೈಕ್ಷಣಿಕವಾಗಿ ಮುಂದುವರಿದ ಅಥವಾ ಹಿಂದುಳಿದ ಪ್ರದೇಶವನ್ನು ಗುರುತಿಸಲು ಆ ಪ್ರದೇಶದ ಒಟ್ಟು ಸಾಕ್ಷರತೆ (ಮಹಿಳೆ ಮತ್ತು ಪುರುಷರು ಬೇರೆ ಬೇರೆ) ಮಕ್ಕಳು-ಶಿಕ್ಷಕರ ಪರಿಮಾಣ, ಮಧ್ಯದಲ್ಲಿ ಶಾಲೆಬಿಟ್ಟ (೦೬-೧೪ ವಯೋಮಾನದ) ಮಕ್ಕಳ ಪ್ರಮಾಣ, ಮಧ್ಯದಲ್ಲಿ ಶಾಲೆ ಬಿಟ್ಟ ಹೆಣ್ಣು (೦೬-೧೪ ವಯೋಮಾನದ) ಮಕ್ಕಳ ಸಂಖ್ಯೆ, ಸರ್ಕಾರಿ, ಅನುದಾನಿತ ಮತ್ತು ಅನುದಾನರಹಿತ ಶಿಕ್ಷಣ ಸಂಸ್ಥೆಗಳ ಸಂಖ್ಯೆ, ಶಾಲಾ ದಾಖಲಾತಿಯ ಪ್ರಮಾಣ ಇತ್ಯಾದಿ ಸೂಚ್ಯಂಕಗಳನ್ನು ಬಳಸಿಕೊಂಡಿದೆ. ಇದನ್ನು ಮೂಲಸೌಲಭ್ಯ ಸೂಚ್ಯಂಕ ಎಂದು ಕರೆಯಲಾಗಿದೆ. ಇದನ್ನು ಬಳಸಿಕೊಂಡು ಕರ್ನಾಟಕದ ಉತ್ತರ ಭಾಗ ಹಾಗೂ ದಕ್ಷಿಣ ಭಾಗಗಳನ್ನು ಒಳಗೊಂಡಿರುವ ನಾಲ್ಕು ಕಂದಾಯ ವಿಭಾಗದಲ್ಲಿ ಬರುವ ೧೭೫ ತಾಲ್ಲೂಕುಗಳನ್ನು ಸಾಪೇಕ್ಷವಾಗಿ ಮಂದುವರಿದ, ಹಿಂದುಳಿದ, ಸ್ವಲ್ಪ ಹಿಂದುಳಿದ, ಅತ್ಯಂತ ಹಿಂದುಳಿದ ವಿಭಾಗಗಳೆಂದು ಗುರುತಿಸಿದೆ.

ಶೈಕ್ಷಣಿಕ ಮೂಲಸೌಲಭ್ಯ ಸೂಚ್ಯಂಕದ ಪ್ರಕಾರ ೯೦ ತಾಲ್ಲೂಕುಗಳು ದಕ್ಷಿಣ ಕರ್ನಾಟಕ ಪ್ರದೇಶದಲ್ಲಿ ಮತ್ತು ೫೩ ತಾಲ್ಲೂಕುಗಳು ಉತ್ತರ ಕರ್ನಾಟಕ ಪ್ರದೇಶದಲ್ಲಿ ಸಾಪೇಕ್ಷವಾಗಿ ಮುಂದುವರಿದಿವೆ. ಇವುಗಳ ಸಂಖ್ಯೆ ಒಟ್ಟು ೧೪೩. ದಕ್ಷಿಣ ಕರ್ನಾಟಕ ಪ್ರದೇಶಗಳಲ್ಲಿ ಮೂರು ತಾಲ್ಲೂಕು, ಉತ್ತರ ಕರ್ನಾಟಕ ಪ್ರದೇಶದಲ್ಲಿ ಎಂಟು ತಾಲ್ಲೂಕು ಹಿಂದುಳಿದ ತಾಲ್ಲೂಕುಗಳಾಗಿವೆ. ಇವುಗಳ ಒಟ್ಟು ಸಂಖ್ಯೆ ಹನ್ನೊಂದು. ದಕ್ಷಿಣ ಕರ್ನಾಟಕ ಪ್ರದೇಶದಲ್ಲಿ ಸ್ವಲ್ಪ ಹಿಂದುಳಿದಿರುವ ತಾಲ್ಲೂಕುಗಳ ಸಂಖ್ಯೆ ಎರಡು ಇದ್ದರೆ ಉತ್ತರ ಕರ್ನಾಟಕ ಪ್ರದೇಶದಲ್ಲಿ ಇವುಗಳ ಸಂಖ್ಯೆ ಒಂಬತ್ತು. ಒಟ್ಟು ಸ್ವಲ್ಪ ಹಿಂದುಳಿದಿರುವ ತಾಲ್ಲೂಕುಗಳ ಸಂಖ್ಯೆ ಹನ್ನೊಂದು. ವಿಶೇಷವೆಂದರೆ ಅತ್ಯಂತ ಹಿಂದುಳಿದ ತಾಲ್ಲೂಕುಗಳು ದಕ್ಷಿಣ ಕರ್ನಾಟಕ ಪ್ರದೇಶದಲ್ಲಿ ಇಲ್ಲವಾದರೆ, ಉತ್ತರ ಕರ್ನಾಟಕ ಪ್ರದೇಶದಲ್ಲಿ ಇವುಗಳ ಸಂಖ್ಯೆ ಹತ್ತು ಇವೆ (ಪ್ರಶಾಂತ್ ಎಚ್.ಡಿ., ೨೦೦೫).

ಇಲ್ಲಿ ಸ್ಪಷ್ಟವಾಗುವ ಅಂಶವೆಂದರೆ ದಕ್ಷಿಣ ಕರ್ನಾಟಕ ಪ್ರದೇಶವು ಉತ್ತರ ಕರ್ನಾಟಕ ಪ್ರದೇಶಕ್ಕಿಂತ ಸಾಪೇಕ್ಷವಾಗಿ ಅಭಿವೃದ್ಧಿ ಸಾಧಿಸಿದ ತಾಲ್ಲೂಕುಗಳನ್ನು ಹೆಚ್ಚಾಗಿ ಹೊಂದಿದೆ ಎಂಬುದು ಕರ್ನಾಟಕದಲ್ಲಿ ಬರುವ ಎರಡು ವಿಭಾಗಗಳನ್ನು ತುಲನಾತ್ಮಕವಾಗಿ ನೋಡಿದಾಗ ಬೆಂಗಳೂರು ವಿಭಾಗಕ್ಕಿಂತ ಗುಲ್ಬರ್ಗಾ ವಿಭಾಗದಲ್ಲಿ ಅತ್ಯಂತ ಹಿಂದುಳಿದ ತಾಲ್ಲೂಕುಗಳು ಕಂಡುಬರುತ್ತವೆ.

ಶಿಕ್ಷಣದಲ್ಲಿ ಪ್ರಾದೇಶಿಕ ಭಿನ್ನತೆಯ ಅಸಮತೋಲನವನ್ನು ಹಿಡಿದಿಡುವ ದೃಷ್ಟಿಯಿಂದ ಅಭಿವೃದ್ಧಿ ಹೊಂದಿದ ಬೆಂಗಳೂರು ವಿಭಾಗದ ತುಮಕೂರು ಜಿಲ್ಲೆಯ ಕೊರಟಗೆರೆ ಪಟ್ಟಣ ಪಂಚಾಯಿತಿಯನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಅಭಿವೃದ್ಧಿಯಲ್ಲಿ ಅತ್ಯಂತ ಹಿಂದುಳಿದ ಗುಲ್ಬರ್ಗಾ ವಿಭಾಗದ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ಕಮಲಾಪುರ ಪಟ್ಟಣ ಪಂಚಾಯಿತಿಯನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

**ಲಿಂಗ ಸಂಬಂಧಿ ಆಯಾಮ**

೧೯೯೦ರ ದಶಕದ ಮಧ್ಯಭಾಗದವರೆಗೂ ಅಭಿವೃದ್ಧಿ ಚರ್ಚೆಗಳಲ್ಲಿ ಸಾಂಪ್ರದಾಯಿಕ ಅರ್ಥಶಾಸ್ತ್ರದ ಪರಿಕಲ್ಪನೆಯಾದ ಆರ್ಥಿಕ ಬೆಳವಣಿಗೆಗೆ ಹೆಚ್ಚಿನ ಮಹತ್ವವನ್ನು ನೀಡಲಾಗುತ್ತಿತ್ತು. ಈ ದಶಕದ ಮಧ್ಯಭಾಗದ ನಂತರ ಅದರಲ್ಲಿಯೂ ಮೆಹಬೂಬ್-ಉಲ್-ಹಕ್ ಹಾಗೂ ಅಮಾರ್ತ್ಯಸೇನ್‌ರವರು ಅಭಿವೃದ್ಧಿ ಪಡಿಸಿದ ಮಾನವ ಅಭಿವೃದ್ಧಿ ಪರಿಕಲ್ಪನೆಯನ್ನು ರೂಪಿಸಿದ ನಂತರ, ಅಭಿವೃದ್ಧಿಯಲ್ಲಿ ಲಿಂಗ-ಸಂಬಂಧಿ ಆಯಾಮ ಇರಲೇಬೇಕಾದ ಅಗತ್ಯವನ್ನು ಒತ್ತಿಹೇಳಿದ್ದಾರೆ. ಅಷ್ಟು ಮಾತ್ರವಲ್ಲದೇ ಲಿಂಗ-ಸಂಬಂಧಿ ಆಯಾಮಗಳನ್ನು ಒಳಗೊಳ್ಳದ ಮಾನವ ಅಭಿವೃದ್ಧಿಯನ್ನು ಕಂಡುಕೊಳ್ಳಲು ಸಾಧ್ಯವೇ ಇಲ್ಲ ಎಂಬ ವಾದವನ್ನು ಪ್ರಸ್ತುತ ಪಡಿಸಿದ್ದಾರೆ (ಕರ್ನಾಟಕದ ಮಾನವ ಅಭಿವೃದ್ಧಿ ವರದಿ ೨೦೦೫, ಎಚ್.ಡಿ. ಪ್ರಶಾಂತ್, ೨೦೦೫). ತದನಂತರ ಅಭಿವೃದ್ಧಿ ಯೋಜನೆಗಳ ನೀತಿ ಹಾಗೂ ಕಾರ್ಯಕ್ರಮದಲ್ಲಿ ಲಿಂಗ-ಸಂಬಂಧಿ ಅಂಶಗಳನ್ನು ಒಳಮಾಡಿಕೊಳ್ಳುವ ಪ್ರಕ್ರಿಯೆಗೆ ಹೆಚ್ಚಿನ ಆದ್ಯತೆ ದೊರಕಲಾರಂಭಿಸಿತು. ಈ ಹಿನ್ನೆಲೆಯಲ್ಲಿ ಲಿಂಗ-ಸಂಬಂಧಿ ಆಯಾಮವನ್ನು ಅಧ್ಯಯನವು ಪರಿಭಾವಿಸಿ ಕೊಂಡಿರುತ್ತದೆ.

ಲಿಂಗ-ಸಂಬಂಧಿ ಹಾಗೂ ಲಿಂಗ-ತಾರತಮ್ಯದ ಪರಿಕಲ್ಪನೆಗಳನ್ನು ಕುರಿತು ಬೇರೆ ಬೇರೆ ವ್ಯಾಖ್ಯಾನಗಳಿವೆ. ಲಿಂಗ, ಮಹಿಳೆಯರು ಮತ್ತು ಪುರುಷರ ನಡುವಿನ ಜೈವಿಕ ವ್ಯತ್ಯಾಸವನ್ನು ಸೂಚಿಸುತ್ತದೆ. ಲಿಂಗ-ಸಂಬಂಧವು ಮಹಿಳೆಯರು ಮತ್ತು ಪುರುಷರ ಸಾಮಾಜಿಕ-ಸಂಬಂಧವನ್ನು ಮತ್ತು ವರ್ತನೆಯನ್ನು ಗುರುತಿಸುವುದಂತಹದ್ದು. ನಿರ್ದಿಷ್ಟವಾಗಿ ಸಾಂಸ್ಕೃತಿಕ ಗುಣಲಕ್ಷಣಗಳನ್ನು ಸೂಚಿಸುವ ಒಂದು ಗುಚ್ಛ. ಲಿಂಗ-ಸಂಬಂಧ ಎನ್ನುವುದು ಕೇವಲ ಮಹಿಳೆಯರಿಗೆ ಮತ್ತು ಪುರುಷರಿಗೆ ಮಾತ್ರ ಎಂಬ ಸೀಮಿತ ಅರ್ಥದಲ್ಲಿ ಬಳಸಲು ಸಾಧ್ಯವಿಲ್ಲ. ಇದು ಅವರ ನಡುವಿನ ಸಂಬಂಧಕ್ಕೂ, ಆ ಸಂಬಂಧಗಳು ಸಾಮಾಜಿಕ ವ್ಯವಸ್ಥೆಯಲ್ಲಿ, ರಚನೆಗೊಂಡಿರುವ ವಿಧಾನಕ್ಕೆ ಅಥವಾ ರೀತಿಗೆ ಅನ್ವಯಿಸಿದೆ. ಇದು ಸಂಬಂಧ ಸೂಚಕ ಪರಿಕಲ್ಪನೆಯಾಗಿರುವುದರಿಂದ ಮಹಿಳೆಯರನ್ನು ಮತ್ತು ಪುರುಷರನ್ನು ಒಳಗೊಂಡಿರುತ್ತವೆ. ಆದ್ದರಿಂದ ಈ ಪರಿಕಲ್ಪನೆಯನ್ನು ವಿಶ್ಲೇಷಣಾತ್ಮಕವಾಗಿ ಬಳಸಲಾಗುತ್ತಿದೆ.

ಲಿಂಗ-ಸಂಬಂಧಗಳಲ್ಲಿನ ವ್ಯತ್ಯಾಸ ಪುರುಷ ಮತ್ತು ಮಹಿಳೆಯರ ನಡುವಿನ ಸ್ವರೂಪ, ಅವರಿಬ್ಬರಿಗೆ ಸಂಬಂಧಿಸಿದ ವಾಸ್ತವ್ಯತೆಯ ಭಿನ್ನತೆ ಅವರ ಬದುಕಿನ ನಿರೀಕ್ಷೆಯಲ್ಲಿ ಮತ್ತು ಆರ್ಥಿಕ ಸನ್ನಿವೇಶಗಳನ್ನು ವಿಶ್ಲೇಷಣಾತ್ಮಕವಾಗಿ ಅರ್ಥಮಾಡಿಕೊಳ್ಳಲು, ನೀತಿಗಳನ್ನು ರೂಪಿಸಲು ನೆರವಾಗುತ್ತದೆ. ಇದು ಸಾಮಾಜಿಕ ಪ್ರಕ್ರಿಯೆಯನ್ನು ಅರ್ಥಮಾಡಿಕೊಳ್ಳುವುದಕ್ಕೆ ಮತ್ತು ಸಮಾನವಾದ ಆಯ್ಕೆಗಳು ಮತ್ತು ತಿಳುವಳಿಕೆ ಇದ್ದಾಗ, ಪ್ರತಿಕ್ರಿಯೆ ಹೇಗಿರುತ್ತೆಂಬುದನ್ನು ತಿಳಿದುಕೊಳ್ಳಲು ಇರುವ ಒಂದು ಸಾಧನವಾಗಿದೆ ಎಂದು ಮಾನವ ಅಭಿವೃದ್ಧಿ ವರದಿ ೨೦೦೫ ತಿಳಿಸುತ್ತದೆ. ಈ ಹಿನ್ನೆಲೆಯಲ್ಲಿ ನಮ್ಮ ಅಧ್ಯಯನದಲ್ಲಿಯೂ ಲಿಂಗ-ಸಂಬಂಧಿ ಆಯಾಮ ಎನ್ನುವ ಪದವನ್ನು ಬಳಸಲಾಗಿದೆ.

### ೧.೬. ಅಧ್ಯಯನದ ಮಿತಿ

ಪ್ರಸ್ತುತ ಅಧ್ಯಯನವು ಪ್ರಾಥಮಿಕ ಶಿಕ್ಷಣಕ್ಕೆ ಮಾತ್ರ ಸಿಮೀತಗೊಳಿಸಲಾಗಿದೆ. ಒಂದನೇ ತರಗತಿಯಿಂದ ಏಳನೇ ತರಗತಿಯ ಶಿಕ್ಷಣವನ್ನು ಪ್ರಾಥಮಿಕ ಶಿಕ್ಷಣ ಎಂದು ಪರಿಭಾವಿಸಿಕೊಳ್ಳಲಾಗಿದೆ. ಅಧ್ಯಯನದಲ್ಲಿ ಅಂಕಿ-ಅಂಶಗಳು ಮತ್ತು ಕ್ಷೇತ್ರಕಾರ್ಯದಲ್ಲಿ ನೀಡಿದ ಮಾಹಿತಿಯ ಆಧಾರದ ಮೂಲಕ ಫಲಿತಗಳನ್ನು ಕಂಡುಕೊಳ್ಳಲಾಗಿದೆ. ಈ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಎರಡು ಪಟ್ಟಣ ಪಂಚಾಯಿತಿಗಳು ಶೈಕ್ಷಣಿಕವಾಗಿ ಬೇರೆ ಬೇರೆ ಅಂಶಗಳಿಂದ ಭಿನ್ನವಾಗಿವೆ. ಆದ್ದರಿಂದ ಇದೊಂದು ತುಲನಾತ್ಮಕವಾದ ಅಧ್ಯಯನವಾಗಿದೆ.

ಈ ಅಧ್ಯಯನವು ಸೂಕ್ಷ್ಮ (Micro) ಅಧ್ಯಯನವಾಗಿರುವುದರಿಂದ ಅಧ್ಯಯನವನ್ನು ಎರಡು ಪಟ್ಟಣ ಪಂಚಾಯಿತಿಗಳಿಗೆ ಸೀಮಿತಗೊಳಿಸಲಾಗಿದೆ. ಇದು ಅಧ್ಯಯನದ ವ್ಯಾಪ್ತಿ ಮತ್ತು ಅಧ್ಯಯನದ ಮಿತಿಯಾಗಿದೆ.

### ೧.೭. ಅಧ್ಯಯನದ ಮಹತ್ವ

ಪ್ರಸ್ತುತ ಅಧ್ಯಯನವು ಎಂಫಿರಿಕಲ್ ಮಾದರಿಯ ಅಧ್ಯಯನವಾಗಿದೆ. ಲಿಂಗ-ಸಂಬಂಧಿ ಆಯಾಮಗಳ ವಿವಿಧ ಸಂಗತಿಗಳನ್ನು ಅರ್ಥಮಾಡಿಕೊಳ್ಳುವುದರ ಜೊತೆಗೆ, ಕೊರಟಗೆರೆ ಮತ್ತು ಕಮಲಾಪುರ ಪಟ್ಟಣ ಪಂಚಾಯಿತಿ ಪ್ರದೇಶಗಳಲ್ಲಿ ಪೋಷಕರು ಹೆಣ್ಣುಮಕ್ಕಳ ಶಿಕ್ಷಣದ ಬಗ್ಗೆ ಯಾವ ಮನೋಪ್ರವೃತ್ತಿ ಹೊಂದಿದ್ದಾರೆ ಎಂಬುದನ್ನು ತಿಳಿಯಬಹುದು. ಪ್ರಾಥಮಿಕ ಶಿಕ್ಷಣ ಎಲ್ಲರಿಗೂ ತಲುಪಬೇಕು ಎಂದು ಸರ್ಕಾರ ಏನೆಲ್ಲಾ ಯೋಜನೆಗಳನ್ನು ಹಾಕಿಕೊಂಡರೂ, ಇದರ ಪ್ರಗತಿ ಮಂದಗತಿಯಲ್ಲಿ ಸಾಗಿದೆ. ಇಂದು ಸುಮಾರು ಶೇಕಡ ೯ರಷ್ಟು ಮಕ್ಕಳು ಶಾಲೆಯಿಂದ ಹೊರಗುಳಿದಿದ್ದಾರೆ. ಇಲ್ಲಿ ಗಮನಿಸುವ ಅಂಶವೆಂದರೆ ಸರ್ಕಾರದ ಯೋಜನೆಗಳು ಜನರಿಗೆ ತಲುಪುವಲ್ಲಿ ಎಲ್ಲಿ ವಿಫಲಗೊಂಡಿವೆ ಎಂಬುದನ್ನು ಅಧ್ಯಯನದಿಂದ ತಿಳಿಯಬಹುದಾಗಿದೆ.

ಮಕ್ಕಳ ಶಿಕ್ಷಣದಲ್ಲಿ ವರ್ಗ, ಜಾತಿ, ಕುಟುಂಬ, ಆದಾಯ, ವೃತ್ತಿ ಮುಂತಾದ ಅಂಶಗಳು ಎಷ್ಟರಮಟ್ಟಿಗೆ ಪರಿಣಾಮ ಬೀರುತ್ತವೆ. ಇದರ ಜೊತೆಗೆ ಲಿಂಗಾಧಾರಿತ ಪಕ್ಷಪಾತವು ತರಗತಿಯ

ಒಳಗೆ ಮತ್ತು ಹೊರಗೆ ಹೇಗಿದೆ ಎಂಬುದನ್ನು ಅರ್ಥಮಾಡಿಕೊಳ್ಳಬಹುದು. ಒಟ್ಟಾರೆಯಾಗಿ ಶೈಕ್ಷಣಿಕ ಅಭಿವೃದ್ಧಿಗೆ ಸಂಬಂಧಿಸಿದಂತೆ ವಿಶೇಷವಾಗಿ, ಶಿಕ್ಷಣ ಇಲಾಖೆಗೆ ಹೆಚ್ಚು ಉಪಯುಕ್ತವಾಗುತ್ತದೆ. ಈ ಅಧ್ಯಯನದಿಂದ ಕಂಡುಕೊಂಡ ಫಲಿತಗಳ ಆಧಾರದ ಮೇಲೆ ಹೆಣ್ಣುಮಕ್ಕಳ ಶೈಕ್ಷಣಿಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಯಾವ ರೀತಿ ಸುಧಾರಿಸಬಹುದು ಎಂಬುದನ್ನು ತಿಳಿಯಬಹುದಾಗಿದೆ.

### ೧.೮. ಅಧ್ಯಯನದ ವಿನ್ಯಾಸ

ಪ್ರಸ್ತುತ ಮಹಾಪ್ರಬಂಧದಲ್ಲಿ ಒಟ್ಟು ಒಂಬತ್ತು ಅಧ್ಯಾಯಗಳಿವೆ. ಮೊದಲ ಅಧ್ಯಾಯದಲ್ಲಿ ಅಧ್ಯಯನ ವಿಷಯದ ಪ್ರಸ್ತಾವನೆ, ಅಧ್ಯಯನದ ಸಮಸ್ಯೆ, ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ, ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಮಹತ್ವ ಮತ್ತು ಅಧ್ಯಯನದ ಮಿತಿಗಳನ್ನು ವಿವರಿಸಲಾಗಿದೆ.

ಅಧ್ಯಾಯ ಎರಡರಲ್ಲಿ, ಅಧ್ಯಯನ ಕ್ಷೇತ್ರದ ಪರಿಚಯವನ್ನು ವಿವರಿಸುತ್ತಾ ತುಮಕೂರು ಮತ್ತು ಬಳ್ಳಾರಿ ಜಿಲ್ಲೆಗಳ ಐತಿಹಾಸಿಕ ಹಿನ್ನೆಲೆ, ಭೌಗೋಳಿಕ ಅಂಶಗಳು, ಜನಸಂಖ್ಯೆ ಮತ್ತು ಜನಸಾಂದ್ರತೆ, ಆರ್ಥಿಕತೆ ಮತ್ತು ಶೈಕ್ಷಣಿಕ ಪರಿಸ್ಥಿತಿಯ ಪಕ್ಷಿನೋಟದ ಚಿತ್ರಣವನ್ನು ವಿವರಿಸಲಾಗಿದೆ.

ಅಧ್ಯಾಯ ಮೂರರಲ್ಲಿ ಶಾಲಾ ಶಿಕ್ಷಣದ ಸಾರ್ವತ್ರೀಕರಣಕ್ಕೆ ನಡೆದಂತಹ ಪ್ರಯತ್ನಗಳನ್ನು ವಿಶ್ಲೇಷಿಸಲಾಗಿದೆ. ೧೮೩೩ರಲ್ಲಿ ಪ್ರಥಮವಾಗಿ ಬ್ರಿಟಿಷ್ ಆಡಳಿತವು ಈಸ್ಟ್ ಇಂಡಿಯಾ ಕಂಪನಿಯೂ ಸಾರ್ವತ್ರಿಕ ಶಿಕ್ಷಣಕ್ಕಾಗಿ ನೀಡಿದ ನಿರ್ದೇಶನ, ಟ್ರಾವಂಕೂರು ಪ್ರಾಂತ್ಯದ ಪ್ರಯತ್ನ, ೧೮೮೨ ಹಂಟರ್ ಆಯೋಗದ ಒತ್ತಾಯ, ೧೮೯೩ರ ಬರೋಡ ರಾಜ್ಯಾಡಳಿತ ಜಾರಿಗೊಳಿಸಿದ ಕಡ್ಡಾಯ ಶಿಕ್ಷಣ, ಮೈಸೂರು ರಾಜ್ಯಾಡಾಳಿತ ೧೮೫೭ರಲ್ಲಿ ನಡೆಸಿದ ಪ್ರಯತ್ನದ ಜೊತೆಗೆ ವಿವಿಧ ಆಯೋಗಗಳ ಶಿಫಾರಸ್ಸುಗಳನ್ನು ದಾಖಲಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಸ್ವಾತಂತ್ರ್ಯಪೂರ್ವದಲ್ಲಿ ಮಹಿಳಾ ಶಿಕ್ಷಣ ನಡೆದು ಬಂದ ದಾರಿ, ಸರ್ಕಾರಗಳ ಪ್ರೋತ್ಸಾಹ ಮತ್ತು ಸಮಾಜ ಸುಧಾರಕರ ಪ್ರಯತ್ನಗಳನ್ನು ಚರ್ಚಿಸಲಾಗಿದೆ. ಹಾಗೆಯೇ ಮಹಿಳಾ ಶಿಕ್ಷಣದ ಪ್ರಗತಿಯ ಹೆಜ್ಜೆಗಳನ್ನು ಗುರುತಿಸುವಾಗ ಇಪ್ಪತ್ತನೆಯ ಶತಮಾನದ ಆದಿಭಾಗದಲ್ಲಿನ ಪ್ರಯತ್ನಗಳನ್ನು ಹಿಡಿದಿಡಲಾಗಿದೆ.

ಅಧ್ಯಾಯ ಐದರಲ್ಲಿ ಸ್ವಾತಂತ್ರ್ಯ ನಂತರದ ಅವಧಿಯಲ್ಲಿ ಮಹಿಳಾ ಶಿಕ್ಷಣ ನಡೆದು ಬಂದ ದಾರಿಯನ್ನು ಗುರುತಿಸಲು ಪ್ರಯತ್ನಿಸಲಾಗಿದೆ. ಹೀಗೆ ಗುರುತಿಸುವಾಗ ಸಾಕ್ಷರತೆ, ಶಾಲಾ ದಾಖಲಾತಿ, ಮತ್ತು ಶಾಲೆಯಿಂದ ಹೊರಗಿರುವ ಮಕ್ಕಳ ಸಂಖ್ಯೆ ಇತ್ಯಾದಿ ವಿಷಯಗಳನ್ನು ಕುರಿತು ಚರ್ಚಿಸಲಾಗಿದೆ. ಹಾಗೆಯೇ ಬಾಲಕರು ಮತ್ತು ಬಾಲಕಿಯರ ನಡುವೆ ಶಾಲಾ ಭಾಗವಹಿಸುವಿಕೆಯಲ್ಲಿರುವ ವ್ಯತ್ಯಾಸವನ್ನು ನೋಡಲಾಗಿದೆ.

ಅಧ್ಯಾಯ ಆರರಲ್ಲಿ ಕರ್ನಾಟಕದ ಪ್ರಾಥಮಿಕ ಶಿಕ್ಷಣದ ಪ್ರಸ್ತುತ ಸ್ಥಿತಿಯನ್ನು ಗುರುತಿಸುವ ಮೂಲಕ ಅರ್ಥಮಾಡಿಕೊಳ್ಳಲು ಪ್ರಯತ್ನಿಸಲಾಗಿದೆ. ಇಲ್ಲಿ ಶಿಕ್ಷಣದ ಪ್ರಸ್ತುತ ಸ್ಥಿತಿಯನ್ನು ರಾಷ್ಟ್ರ, ರಾಜ್ಯ, ಜಿಲ್ಲೆ, ತಾಲ್ಲೂಕು ಹಾಗೂ ಅಧ್ಯಯನ ಕ್ಷೇತ್ರದ ವಾರ್ಡ್‌ಗಳ ಹಂತದವರೆಗೆ ಸಾಕ್ಷರತೆ, ಶಾಲಾ ದಾಖಲಾತಿ, ಹಾಜರಾತಿ ಮತ್ತು ಶಾಲೆ ಬಿಟ್ಟ ಮಕ್ಕಳಲ್ಲಿನ ಲಿಂಗ-ಸಂಬಂಧಿ ಸ್ವರೂಪವನ್ನು ತುಲನಾತ್ಮಕವಾಗಿ ಚರ್ಚಿಸಲಾಗಿದೆ.

ಅಧ್ಯಾಯ ಏಳರಲ್ಲಿ ಮಹಿಳಾ ಶಿಕ್ಷಣದ ಅಭಿವೃದ್ಧಿಗೆ ಅಂತರಾಷ್ಟ್ರೀಯ, ರಾಷ್ಟ್ರೀಯ ಮತ್ತು ರಾಜ್ಯಮಟ್ಟದ ವಿವಿಧ ಹಂತಗಳಲ್ಲಿ ಸರ್ಕಾರಗಳು ರೂಪಿಸಿದ ಕಾರ್ಯಕ್ರಮಗಳನ್ನು ವಸ್ತುನಿಷ್ಟವಾಗಿ ಚರ್ಚಿಸಿ ಇವುಗಳು ಹೇಗೆ ಹೆಣ್ಣುಮಕ್ಕಳ ಶಿಕ್ಷಣದ ಪ್ರಗತಿಗೆ ಸಹಕಾರಿಯಾಗಿವೆ? ಎಲ್ಲಿ ಸರ್ಕಾರದ ಪ್ರಯತ್ನಗಳು ವಿಫಲವಾಗಿವೆ? ಇತ್ಯಾದಿಗಳನ್ನು ವಿವರಿಸಲಾಗಿದೆ.

ಅಧ್ಯಾಯ ಎಂಟರಲ್ಲಿ ಮಕ್ಕಳ ಶಿಕ್ಷಣಕ್ಕೆ ಸಂಬಂಧಿಸಿದ ಪೋಷಕರ ಮನೋಪ್ರವೃತ್ತಿಯನ್ನು ಹಿಡಿದಿಡಲು ಪ್ರಯತ್ನಿಸಲಾಗಿದೆ. ಪೋಷಕರ ಮನೋಪ್ರವೃತ್ತಿಯನ್ನು ಅರ್ಥಮಾಡಿಕೊಳ್ಳುವ ಜೊತೆ ಜೊತೆಗೆ ಗಂಡು ಮತ್ತು ಹೆಣ್ಣುಮಕ್ಕಳನ್ನು ಶಾಲೆಗೆ ಕಳುಹಿಸಿಲು ಯಾವ ಬಗೆಯ ಮನೋಪ್ರವೃತ್ತಿ ಹೊಂದಿದ್ದಾರೆ ಎಂಬುದನ್ನು ಕಂಡುಕೊಳ್ಳಲಾಗಿದೆ. ಇದನ್ನು ಅರ್ಥಮಾಡಿಕೊಳ್ಳುವಾಗ ಯಾವ ಅಂಶ ಹೆಣ್ಣುಮಕ್ಕಳ ಶಿಕ್ಷಣಕ್ಕೆ ತಡೆಯೊಡ್ಡುತ್ತಿದೆ ಎಂಬುದನ್ನು ಗುರುತಿಸಲಾಗಿದೆ. ಹಾಗೆಯೇ ವಿವಾಹಕ್ಕೂ, ಶಿಕ್ಷಣಕ್ಕೂ, ಜಾತಿಗೂ, ಕೌಟುಂಬಿಕ ರಚನೆಗೂ ಮತ್ತು ಕುಟುಂಬದ ಆದಾಯಕ್ಕೂ ಇರುವ ಸಂಬಂಧವನ್ನು ವಸ್ತುನಿಷ್ಟವಾಗಿ ವಿಶ್ಲೇಷಿಸಲಾಗಿದೆ.

ಅಧ್ಯಾಯ ಒಂಬತ್ತರಲ್ಲಿ ಅಧ್ಯಯನದ ಸಮಾರೋಪ ಮತ್ತು ಅಧ್ಯಯನ ಫಲಿತಗಳನ್ನು ವಿವರಿಸುವ ಜೊತೆಗೆ ಸಲಹೆಗಳನ್ನು ನೀಡಲಾಗಿದೆ.

## ಆಕರ ಗ್ರಂಥಗಳು

ಅನಿತಾ ಕೆ. (೧೯೯೭), "ಎಜ್ಯುಕೇಷನಲ್ ಫ್ಲಾನಿಂಗ್ ಫಾರ್ ಸ್ಕೂಲ್ ಎಜ್ಯುಕೇಷನ್ : ಎ ಸ್ಟಡಿ ಫಾರ್ ತ್ರೀ ಡಿಸ್ಟ್ರಿಕ್ಸ್ ಇನ್ ಕರ್ನಾಟಕ" ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ಅನಿತಾ ಬಿ.ಕೆ. (೨೦೦೦), "ವಿಲೇಜ್, ಕ್ಯಾಸ್ಟ್ ಅಂಡ್ ಎಜ್ಯುಕೇಷನ್, ಫ್ರೇಮ್ ರಾವತ್ ಪಾರ್ ರಾವತ್ ಪಬ್ಲಿಕೇಷನ್ಸ್, ಜವಹರ್‌ನಗರ, ಜೈಪುರ.

ಅಂಜು ಗ್ರೋವರ್ (೨೦೦೨), "ಭಾರತದಲ್ಲಿ ಲಿಂಗ ಸಮಾನತೆ" ಯೋಜನಾ ತಿಂಗಳ ಪತ್ರಿಕೆ, ಸಂಪುಟ ೧೭, ಸಂಚಿಕೆ ೧೦, ಮೇ. ಪುಟ. ೩೦-೩೧.

ಇಂದಿರಾ ಆರ್. (೨೦೦೨), "ಮಹಿಳೆ, ಸಮಾಜ ಮತ್ತು ಸಂಸ್ಕೃತಿ", ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ಪುಟ. ೮೨-೮೫.

ಉಷಾ ರಾಮ್‌ಕುಮಾರ್ (೨೦೦೨), "ವುಮೆನ್ಸ್ ಎಜ್ಯುಕೇಷನ್ ಇನ್ ವೆಷ್ಟ್ರನ್ ಗಾಟ್ಸ್ ರೀಜನ್ಸ್ ಆಫ್ ಕರ್ನಾಟಕ", ಎಕನಾಮಿಕ್ ಪೊಲಿಟಿಕಲ್ ವೀಕ್ಲಿ, ಮೇ ೨೫, ಪುಟ. ೨೦೭೬-೮೦.

ಕೃಷ್ಣ ಜೆ. (೨೦೦೦), "ಮಾನವ ಅಭಿವೃದ್ಧಿಯ ಪ್ರಾದೇಶಿಕ ಆಯಾಮಗಳ ಅಧ್ಯಯನ", ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕುರುಹುರಿ ವೆಂಕಟ ಜಗನ್ನಾಥ್‌ರಾವ್ (೨೦೦೨), "ಎನ್‌ರೋಲ್‌ಮೆಂಟ್ ಅಂಡ್ ಡ್ರಾಪೌಟ್ ಇನ್ ಪ್ರೈಮರಿ ಎಜ್ಯುಕೇಷನ್ ಆಫ್ ಟ್ರೈಬಲ್ಸ್" (ಎ ಕಾಂಪ್ಯಾರಿಟಿವ್ ಸ್ಟಡಿ ಆಫ್ ಸಬ್ ಪ್ಲ್ಯಾನ್ ಅಂಡ್ ನಾನ್ ಸಬ್ ಪ್ಲ್ಯಾನ್ ಏರಿಯಾಸ್ ಇನ್ ವಿಜಯನಗರ ಡಿಸ್ಟ್ರಿಕ್ಸ್, ಆಂಧ್ರ ಪ್ರದೇಶ), ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ, ಆಂಧ್ರ ವಿಶ್ವವಿದ್ಯಾಲಯ.

ಕರ್ನಾಟಕದಲ್ಲಿ ಮಾನವ ಅಭಿವೃದ್ಧಿ (೨೦೦೫), ಯೋಜನಾ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು.

ಚಂದ್ರಶೇಖರ್ ಟಿ.ಆರ್. (೨೦೦೩), "ಕರ್ನಾಟಕದ ಅಭಿವೃದ್ಧಿಯ ಸಾಮಾಜಿಕ ನೆಲೆಗಳು", ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು, ಪು. ೪೨-೪೮.

ಚಂದ್ರಶೇಖರ್ ಟಿ.ಆರ್. (೨೦೦೬), "ಕರ್ನಾಟಕದ ಪ್ರಾಥಮಿಕ ಶಿಕ್ಷಣದ ಸ್ಥಿತಿ-ಗತಿ", ಅಭಿವೃದ್ಧಿ ಅಧ್ಯಯನ ಪತ್ರಿಕೆ, ಸಂಪುಟ ೫, ಸಂಚಿಕೆ ೧, ಪುಟ. ೫-೩೦.

ಜ್ಯೋತಿ ಶಶಿಕುಮಾರ್ (೨೦೦೭), "ಮಹಿಳಾ ಸಾಮಾಜಿಕತೆ", ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಥೇಕೆಡತ್ (೧೯೯೮), "ಶತಮಾನದ ಅಂಚಿನಲ್ಲಿ ಶಿಕ್ಷಣ", ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು.

ದಯಾನಂದ (೨೦೦೫), "ಲಿಂಗ ಅಸಮಾನತೆಯ ವಿಭಿನ್ನ ಮುಖಗಳು", ಮಾನಸ ತಿಂಗಳ ಮಾಸಪತ್ರಿಕೆ, ಬೆಂಗಳೂರು.

ನಂಜುಂಡಸ್ವಾಮಿ ಎಂ. (೨೦೦೭), "ಗ್ರಾಮೀಣ ಪ್ರದೇಶದಲ್ಲಿನ ಪ್ರಾಥಮಿಕ ಶಿಕ್ಷಣದ ಸಮಸ್ಯೆಗಳು", ಯೋಜನಾ ಪತ್ರಿಕೆ ಏಪ್ರಿಲ್, ಪುಟ. ೪೭-೫೦.

ನಂಜುಂಡಪ್ಪ ಡಿ.ಎಂ. ಅಂಡ್ ಅದರ್ಸ್ (೨೦೦೩), "ಹೈಪವರ್ ಕಮಿಟಿ ಫಾರ್ ರೀ ಅಡ್ರೆಸಲ್ ಆಫ್ ರೀಜಿನಲ್ ಇಂಬ್ಯಾಲೆನ್ಸ್", ಗವರ್ನಮೆಂಟ್ ಆಫ್ ಕರ್ನಾಟಕ, ಬೆಂಗಳೂರು.

ನಿರಂಜನಾರಾಧ್ಯ ವಿ.ಪಿ., (೨೦೦೪), "ಶಾಲೆಗಳು ರಾಜಕೀಯ ಪಕ್ಷಗಳ ಶಾಲಾ ಕಚೇರಿ ಗಳಾಗಬೇಕೆ?", ಡಿಸೆಂಬರ್, ಹೊಸತು ಮಾಸಪತ್ರಿಕೆ, ಬೆಂಗಳೂರು.

ಪ್ರಶಾಂತ್ ಎಚ್.ಡಿ. (೨೦೦೫), "ಈಶಾನ್ಯ ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣ ಮತ್ತು ಸಮಾಜ", ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ. ೯೩.

ಪ್ರಶಾಂತ್ ಎಚ್.ಡಿ. (೨೦೦೬), "ಶಾಲಾ ಶಿಕ್ಷಣದ ವಿಕೇಂದ್ರೀಕರಣ : ಎಸ್.ಡಿ.ಎಂ.ಸಿ. ಕಾರ್ಯಕ್ಷಮತೆ", ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಪ್ರೋಬ್ (೧೯೯೮), "ಪಬ್ಲಿಕ್ ರಿಪೋರ್ಟ್ ಆನ್ ಬೇಸಿಕ್ ಎಜ್ಯುಕೇಷನ್ ಇನ್ ಇಂಡಿಯಾ", ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ದೆಹಲಿ, ಪುಟ. ೨೧.

ಮಧು ಎಸ್. ಪರಂಜಪೆ (೨೦೦೭), "ಅನ್ ಈವನ್ ಡಸ್ಟ್ರಿಬ್ಯೂಷನ್ ಆಫ್ ಎಜ್ಯುಕೇಷನ್ ಇನ್ ಮಹಾರಾಷ್ಟ್ರ, ರೂರಲ್, ಅರ್ಬನ್, ಜೆಂಡರ್ ಅಂಡ್ ಕ್ಯಾಸ್ಟ್ ಇನ್ ಈಕ್ವಾಲಿಟೀಸ್" ಎಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ಜನವರಿ ೨೦, ಪುಟ. ೨೧೩-೨೧೭.

ಮಾಲಿನಿ ಭಟ್ಟಾಚಾರ್ಯ (೨೦೦೩), "ಭಾರತದಲ್ಲಿ ಶಿಕ್ಷಣ ಮತ್ತು ಮಹಿಳೆ", ಅಚಲ ತಿಂಗಳ ಪತ್ರಿಕೆ, ಜುಲೈ. ಪುಟ. ೨-೪.

ರೇಖಾ ವಾಜೀರ್ (೨೦೦೧), "ದಿ ಜೆಂಡರ್ ಗ್ಯಾಪ್ ಇನ್ ಬೇಸಿಕ್ ಎಜ್ಯುಕೇಷನ್, ಎನ್.ಜಿ.ಓ. ಆಸ್ ಚೇಂಜ್ ಏಜನ್ಸಿ", ಸೇಜ್, ನ್ಯೂ ಡೆಲ್ಲಿ.

ರೇಖಾ ಕೌಲ್ (೨೦೦೧), "ಆಸೆಸ್ಸಿಂಗ್ ಪ್ರೈಮರಿ ಎಜ್ಯುಕೇಷನ್ ಗೋಯಿಂಗ್ ಬಿಯಾಂಡ್ ಕ್ಲಾಸ್ ರೂಂ", ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ಜನವರಿ ೧೩.

ರತನ್ ನಬೀಸ್ ಮತ್ತು ತಾನಿಯಾ ಚಟರ್ಜಿ (೨೦೦೭), "ಎನ್‌ರೋಲಿಂಗ್ ಅಂಡ್ ರಿಟೈನಿಂಗ್ ಸ್ಲಮ್ ಚಿಲ್ಡ್ರನ್ ಇನ್ ಫಾರ್ಮಲ್ ಸ್ಕೂಲ್ಸ್, ಎ ಫೀಲ್ಡ್ ಸರ್ವೇ ಇನ್ ಈಸ್ಟನ್ ಸ್ಲಮ್ಸ್ ಆಫ್ ಕೋಲ್ಕತ", ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ಜೂನ್೩.

ರಾಮಚಂದ್ರನ್ ವಿ.ಕೆ. (೧೯೯೬), "ಆ್ಯನ್ ಕೇರಳ ಡೆವಲಪ್‌ಮೆಂಟ್ ಅಚೀವ್‌ಮೆಂಟ್ಸ್ ಇನ್ ಡ್ರೀನ್ ಡ್ರೀಜ್ ಅಂಡ್ ಅಮಾರ್ತ್ಯಸೇನ್" (ಎಡಿಟ್ಸ್), ಇಂಡಿಯನ್ ಡೆವಲಪ್‌ಮೆಂಟ್ : ಸೆಲೆಕ್ಟಡ್.

ರಾಮಚಂದ್ರನ್ ವಿಮಲಾ. (೨೦೦೩ ಬಿ), "ಗೆಟಿಂಗ್ ಚಿಲ್ಡ್ರನ್ ಬ್ಯಾಕ್ ಟು ಸ್ಕೂಲ್ : ಕೇಸ್ ಸ್ಟಡಿ ಇನ್ ಪ್ರೈಮರಿ ಎಜ್ಯುಕೇಶನ್", ಸೇಜ್ ಪಬ್ಲಿಕೇಷನ್ಸ್, ನ್ಯೂಡೆಲ್ಲಿ

ಲೇತಿನ್ ಜಿ.ಕೆ. (೨೦೦೦), "ಚಿಲ್ಡ್ರನ್ ವರ್ಕ್ಸ್ ಅಂಡ್ ಎಜ್ಯುಕೇಷನ್", ಎಕನಾಮಿಕ್ ಅಂಡ್ ಪೊಲಿಟಿಕಲ್ ವಿಕ್ಲಿ, ೧೦-೧೭ ಜೂನ್.

ವಿಲ್‌ಫ್ರೆಡ್ ಡಿಸೋಜಾ, (೨೦೦೬), "ರೈತರಿಗೆ ಆಸೆ, ಕಂಪನಿಗಳಿಗೆ ಲಾಭದ ದಾಯ, ಶಿಕ್ಷಣದಿಂದ ವಂಚಿತವಾಗುತ್ತಿರುವ ಕಂದಮ್ಮಗಳು", ಸಾಲುಹೆಜ್ಜೆ ತಿಂಗಳ ಪತ್ರಿಕೆ ಸಂಪುಟ ೨, ಸಂ.೯. ನವೆಂಬರ್, ಮಂಗಳೂರು.

ಶ್ರೀಮತಿ ಎಚ್.ಎಸ್. (೨೦೦೪), "ಹೆಣ್ಣು-ಹೆಂಗಸು", ಬ್ಯಾಲದಕೆರೆ ಪ್ರಕಾಶನ, ಬ್ಯಾಲದಕೆರೆ, ಮಂಡ್ಯ ಜಿಲ್ಲೆ, ಪುಟ. ೧೦೬.

ಶ್ರೀವಾಸ್ತವ, ರವಿ (೧೯೯೭), "ಆಸೆಸ್ ಟು ಬೇಸಿಕ್ ಎಜ್ಯುಕೇಶನ್ ಇನ್ ಉತ್ತರ ಪ್ರದೇಶ: ರಿಸಲ್ಟ್ಸ್ ಫ್ರಮ್ ಫೀಲ್ಡ್‌ಸರ್ವೆ", ಪ್ರಾಜೆಕ್ಟ್ ಆನ್ ಸ್ಟ್ರಾಟಜಿಸ್ ಆ್ಯಂಡ್ ಫೈನಾನ್ಸಿಂಗ್ ಫಾರ್ ಹ್ಯೂಮನ್ ಡೆವಲಪ್‌ಮೆಂಟ್, ಯು.ಎನ್.ಡಿ.ಪಿ, ನ್ಯೂಡೆಲ್ಲಿ.

ಶಿವರಾಜು ಬಿ.ಕೆ. ವಿರೋಬ ಭೀಮಣ್ಣ (೨೦೦೫), "ಶಿಕ್ಷಣ ಮತ್ತು ಪ್ರಾದೇಶಿಕ ಅಸಮತೋಲನ", ಸಂವಾದ ಮಾಸಪತ್ರಿಕೆ, ಸ್ಫೂರ್ತಿಧಾಮ ಅಂಜನಾಧಾಮ, ಬೆಂಗಳೂರು.

ಸುಂದರ ಕೇನಾಜಿ (೨೦೦೬), "ಸರ್ಕಾರಿ ಶಾಲೆಗಳಲ್ಲಿ ಮಕ್ಕಳ ಶಿಕ್ಷಣ ಪೋಷಕರು ಎಡವಿರುವುದು ಎಲ್ಲಿ?", ಹೊನ್ನಾರು ಮಾಸಪತ್ರಿಕೆ, ಸಂ.೩ ಸಂಚಿಕೆ ೩೦ ಸೆಪ್ಟೆಂಬರ್.

ಸೆನ್ಸಸ್ ಆಫ್ ಇಂಡಿಯಾ (೨೦೦೧), ಪ್ರೈಮರಿ ಸೆನ್ಸಸ್ ಅಬ್‌ಸ್ಟ್ರಾಕ್ ಕರ್ನಾಟಕ", ಡೈರೆಕ್ಟರೇಟ್ ಆಫ್ ಸೆನ್ಸಸ್ ಆಪರೇಶನ್, ಬೆಂಗಳೂರು.

• • •

# ಅಧ್ಯಾಯ ಎರಡು

# ಅಧ್ಯಯನ ಕ್ಷೇತ್ರದ ಪರಿಚಯ

೨.೧. ಬಳ್ಳಾರಿ ಜಿಲ್ಲೆಯ ಚಾರಿತ್ರಿಕ ಹಿನ್ನೆಲೆ

೨.೨. ಜಿಲ್ಲೆಯ ಭೌಗೋಳಿಕ ಅಂಶಗಳು

೨.೩. ಜಿಲ್ಲೆಯ ಜನಸಂಖ್ಯೆ ಮತ್ತು ಜನಸಾಂದ್ರತೆ

೨.೪. ಜಿಲ್ಲೆಯ ಶೈಕ್ಷಣಿಕ ವ್ಯವಸ್ಥೆ

೨.೫. ಬಳ್ಳಾರಿ ಜಿಲ್ಲೆಯ ಆರ್ಥಿಕತೆ

೨.೬. ಜಿಲ್ಲೆಯ ಪ್ರಾಕೃತಿಕ ಸಂಪನ್ಮೂಲಗಳು ಮತ್ತು ಹವಾಮಾನ

೨.೭. ಜಿಲ್ಲೆಯ ಆಡಳಿತ ವ್ಯವಸ್ಥೆ

೨.೮. ಜಿಲ್ಲೆಯ ಆದಾಯ

೨.೯. ತುಮಕೂರು ಜಿಲ್ಲೆಯ ಚಾರಿತ್ರಿಕ ಹಿನ್ನೆಲೆ

೨.೧೦. ಜಿಲ್ಲೆಯ ಭೌಗೋಳಿಕ ಅಂಶಗಳು

೨.೧೧. ಜಿಲ್ಲೆಯ ಜನಸಂಖ್ಯೆ ಮತ್ತು ಜನಸಾಂದ್ರತೆ

೨.೧೨. ಜಿಲ್ಲೆಯ ಶೈಕ್ಷಣಿಕ ವ್ಯವಸ್ಥೆ

೨.೧೩. ಜಿಲ್ಲೆಯ ಆರ್ಥಿಕತೆ

೨.೧೪. ಜಿಲ್ಲೆಯ ಆದಾಯ

೨.೧೫. ಜಿಲ್ಲೆಯ ಪ್ರಾಕೃತಿಕ ಸಂಪನ್ಮೂಲಗಳು ಮತ್ತು ಹವಾಮಾನ

೨.೧೬. ಜಿಲ್ಲೆಯ ಆಡಳಿತ ವ್ಯವಸ್ಥೆ

ಪ್ರಸ್ತುತ ಅಧ್ಯಯನವು ಬಳ್ಳಾರಿ ಹಾಗೂ ತುಮಕೂರು ಜಿಲ್ಲೆಗಳ ಎರಡು ಪಟ್ಟಣ ಪಂಚಾಯತಿಯನ್ನು ಅಧ್ಯಯನದ ಕ್ಷೇತ್ರವನ್ನಾಗಿರಿಸಿಕೊಂಡಿದೆ. ಈ ಪ್ರದೇಶದ ಒಂದು ಸ್ಥೂಲ ಪರಿಚಯವನ್ನು ನೀಡುವ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ. ಅಧ್ಯಯನ ಕ್ಷೇತ್ರದ ಬಹುಮುಖ್ಯ ಉದ್ದೇಶವೆಂದರೆ ಶೈಕ್ಷಣಿಕ ಅಭಿವೃದ್ಧಿಯ ಸ್ವರೂಪವನ್ನು ಗುರುತಿಸುವ ಸಲುವಾಗಿ ಈ ಪ್ರದೇಶದ ಭೌಗೋಳಿಕ, ಸಾಂಸ್ಕೃತಿಕ ಹಾಗೂ ಸಾಮಾಜಿಕ ಕ್ಷೇತ್ರದ ಪರಿಚಯ ಅವಶ್ಯಕ. ತುಮಕೂರು ಮತ್ತು ಬಳ್ಳಾರಿ ಜಿಲ್ಲೆಗಳ ಐತಿಹಾಸಿಕ ಹಿನ್ನಲೆ, ಭೌಗೋಳಿಕ ಅಂಶಗಳು, ಜನಸಂಖ್ಯೆ, ಶಿಕ್ಷಣ ಹಾಗೂ ಆರ್ಥಿಕ ಸ್ಥಿತಿಗತಿ ಇತ್ಯಾದಿ ವಿಷಯಗಳ ಸೂಕ್ಷ್ಮ ಚಿತ್ರಣವನ್ನು ಇಲ್ಲಿ ನೀಡಲಾಗಿದೆ.

ಈ ಪಟ್ಟಣ ಪಂಚಾಯಿತಿಗಳನ್ನು ಆಯ್ಕೆ ಮಾಡಿಕೊಳ್ಳುವಾಗ ಪ್ರಮುಖವಾಗಿ ೧೯೯೯ರ ಕರ್ನಾಟಕ ಮಾನವ ಅಭಿವೃದ್ಧಿ ವರದಿ, ೨೦೦೧ರ ಜನಗಣತಿ ವರದಿ ಹಾಗೂ ಪ್ರಾದೇಶಿಕ ಅಸಮಾನತೆ, ಉನ್ನತಾಧಿಕಾರಿ ಸಮಿತಿ ವರದಿಯ ಹಿನ್ನೆಲೆಯಲ್ಲಿ ಶೈಕ್ಷಣಿಕವಾಗಿ ಹಾಗೂ ಒಟ್ಟಾರೆ ಅಭಿವೃದ್ಧಿಯ ದೃಷ್ಟಿಯಿಂದ ಅಭಿವೃದ್ಧಿ ಹೊಂದಿದ ಪ್ರದೇಶದಲ್ಲಿ ಬರುವ ತುಮಕೂರು ಜಿಲ್ಲೆಯ ಕೊರಟಗೆರೆ ಪಟ್ಟಣ ಪಂಚಾಯಿತಿಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಹಾಗೆಯೇ ಪ್ರಾದೇಶಿಕ ಅಸಮಾನತೆಯ ದೃಷ್ಟಿಯಿಂದ ಕರ್ನಾಟಕದಲ್ಲಿ ಅತ್ಯಂತ ಹಿಂದುಳಿದಿರುವ ಗುಲ್ಬರ್ಗಾ ವಿಭಾಗದಿಂದ ಬಳ್ಳಾರಿ ಜಿಲ್ಲೆಯ ಕಮಲಾಪುರ ಪಟ್ಟಣ ಪಂಚಾಯಿತಿಯನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಇದಕ್ಕೆ ವಿವಿಧ ಅಭಿವೃದ್ಧಿ ವರದಿಗಳು ನೀಡಿದ ಅಭಿವೃದ್ಧಿಯ ಸೂಚಕಗಳನ್ನು ಪ್ರಮುಖವಾಗಿ ಬಳಸಿಕೊಳ್ಳಲಾಗಿದೆ. ಆದರೆ ಈ ಎರಡು ಪಟ್ಟಣ ಪಂಚಾಯಿತಿಗಳು ವಿಭಿನ್ನವಾದ ಐತಿಹಾಸಿಕ, ಸಾಮಾಜಿಕ, ಸಾಂಸ್ಕೃತಿಕ ಹಾಗೂ ರಾಜಕೀಯ, ಆರ್ಥಿಕತೆಯ ನೆಲೆಗಳನ್ನು ಗಮನಿಸಿದಾಗ, ಎರಡು ಪ್ರದೇಶಗಳು ವಿಭಿನ್ನ ದಿಕ್ಕುಗಳಲ್ಲಿ ನಿಲ್ಲುತ್ತವೆ.

### ೨.೧. ಬಳ್ಳಾರಿ ಜಿಲ್ಲೆಯ ಚಾರಿತ್ರಿಕ ಹಿನ್ನಲೆ

ಬಳ್ಳಾರಿ ಜಿಲ್ಲೆಯು ನೈರುತ್ಯ ಮತ್ತು ಈಶಾನ್ಯ ದಿಕ್ಕುಗಳ ನಡುವೆ ಚಾಚಿಕೊಂಡಂತಿದೆ. ಇದು ಸರಿಯಾಗಿ ಕರ್ನಾಟಕದ ಈಶಾನ್ಯ ಭಾಗದಲ್ಲಿದೆ. ಜಿಲ್ಲೆಯು ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ

ಮದ್ರಾಸ್ ಪ್ರಾಂತ್ಯದ ಆಡಳಿತಕ್ಕೊಳಪಟ್ಟ ಜಿಲ್ಲೆಯಾಗಿತ್ತು. ೧೯೫೩ಕ್ಕೆ ಮೊದಲು, ಜಿಲ್ಲೆಯು ೧೨ ತಾಲ್ಲೂಕುಗಳನ್ನು ಹೊಂದಿದ್ದು, ಅವುಗಳಲ್ಲಿ ಬಳ್ಳಾರಿ, ಸಿರುಗುಪ್ಪ, ಸಂಡೂರು, ಹೊಸಪೇಟೆ, ಹರಪನಹಳ್ಳಿ, ಹಡಗಲಿ, ಕೂಡ್ಲಿಗಿ, ಮಲ್ಲಾಪುರ ಮತ್ತು ಈಗಿನ ಆಂಧ್ರಪ್ರದೇಶದ ಆಲೂರು, ಆದೋನಿ, ರಾಯದುರ್ಗ ತಾಲ್ಲೂಕುಗಳನ್ನು ಹೊಂದಿತ್ತು (ಡಿ. ದೇವರಾಜ ಅರಸು ಆಡಳಿತ ಸಂದರ್ಭದ). ೧೯೫೩ರ ರಾಜ್ಯ ಪುನರ್ ವಿಂಗಡಣೆ ಸಂದರ್ಭದಲ್ಲಿ ಭಾಷಾವಾರು ಪ್ರಾಂತ್ಯವಾಗಿ ಪ್ರತ್ಯೇಕಗೊಂಡಾಗ ಬಳ್ಳಾರಿ ಜಿಲ್ಲೆಗೆ ಸೇರಿದ ಆಲೂರು, ಆದೋನಿ ಮತ್ತು ರಾಯದುರ್ಗ ತಾಲ್ಲೂಕುಗಳು ಆಂಧ್ರಪ್ರದೇಶ ರಾಜ್ಯಕ್ಕೆ ಸೇರಿಸಲಾಯಿತು. ಕರ್ನಾಟಕದಲ್ಲಿ ೧೯೯೭ರಲ್ಲಿ ಹೊಸ ಜಿಲ್ಲೆಗಳ ರಚನೆಯ ಸಂದರ್ಭದಲ್ಲಿ ಜನಪರ ಆಡಳಿತದ ದೃಷ್ಟಿಯಿಂದ ಜಿಲ್ಲೆಗೆ ಸೇರಿದ್ದ ಮತ್ತೊಂದು ತಾಲ್ಲೂಕು ಹರಪನಹಳ್ಳಿಯನ್ನು ದಾವಣಗೆರೆ ಜಿಲ್ಲೆಗೆ ಸೇರಿಸಲಾಯಿತು. ಹಾಗಾಗಿ ಪ್ರಸ್ತುತ ಜಿಲ್ಲೆಯು ಏಳು ತಾಲ್ಲೂಕುಗಳನ್ನು ಹೊಂದಿದೆ. ಅದರಲ್ಲಿ ಇತಿಹಾಸದ ಸುಪ್ರಸಿದ್ಧ ವಿಶ್ವಪರಂಪರೆಯ ಪಟ್ಟಿಯಲ್ಲಿ ಸೇರ್ಪಡೆಗೊಂಡ ಹಂಪಿಯು ಇದರ ವ್ಯಾಪ್ತಿಯಲ್ಲಿಯೇ ಬರುತ್ತದೆ (ಯರಿಸ್ವಾಮಿ, ೨೦೦೨).

### ೨.೨. ಬಳ್ಳಾರಿ ಜಿಲ್ಲೆಯ ಭೌಗೋಳಿಕ ಅಂಶಗಳು

ಬಳ್ಳಾರಿ ಜಿಲ್ಲೆಯು ಕರ್ನಾಟಕ ರಾಜ್ಯದ ಪೂರ್ವಭಾಗದ ಮಧ್ಯದಲ್ಲಿ ದಕ್ಷಿಣೋತ್ತರದವರೆಗೆ ಹಬ್ಬಿದೆ. ಜಿಲ್ಲೆಯು ೮೪೨೦.೦೦ ಚದರ ಕಿ.ಮೀ ವಿಸ್ತೀರ್ಣ ಹೊಂದಿದ್ದು, ರಾಜ್ಯದ ಒಟ್ಟು ಶೇಕಡ ೬ರಷ್ಟನ್ನು ವಿಸ್ತೀರ್ಣವನ್ನು ಹೊಂದಿ, ೧೧ನೇ ಸ್ಥಾನದಲ್ಲಿದೆ. ಜಿಲ್ಲೆಯ ವಿಸ್ತೀರ್ಣದಲ್ಲಿ, ಬಳ್ಳಾರಿ ತಾಲ್ಲೂಕು ಹೆಚ್ಚಿನ ವಿಸ್ತೀರ್ಣ ಅಂದರೆ ೧೬೮೯ ಚದರ ಕಿ.ಮೀ. (ಶೇಕಡ ೨೦) ಹೊಂದಿದೆ. ಇದು ರಾಜ್ಯದ ರಾಜಧಾನಿಯಾದ ಬೆಂಗಳೂರಿನಿಂದ ೩೦೪ ಕಿ.ಮೀ ದೂರದಲ್ಲಿದೆ. ಈ ಜಿಲ್ಲೆಯು ೧೪° -೧೩° ಮತ್ತು ೧೫°-೫೦° ಉತ್ತರ ಅಕ್ಷಾಂಶ ಹಾಗೂ ೭೫°-೪೦° ಮತ್ತು ೭೭°-೧೧° ಪೂರ್ವ ರೇಖಾಂಶ ಇವುಗಳ ಮಧ್ಯದಲ್ಲಿವೆ. ಉತ್ತರಕ್ಕೆ ರಾಯಚೂರು ಜಿಲ್ಲೆ, ದಕ್ಷಿಣಕ್ಕೆ ಚಿತ್ರದುರ್ಗ ಜಿಲ್ಲೆ, ಪಶ್ಚಿಮಕ್ಕೆ ಧಾರವಾಡ ಜಿಲ್ಲೆ ಮತ್ತು ಪೂರ್ವಕ್ಕೆ ಆಂಧ್ರಪ್ರದೇಶ ರಾಜ್ಯವಿದೆ. ಜಿಲ್ಲೆಯ ಪೂರ್ವ ಭಾಗವು ಸಮತಟ್ಟಾದ ಭೂಮಿಯನ್ನು ಹೊಂದಿದ್ದು, ಕೃಷಿಗೆ ಅನುಕೂಲಕರವಾಗಿದೆ (ಅಂಕಿ-ಅಂಶಗಳ ನೋಟ:೨೦೦೨-೦೩).

### ೨.೩. ಜಿಲ್ಲೆಯ ಜನಸಂಖ್ಯೆ ಮತ್ತು ಜನಸಾಂದ್ರತೆ

೨೦೦೧ರ ಜನಗಣತಿಯ ಪ್ರಕಾರ ಜಿಲ್ಲೆಯ ಒಟ್ಟು ಜನಸಂಖ್ಯೆ ೨೦,೨೫,೨೪೨ ಇದ್ದು, ರಾಜ್ಯದ ಜನಸಂಖ್ಯೆಯಲ್ಲಿ ಶೇಕಡ ೩.೮೪ರಷ್ಟು ಪ್ರಮಾಣವನ್ನು ಹೊಂದಿದೆ. ಜನಸಂಖ್ಯೆಯಲ್ಲಿ ರಾಜ್ಯದ ೭ನೇ ಸ್ಥಾನದಲ್ಲಿದೆ. ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ಗ್ರಾಮೀಣ ಜನಸಂಖ್ಯೆ ೧೩೧,೯೨,೩೯ (೬೫.೧೩)ರಷ್ಟು, ೭,೦೬,೦೦೩ (೩೪.೮೭)ರಷ್ಟು ನಗರ ಜನಸಂಖ್ಯೆ ಹೊಂದಿದೆ.

ಕೋಷ್ಟಕ-೨.೧

## ಬಳ್ಳಾರಿ ಜಿಲ್ಲೆಯ ಜನಸಂಖ್ಯೆ ಮತ್ತು ಜನಸಾಂದ್ರತೆ

| ಕ್ರ.ಸಂ | ತಾಲ್ಲೂಕು | ಒಟ್ಟು | ಜನಸಂಖ್ಯೆ | | | | | |
|---|---|---|---|---|---|---|---|---|
| | | | ಪುರುಷರು | ಮಹಿಳೆಯರು | ಗ್ರಾಮೀಣ | ನಗರ | ಜನಸಾಂದ್ರತೆ (ಪ್ರತಿ ಚ.ಕಿ.) | ಲಿಂಗಾನುಪಾತ |
| ೧. | ಹಡಗಲಿ | ೧೬೮೧೧೮ | ೮೫೦೫೧ | ೮೩೦೬೭ | ೧೪೪೭೦೪ | ೨೩೪೧೪ | ೧೭೭ | ೯೭೭ |
| ೨. | ಹಗರಿಬೊಮ್ಮನಹಳ್ಳಿ | ೧೫೯೮೮೬ | ೮೦೭೭೦ | ೭೯೧೧೬ | ೧೫೯೮೮೬ | — | ೧೬೪ | ೯೮೦ |
| ೩. | ಹೊಸಪೇಟೆ | ೩೭೪೯೪೯ | ೧೮೯೬೭೪ | ೧೮೫೨೭೫ | ೧೫೩೪೯೯ | ೨೨೧೪೫೦ | ೪೧೫ | ೯೭೭ |
| ೪. | ಸಿರುಗುಪ್ಪ | ೨೩೫೩೪೪ | ೧೧೭೭೩೫ | ೧೧೭೬೧೩ | ೧೬೮೮೪೨ | ೬೬೫೦೨ | ೨೨೭ | ೯೯೯ |
| ೫. | ಬಳ್ಳಾರಿ | ೬೨೫೪೯೪ | ೩೧೯೦೦೮ | ೩೦೬೪೮೬ | ೩೦೮೭೨೮ | ೩೧೬೭೬೬ | ೩೭೦ | ೯೬೧ |
| ೬. | ಸಂಡೂರು | ೧೯೧೧೬೬ | ೯೮೨೭೮ | ೯೨೮೮೮ | ೧೫೬೯೯೮ | ೩೪೧೬೮ | ೧೬೬ | ೯೪೫ |
| ೭. | ಕೂಡ್ಲಿಗಿ | ೨೭೨೧೮೩ | ೧೩೯೨೦೨ | ೧೩೨೯೮೧ | ೨೨೭೬೩೩ | ೪೪೫೫೦ | ೧೬೮ | ೯೫೫ |
| | ಜಿಲ್ಲೆಯ ಮೊತ್ತ | ೨೦೨೭೧೪೦ | ೧೦೨೯೭೧೪ | ೯೯೭೪೨೬ | ೧೩೨೦.೨೯೦ | ೭೦೬೮೫೦ | ೨೪೦ | ೯೬೯ |

ಮೂಲ: ಸೆನ್ಸಸ್ ಆಫ್ ಇಂಡಿಯಾ, ೨೦೦೧, ಡಿಸ್ಟ್ರಿಕ್ಟ್ ಪಾಪ್ಯುಲೇಶನ್ ಬುಕ್‌ಲೆಟ್, ಬಳ್ಳಾರಿ

೨೦೦೧ರ ಜನಗಣತಿ ಪ್ರಕಾರ ಹಡಗಲಿ ೧೬೯೧೦೮ರಷ್ಟು, ಹಗರಿಬೊಮ್ಮನಹಳ್ಳಿ ೧೫೯೮೮೬ರಷ್ಟು, ಹೊಸಪೇಟೆ ೩೭೪೯೪೯ರಷ್ಟು, ಸಿರುಗುಪ್ಪ ೩೫೩೪೪೮ರಷ್ಟು, ಬಳ್ಳಾರಿ ೬೨೫೪೯೪ರಷ್ಟು, ಸಂಡೂರು ೧೯೧೧೬೬ರಷ್ಟು, ಕೂಡ್ಲಿಗಿ ತಾಲ್ಲೂಕಿನಲ್ಲಿ ೨೭೨೧೮೩ರಷ್ಟು ಜನಸಂಖ್ಯೆ ಇದ್ದು ಬಳ್ಳಾರಿ ಜಿಲ್ಲೆಯ ಒಟ್ಟು ಜನಸಂಖ್ಯೆ ೨೦೨೭೧೪೦ರಷ್ಟಿದೆ. ಇದರಲ್ಲಿ ಪುರುಷರ ಸಂಖ್ಯೆ ೧೦೨೯೭೧೪ ಆಗಿದ್ದು, ಮಹಿಳೆಯರ ಸಂಖ್ಯೆ ೯೯೭೪೨೬ರಷ್ಟಿದೆ. ಜಿಲ್ಲೆಯಲ್ಲಿ ಬಳ್ಳಾರಿ ತಾಲ್ಲೂಕು ಅತಿಹೆಚ್ಚಿನ ಜನಸಂಖ್ಯೆಯನ್ನು ಹೊಂದಿದೆ. ಅಲ್ಲದೇ ಇದೇ ತಾಲ್ಲೂಕಿನಲ್ಲಿ ಅತಿಹೆಚ್ಚು ಪುರುಷರು ಮತ್ತು ಮಹಿಳೆಯರು ಇದ್ದಾರೆ. ಜನರು ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ವಾಸವಾಗಿದ್ದಾರೆ. ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ೧೩೨೦೨೯೦ರಷ್ಟು ಜನ ಗ್ರಾಮೀಣ ಪ್ರದೇಶದಲ್ಲಿ ಮತ್ತು ೭೦೬೮೫೦ರಷ್ಟು ಜನ ಜನರ ಪ್ರದೇಶದಲ್ಲಿ ವಾಸವಾಗಿದ್ದಾರೆ. ಇಲ್ಲಿ ೩೭೪೨೧೮ರಷ್ಟು ಪರಿಶಿಷ್ಟ ಜಾತಿ ಜನ ಮತ್ತು ೩೬೪೬೩೮ರಷ್ಟು ಪರಿಶಿಷ್ಟ ಪಂಗಡದ ಜನ ವಾಸವಾಗಿದ್ದಾರೆ.

ಜಿಲ್ಲೆಯಲ್ಲಿ ಮಹಿಳೆಯರ ಸಂಖ್ಯೆಗಿಂತ ಪುರುಷರ ಸಂಖ್ಯೆ ಅಧಿಕವಾಗಿರುವುದು ಕಂಡುಬರುತ್ತದೆ. ಅಲ್ಲದೆ ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ನಗರ ಪ್ರದೇಶದ ಜನಸಂಖ್ಯೆಗಿಂತ ಗ್ರಾಮೀಣ ಪ್ರದೇಶದ ಜನಸಂಖ್ಯೆ ಅಧಿಕವಾಗಿದೆ. ಅಂದರೆ ಗ್ರಾಮೀಣ ಪ್ರದೇಶದಲ್ಲಿಯೇ ಅಧಿಕ ಜನ ವಾಸವಾಗಿರುವುದು ಇದರಿಂದ ತಿಳಿದುಬರುತ್ತದೆ. ಜಿಲ್ಲೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನರು ಇದ್ದು, ಪರಿಶಿಷ್ಟ ಪಂಗಡದವರಿಗಿಂತ ಪರಿಶಿಷ್ಟ ಜಾತಿಯವರ ಸಂಖ್ಯೆ ಅಧಿಕವಾಗಿದೆ.

೨೦೦೧ರ ಜನಗಣತಿಯ ಪ್ರಕಾರ ಜಿಲ್ಲೆಯ ಜನಸಾಂದ್ರತೆ ಪ್ರತಿ ಚದರ ಕಿಲೋಮೀಟರ್‌ಗೆ ೨೪೦ ಇದ್ದು, ಇದು ರಾಜ್ಯದ ಜನಸಾಂದ್ರತೆಗಿಂತ ಕಡಿಮೆ ಇದೆ. ಜಿಲ್ಲೆಯಲ್ಲಿ ಹೊಸಪೇಟೆ ತಾಲ್ಲೂಕು ಅತಿಹೆಚ್ಚಿನ ಜನಸಾಂದ್ರತೆಯನ್ನು ಹೊಂದಿದೆ. ಹಾಗೆಯೇ ಅತಿಕಡಿಮೆ ಜನಸಾಂದ್ರತೆಯನ್ನು ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿದೆ.

### ೨.೪. ಜಿಲ್ಲೆಯ ಶೈಕ್ಷಣಿಕ ವ್ಯವಸ್ಥೆ

ಕರ್ನಾಟಕದ ಇತಿಹಾಸದಲ್ಲಿ ಪ್ರಮುಖ ಪಾತ್ರವಹಿಸಿರುವ ಗಡಿನಾಡ ಪ್ರದೇಶವಾದ ಬಳ್ಳಾರಿ ಜಿಲ್ಲೆಯು ಶೈಕ್ಷಣಿಕ ದೃಷ್ಟಿಯಿಂದ ತುಂಬಾ ಹಿಂದುಳಿದ ಜಿಲ್ಲೆಯಾಗಿದೆ. ಇದು ಸ್ವಾತಂತ್ರ್ಯ ಪೂರ್ವದಲ್ಲಿ ಹೈದರಾಬಾದ್ ನಿಜಾಮರ ಆಳ್ವಿಕೆಯ ಕಾಲದಲ್ಲಿ, ಕನ್ನಡಿಗರೇ ಹೆಚ್ಚಾಗಿ ವಾಸಿಸುವ ಪ್ರದೇಶವಾಗಿದ್ದರಿಂದ ನಿರ್ಲಕ್ಷ್ಯಕ್ಕೆ ಒಳಗಾಗಿತ್ತು ಎಂಬ ವಾದಗಳು ಇವೆ. ಬಳ್ಳಾರಿ ಜಿಲ್ಲೆಯು ಬ್ರಿಟೀಷ್ ಆಳ್ವಿಕೆಗೆ ಒಳಪಟ್ಟು, ಮದ್ರಾಸ್ ಪ್ರಾಂತ್ಯಕ್ಕೆ ಸೇರಿದ ಬಳಿಕ, ಶಿಕ್ಷಣ ಕ್ಷೇತ್ರದಲ್ಲಿ ಹಲವಾರು ಸುಧಾರಣೆಗಳಾದವು. ಕ್ರಿ.ಶ. ೧೮೨೩ರಲ್ಲಿ ಬಳ್ಳಾರಿ ಜಿಲ್ಲೆಯ ಅಂದಿನ ಕಲೆಕ್ಟರೇಟ್ ಆಗಿದ್ದ ಸರ್ ಥಾಮಸ್ ಮನ್ರೋ ಅವರು ಒಂದು ಸಮಿತಿಯನ್ನು ರಚಿಸಿ, ಜಿಲ್ಲೆಯಾದ್ಯಂತ ಪ್ರವಾಸ ಕೈಗೊಂಡು,

ಶೈಕ್ಷಣಿಕ ಸ್ಥಿತಿಗತಿಗಳನ್ನು ಅಧ್ಯಯನ ಮಾಡಿ, ಬಳ್ಳಾರಿ ಜಿಲ್ಲೆಯು ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದ ಜಿಲ್ಲೆ ಎಂದು ಮದ್ರಾಸ್ ಪ್ರಾಂತ್ಯದ ಗವರ್ನರ್‌ರವರಿಗೆ ವರದಿ ಸಲ್ಲಿಸಿದರು.

ಇಂದಿಗೂ ಈ ಪ್ರದೇಶದಲ್ಲಿ ಸಾಕ್ಷರತೆ ಮಟ್ಟ ಸುಧಾರಿಸಿಲ್ಲ. ಈ ಹಿನ್ನೆಲೆಯಲ್ಲಿ ಸಾಮಾಜಿಕ ಅಭಿವೃದ್ಧಿಗೆ ಶಿಕ್ಷಣ ಅವಶ್ಯಕವಾಗಿದೆ. ಒಂದು ಪ್ರದೇಶದ ಸಾಕ್ಷರತೆಯ ಪ್ರಮಾಣ, ಆ ಭಾಗದ ಶೈಕ್ಷಣಿಕ ಸ್ಥಿತಿಯನ್ನು ತಿಳಿಸುವ ಒಂದು ಪ್ರಮುಖ ಮಾಪನವಾಗಿದೆ. ಸಾಕ್ಷರತೆಯು ಉಪಕರಣವಾದಿ ಗುಣದೊಂದಿಗೆ ಅಂತಸ್ಥವಾದಿ ಗುಣವನ್ನು ಸಹ ಹೊಂದಿದೆ.

ಸ್ವಾತಂತ್ರ್ಯ ನಂತರ ಸಮಾಜದ ಅಭಿವೃದ್ಧಿಯ ದೃಷ್ಟಿಯಿಂದ ಸರಕಾರವು ಹಲವು ರೀತಿಯ ಕಾರ್ಯಕ್ರಮಗಳನ್ನು ಜಾರಿಗೆ ತಂದಿತು. ಅದರಲ್ಲಿ ಶೈಕ್ಷಣಿಕ ಪ್ರಗತಿಗೆ ಸಂಬಂಧಪಟ್ಟಂತೆ ವಿಶೇಷವಾಗಿ ೧೯೯೦ ರಿಂದ ಯು.ಎನ್.ಡಿ.ಪಿ ಹೊರತರುತ್ತಿರುವ ಮಾನವ ಅಭಿವೃದ್ಧಿ ಸೂಚ್ಯಾಂಕದಲ್ಲಿ ಸಾಕ್ಷರತೆಗೆ ಎರಡನೆಯ ಸ್ಥಾನವನ್ನು ನೀಡಲಾಗಿದೆ. ರಾಜ್ಯದ ಒಟ್ಟು ಅನಕ್ಷರಸ್ಥರಲ್ಲಿ ಬಳ್ಳಾರಿ ಜಿಲ್ಲೆಯ ಪಾಲು ಶೇಕಡ ೪.೭೮ರಷ್ಟಿದೆ. ಬಳ್ಳಾರಿ ಜಿಲ್ಲೆಯ ಒಟ್ಟು ಸಾಕ್ಷರತೆ ಶೇಕಡ ೫೭.೦೪ರಷ್ಟಿದೆ. ಪುರುಷರ ಒಟ್ಟು ಸಾಕ್ಷರತೆ ಶೇಕಡ ೬೯.೦೨ರಷ್ಟು ಇದ್ದರೆ, ಮಹಿಳೆಯರ ಒಟ್ಟು ಸಾಕ್ಷರತೆ ಶೇಕಡ ೪೫.೦೩ರಷ್ಟಿದೆ. ಇಲ್ಲಿ ಪುರುಷರ ಮತ್ತು ಮಹಿಳೆಯರ ನಡುವಿನ ಸಾಕ್ಷರತೆಯಲ್ಲಿ ಲಿಂಗತಾರತಮ್ಯ ಶೇಕಡ ೨೩.೯೯ ಅಂಶಗಳಷ್ಟಿದೆ. ಬಳ್ಳಾರಿ ಜಿಲ್ಲೆಯ ಗ್ರಾಮೀಣ ಭಾಗದ ಒಟ್ಟು ಸಾಕ್ಷರತೆ ಶೇಕಡ ೫೦.೦೩ರಷ್ಟಿದೆ. ಇದು ಕರ್ನಾಟಕ ರಾಜ್ಯದ ಗ್ರಾಮೀಣ ಪ್ರದೇಶದ ಒಟ್ಟು ಸಾಕ್ಷರತೆಗಿಂತ ಶೇಕಡ ೮.೮೫ ಅಂಶಗಳಷ್ಟು ಕಡಿಮೆ. ಈ ಜಿಲ್ಲೆಯ ಗ್ರಾಮೀಣ ಪ್ರದೇಶದ ಒಟ್ಟು ಮಹಿಳೆಯರ ಸಾಕ್ಷರತೆ ಶೇಕಡ ೩೬.೦೮ರಷ್ಟಿದೆ. ಇದು ರಾಜ್ಯದ ಗ್ರಾಮೀಣ ಪ್ರದೇಶದ ಒಟ್ಟು ಮಹಿಳೆಯರ ಸಾಕ್ಷರತೆಗಿಂತ ಶೇಕಡ ೧೧.೦೭ ಅಂಶಗಳಷ್ಟು ಕಡಿಮೆ. ಬಳ್ಳಾರಿ ಜಿಲ್ಲೆಯ ಗ್ರಾಮೀಣ ಪ್ರದೇಶದ ಒಟ್ಟು ಪುರುಷರ ಸಾಕ್ಷರತಾ ಪ್ರಮಾಣ ಶೇಕಡ ೬೩.೦೫ರಷ್ಟಿದೆ. ಇದು ರಾಜ್ಯದ ಗ್ರಾಮೀಣ ಪ್ರದೇಶದ ಒಟ್ಟು ಪುರುಷರ ಸಾಕ್ಷರತೆಗಿಂತ ಶೇಕಡ ೬.೫೯ ಅಂಶಗಳಷ್ಟು ಕಡಿಮೆ. ಬಳ್ಳಾರಿ ಜಿಲ್ಲೆಯಲ್ಲಿ ಅತ್ಯಾಧಿಕ ಸಾಕ್ಷರತೆ ಶೇಕಡ ೭೪.೦೩ರಷ್ಟು. ಸಂಡೂರು ತಾಲ್ಲೂಕಿನ ನಗರ ಪ್ರದೇಶದಲ್ಲಿದ್ದರೆ, ಅತ್ಯಂತ ಕಡಿಮೆ ಸಾಕ್ಷರತೆ ಶೇಕಡ ೪೦.೦೩ರಷ್ಟು ಸಿರುಗುಪ್ಪ ತಾಲ್ಲೂಕಿನ ಗ್ರಾಮೀಣ ಪ್ರದೇಶದಲ್ಲಿದೆ. ಇವೆರಡರ ನಡುವಿನ ಅಂತರ ಶೇಕಡ ೩೪.೦೦ ಅಂಶಗಳಷ್ಟಿದೆ (ಎಚ್.ಡಿ. ಪ್ರಶಾಂತ್, ೨೦೦೫).

### ಕೋಷ್ಟಕ-೨.೨

## ಬಳ್ಳಾರಿ ಜಿಲ್ಲೆಯ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಸಾಕ್ಷರತೆ ಪ್ರಮಾಣ (೨೦೦೧)

| ಕ್ರ.ಸಂ | ಜಿಲ್ಲೆ | ಪ್ರದೇಶ | ಸಾಕ್ಷರತಾ ಪ್ರಮಾಣ | | |
|---|---|---|---|---|---|
| | | | ಪುರುಷರು | ಮಹಿಳೆಯರು | ಒಟ್ಟು |
| ೧. | ಬಳ್ಳಾರಿ | ಒಟ್ಟು | ೬೯.೨ | ೪೫.೩ | ೫೭.೪ |
| | | ಗ್ರಾಮೀಣ | ೬೩.೫ | ೩೬.೮ | ೫೦.೩ |
| | | ನಗರ | ೭೯.೪ | ೬೦.೭ | ೭೦.೨ |
| ೨. | ಪರಿಶಿಷ್ಟ ಜಾತಿ | ಒಟ್ಟು | ೫೫.೫ | ೨೯.೦ | ೪೨.೩ |
| | | ಗ್ರಾಮೀಣ | ೫೦.೪ | ೨೩.೪ | ೩೬.೯ |
| | | ನಗರ | ೬೮.೦ | ೪೩.೪ | ೫೫.೮ |
| ೩. | ಪರಿಶಿಷ್ಟ ಪಂಗಡ | ಒಟ್ಟು | ೫೩.೪ | ೨೮.೮ | ೪೧.೧ |
| | | ಗ್ರಾಮೀಣ | ೫೦.೫ | ೨೫.೧ | ೩೭.೯ |
| | | ನಗರ | ೬೨.೮ | ೪೦.೭ | ೫೧.೭ |

ಮೂಲ : ಬಳ್ಳಾರಿ ಡಿಸ್ಟ್ರಿಕ್ಟ್ ಪಾಪ್ಯುಲೇಶನ್ ಬುಕ್‌ಲೆಟ್, ಸೆನ್ಸಸ್ ಆಫ್ ಇಂಡಿಯಾ, ೨೦೦೧, ಅಭಿವೃದ್ಧಿ ಅಧ್ಯಯನ ಪತ್ರಿಕೆ ಸಂ.೩ ಸಂಚಿಕೆ ೨, ೨೦೦೫.

### ಕೋಷ್ಟಕ-೨.೩

## ಬಳ್ಳಾರಿ ಜಿಲ್ಲೆಯಲ್ಲಿನ ತಾಲ್ಲೂಕುಗಳ ಗ್ರಾಮೀಣನಗರ ಪ್ರಾದೇಶವಾರು ಸಾಕ್ಷರತೆ ಪ್ರಮಾಣ

| ಕ್ರ.ಸಂ | ತಾಲ್ಲೂಕು | ಸಾಕ್ಷರತಾ ಪ್ರಮಾಣ | | |
|---|---|---|---|---|
| | | ಗಂಡಸರು | ಹೆಂಗಸರು | ಒಟ್ಟು |
| ೧. | ಹಡಗಲಿ | ೭೨.೧ | ೪೮.೨ | ೬೦.೩ |
| | ಗ್ರಾಮೀಣ | ೭೧.೫ | ೪೬.೩ | ೫೯.೦ |
| | ನಗರ | ೭೬.೧ | ೬೦.೩ | ೬೮.೫ |
| ೨. | ಹಗರಿಬೊಮ್ಮನಹಳ್ಳಿ | ೭೦.೮ | ೪೫.೨ | ೫೮.೧ |
| | ಗ್ರಾಮೀಣ | ೭೦.೮ | ೪೫.೨ | ೫೮.೧ |
| | ನಗರ | — | — | — |

| | | | | |
|---|---|---|---|---|
| ೩. | ಹೊಸಪೇಟೆ | ೭೧.೬ | ೫೦.೦ | ೬೦.೯ |
| | ಗ್ರಾಮೀಣ | ೫೯.೩ | ೩೪.೩ | ೪೬.೯ |
| | ನಗರ | ೭೯.೭ | ೬೦.೫ | ೭೦.೩ |
| ೪. | ಸಿರುಗುಪ್ಪ | ೫೬.೯ | ೩೦.೩ | ೪೩.೬ |
| | ಗ್ರಾಮೀಣ | ೫೪.೪ | ೨೬.೫ | ೪೦.೩ |
| | ನಗರ | ೬೩.೩ | ೪೦.೨ | ೫೧.೭ |
| ೫. | ಬಳ್ಳಾರಿ | ೭೦.೮ | ೪೮.೨ | ೫೯.೭ |
| | ಗ್ರಾಮೀಣ | ೫೮.೬ | ೩೧.೦ | ೪೪.೯ |
| | ನಗರ | ೮೨.೧ | ೬೪.೬ | ೭೩.೬ |
| ೬. | ಸಂಡೂರು | ೬೫.೫ | ೪೦.೪ | ೫೩.೩ |
| | ಗ್ರಾಮೀಣ | ೬೧.೪ | ೩೫.೧ | ೪೮.೬ |
| | ನಗರ | ೮೩.೫ | ೬೪.೩ | ೭೪.೩ |
| ೭. | ಕೂಡ್ಲಿಗಿ | ೭೨.೧ | ೪೬.೪ | ೫೯.೫ |
| | ಗ್ರಾಮೀಣ | ೭೦.೬ | ೪೩.೪ | ೫೭.೩ |
| | ನಗರ | ೭೯.೬ | ೬೧.೪ | ೭೦.೮ |

ಮೂಲ : ಬಳ್ಳಾರಿ ಡಿಸ್ಟ್ರಿಕ್ಟ್ ಪಾಪ್ಯುಲೇಶನ್ ಬುಕ್‌ಲೆಟ್, ಸೆನ್ಸಸ್ ಆಫ್ ಇಂಡಿಯಾ, ೨೦೦೧

**ಕೋಷ್ಟಕ-೨.೪**

## ಬಳ್ಳಾರಿ ಜಿಲ್ಲೆಯಲ್ಲಿನ ಅಕ್ಷರಸ್ಥರು, ಅನಕ್ಷರಸ್ಥರು ಮತ್ತು ಸಾಕ್ಷರತೆ

| ವಿವರ | ರಾಜ್ಯ | ಬಳ್ಳಾರಿ ಜಿಲ್ಲೆ | ರಾಜ್ಯದಲ್ಲಿ ಬಳ್ಳಾರಿ ಜಿಲ್ಲೆಯ ಪಾಲು |
|---|---|---|---|
| ಜನಸಂಖ್ಯೆ | ೫೨೭೩೩೯೫೮ | ೨೦೨೫೨೪೨ | ೩.೮೪ |
| ಅಕ್ಷರಸ್ಥರು | ೩೦೭೭೪೯೮೮ | ೧೦೦೦೬೦೨ | ೩.೨೫ |
| ಅನಕ್ಷರಸ್ಥರು | ೧೫೧೩೨೮೦೨ | ೭೨೩೪೨೩ | ೪.೭೮ |
| ಸಾಕ್ಷರತೆ | ೬೭.೦೪ | ೫೮.೦೪ | - |
| ಅನಕ್ಷರತೆ | ೩೨.೯೬ | ೪೧.೯೬ | ೪೭.೮ |

ಮೂಲ : ಎಚ್.ಡಿ. ಪ್ರಶಾಂತ್, ಈಶಾನ್ಯ ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣ ಮತ್ತು ಸಮಾಜ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೫.

## ೨.೫. ಬಳ್ಳಾರಿ ಜಿಲ್ಲೆಯ ಆರ್ಥಿಕತೆ

ಜಿಲ್ಲೆಯು ಉತ್ತಮ ಹವಾಗುಣ ಮತ್ತು ಪರಿಸರವನ್ನು ಹೊಂದಿದ್ದು, ನೈಸರ್ಗಿಕ ಸಂಪನ್ಮೂಲ ದಿಂದ ಶ್ರೀಮಂತಿಕೆಯನ್ನು ಉಳಿಸಿಕೊಂಡಿದೆ. ಆರ್ಥಿಕ ಅಭಿವೃದ್ಧಿಗೆ ನಿಸರ್ಗದ ನಾಡೇ ಕಾರಣ. ಇಲ್ಲಿ ಮಾನವನ ಶ್ರಮ, ಬಂಡವಾಳ ಮತ್ತು ವಿನಿಯೋಗ ಪ್ರಮುಖ ಅಂಶಗಳಾಗಿರುತ್ತವೆ. ಇಂತಹ ಅಂಶಗಳು ಅಭಿವೃದ್ಧಿಗೆ ಪೂರಕವಾಗುತ್ತವೆ. ಅಲ್ಲದೆ ಈ ಬದಲಾವಣೆಯಲ್ಲಿ ಏರುಪೇರುಗಳುಂಟು. ಆದರೂ ಅವುಗಳನ್ನು ಕಡೆಗಣಿಸುವಂತಿಲ್ಲ. ಆರ್ಥಿಕ ಅಭಿವೃದ್ಧಿಯು ಆಯಾ ಜಿಲ್ಲೆಯ ಆದಾಯ ಹಾಗೂ ತಲಾದಾಯಗಳು ಗಣನೀಯವಾದ ಪಾತ್ರವಹಿಸುತ್ತವೆ. ಬೆಲೆ ಅಧಿಕವಾಗುತ್ತಿರುವ ಸಂದರ್ಭದಲ್ಲಿ ಜನರ ಜೀವನ ಮಟ್ಟವು ಸುಧಾರಣೆಗೊಂಡಿಲ್ಲ. ಅತಿಹೆಚ್ಚು ಜನರು ಗ್ರಾಮೀಣ ಜೀವನವನ್ನು ಅನುಸರಿಸುತ್ತಿದ್ದರಿಂದ ಅವರ ದುಡಿಮೆಯ ಪ್ರತಿಫಲವು ಸ್ಥಿರವಾಗಿರುತ್ತದೆ. ಆದರೂ ಬೇಸಾಯ, ಕೈಗಾರಿಕೆ, ಸಾರಿಗೆ ಸಂಪರ್ಕ, ಶಿಕ್ಷಣ ಮಟ್ಟ, ಆರೋಗ್ಯ ಹಾಗೂ ಸೇವಾ ಕಾರ್ಯಗಳು ಉತ್ತಮ ರೀತಿಯಲ್ಲಿ ಸಾಗುತ್ತಿಲ್ಲ. ಜಿಲ್ಲೆಯಲ್ಲಿ ಅತಿಯಾದ ನೈಸರ್ಗಿಕ ಸಂಪತ್ತು ಕೆಲವರ ಸ್ವತ್ತಾಗಿ, ಜನಸಾಮಾನ್ಯರ ಪಾಲಿಗೆ ಮರೀಚಿಕೆಯಾಗಿದೆ. ಇದರಿಂದಲೇ ಬಡ ಜನರಿಂದ ಕೂಡಿದ ಶ್ರೀಮಂತ ದೇಶ ಎಂಬ ಮಾತು ಸತ್ಯವಾಗಿದೆ. ಇಲ್ಲಿ ಅತಿಹೆಚ್ಚು ಜನರು ಗ್ರಾಮೀಣ ಪ್ರದೇಶದಲ್ಲಿ ಜೀವಿಸುತ್ತಿರು ವುದರಿಂದ, ಅವರಿಗೆ ಬೇಸಾಯವೇ ಪ್ರಮುಖ ಕಸುಬಾಗಿದ್ದುದರಿಂದ ಆರ್ಥಿಕ ಹಿನ್ನೆಡೆಗೆ ಇದೊಂದು ಕಾರಣವಾಗಿದೆ. ಶೇಕಡ ೭೫ರಷ್ಟು ಜನರು ವಂಶಾಪಾರಂಪರ್ಯ ಕೃಷಿ, ಕೃಷಿಯೇತರ ಕಸುಬಿನಲ್ಲಿ ತೊಡಗಿಸಿಕೊಂಡಿದ್ದಾರೆ. ಇದರಿಂದ ಅವರ ಆದಾಯ ಮತ್ತು ಉದ್ಯೋಗ ಅನಿಶ್ಚಿತವಾಗಿರುತ್ತದೆ. ಅಲ್ಲದೇ ಆಧುನೀಕರಣದ ಪ್ರಭಾವದಿಂದ ಗ್ರಾಮೀಣ ಕುಶಲಕರ್ಮಿಗಳು ತುಂಬಾ ದುರ್ಬಲರಾಗಿದ್ದಾರೆ ಎಂದು ಹೇಳಬಹುದು.

## ೨.೬. ಜಿಲ್ಲೆಯ ಪ್ರಾಕೃತಿಕ ಸಂಪನ್ಮೂಲಗಳು ಮತ್ತು ಹವಾಮಾನ

ತುಂಗಭದ್ರಾ ನದಿಯು ಜಿಲ್ಲೆಯ ನೈಸರ್ಗಿಕ ಮೇರೆಯಾಗಿದ್ದು, ಪಶ್ಚಿಮದಲ್ಲಿ ಹಾವೇರಿ, ಗದಗ ಮತ್ತು ಕೊಪ್ಪಳ ಜಿಲ್ಲೆಗಳನ್ನು ಹಾಗೂ ಉತ್ತರದಲ್ಲಿ ರಾಯಚೂರು ಜಿಲ್ಲೆಯನ್ನು ಪ್ರತ್ಯೇಕಿಸುತ್ತದೆ. ಪೂರ್ವದಲ್ಲಿ ಹಗರಿ ನದಿಯು ಹರಿಯುತ್ತದೆ. ಜಿಲ್ಲೆಯ ಪೂರ್ವಭಾಗದಲ್ಲಿ ಸಾಮಾನ್ಯವಾಗಿ ಕಪ್ಪು ಮಣ್ಣಿನ ಪ್ರದೇಶ ಇರುವುದರಿಂದ ಕೃಷಿ ಮತ್ತು ತೋಟಗಾರಿಕ ಚಟುವಟಿಕೆಗಳಿಗೆ ಉಪಯುಕ್ತವಾಗಿರುವುದು ಕಂಡುಬರುತ್ತದೆ. ಸಂಡೂರು ತಾಲ್ಲೂಕಿನಲ್ಲಿ ಎತ್ತರವಾದ ಗುಡ್ಡಗಳಿದ್ದು ಅವುಗಳ ಎತ್ತರವು ಸಮುದ್ರದ ಮಟ್ಟಕ್ಕೆ ೩,೨೦೦ ಅಡಿ ಎತ್ತರದಲ್ಲಿದೆ (ಬಳ್ಳಾರಿ ಜಿಲ್ಲೆಯ ಅಂಕಿ-ಅಂಶಗಳ ನೋಟ ೨೦೦೨-೦೩).

ಜಿಲ್ಲೆಯ ಹವಾಮಾನವು ವರ್ಷದಲ್ಲಿ ಹೆಚ್ಚಿನ ಭಾಗ ಶುಷ್ಕವಾಗಿದ್ದು, ಬೇಸಿಗೆಯಲ್ಲಿ ಅತಿಹೆಚ್ಚಿನ ಉಷ್ಣಾಂಶಗಳಿಂದ ಕೂಡಿರುತ್ತದೆ. ಡಿಸೆಂಬರ್‌ನಿಂದ ಫೆಬ್ರುವರಿಯವರೆಗೆ ವಾತಾವರಣ

ತಂಪಾಗಿರುತ್ತದೆ. ಚಳಿಗಾಳದಲ್ಲಿ ಕನಿಷ್ಠ ಉಷ್ಣಾಂಶವು ೯-೧೦ ಸೆಂ. ಇದ್ದು, ಗರಿಷ್ಠ ಉಷ್ಣಾಂಶವು ೩೫ರವರೆಗೆ ಇರುತ್ತದೆ. ಬೇಸಿಗೆ ಕಾಲವು ಮಾರ್ಚ್‌ನಿಂದ ಮೇ ವರೆಗೆ ಇದ್ದು, ರಾಜ್ಯದಲ್ಲಿಯೇ ಹೆಚ್ಚು ಉಷ್ಣಾಂಶತೆಯಿಂದ ಕೂಡಿರುತ್ತದೆ. ಬೇಸಿಗೆಯಲ್ಲಿ ಕನಿಷ್ಠ ೧೫ ಸೆಂ. ನಿಂದ ಗರಿಷ್ಠ ೪೪ ಸೆಂ. ವರೆಗೆ ಉಷ್ಣಾಂಶವು ಇರುತ್ತದೆ.

## ೨.೭. ಜಿಲ್ಲೆಯ ಆಡಳಿತ ವ್ಯವಸ್ಥೆ

ಜಿಲ್ಲೆಯ ಕೇಂದ್ರಸ್ಥಾನ ಬಳ್ಳಾರಿ. ಜಿಲ್ಲೆಯೂ ಏಳು ತಾಲ್ಲೂಕುಗಳನ್ನು ಹೊಂದಿರುತ್ತದೆ. ಎರಡು ನಗರ ಸಭೆಗಳು, ಬಳ್ಳಾರಿ ಮತ್ತು ಹೊಸಪೇಟೆ ತಾಲ್ಲೂಕುಗಳಲ್ಲೂ ಹಾಗೂ ಒಂದು ಪುರಸಭೆ ಕಂಪ್ಲಿ, ಸಿರುಗುಪ್ಪ, ಹೊಸಪೇಟೆ, ಹಡಗಲಿ, ಸಂಡೂರು, ಕೊಟ್ಟೂರು ಮತ್ತು ಕೂಡ್ಲಿಗಿ ಒಟ್ಟು ಏಳು ಪಟ್ಟಣ ಪಂಚಾಯಿತಿಗಳು ಇರುತ್ತವೆ. ಜಿಲ್ಲೆಯಲ್ಲಿ ೫೪೨ ಗ್ರಾಮಗಳಿದ್ದು, ಅವುಗಳಲ್ಲಿ ೫೧೭ ಜನವಸತಿ ಇರುವ ಗ್ರಾಮಗಳಿದ್ದು, ೨೫ ಗ್ರಾಮಗಳು ಜನವಸತಿ ಇರದ ಗ್ರಾಮಗಳಿವೆ.

## ೨.೮. ಜಿಲ್ಲೆಯ ಆದಾಯ

ರಾಜ್ಯದ ಒಟ್ಟು ಆದಾಯ ೧,೦೪,೮೧,೪೮೯ ಲಕ್ಷ ರೂ.ಗಳಲ್ಲಿ ಜಿಲ್ಲೆಯ ಆದಾಯ ೩,೬೫,೫೮೯ ಲಕ್ಷ ರೂ.ಗಳಾಗಿದ್ದು ಇದು ರಾಜ್ಯದ ಒಟ್ಟು ಆದಾಯಕ್ಕೆ ಹೋಲಿಸಿದರೆ ಶೇಕಡ ೩.೬೫ರಷ್ಟಾಗಿರುತ್ತದೆ.

ಜಿಲ್ಲೆಯ ತಲಾ ಆದಾಯ ೧೮,೧೪೫ ರೂಗಳಿರುತ್ತದೆ. ಇತರೆ ಜಿಲ್ಲೆಗಳಿಗೆ ಹೋಲಿಸಿದಾಗ ಈ ಜಿಲ್ಲೆಯು ಆದಾಯದಲ್ಲಿ ೧೫ನೇ ಸ್ಥಾನದಲ್ಲಿದೆ (ಬಳ್ಳಾರಿ ಜಿಲ್ಲೆಯ ಅಂಕಿ-ಅಂಶಗಳ ನೋಟ, ೨೦೦೩).

## ಹೊಸಪೇಟೆ ತಾಲ್ಲೂಕು

ಬಳ್ಳಾರಿ ಜಿಲ್ಲೆಯಲ್ಲಿ ಹೊಸಪೇಟೆಯು ಪ್ರಮುಖ ತಾಲ್ಲೂಕು ಹಾಗೂ ಉಪವಿಭಾಗವಾಗಿದೆ. ತಾಲ್ಲೂಕಿನಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶಗಳೆಂದರೆ, ಈ ತಾಲ್ಲೂಕು ಹೆಚ್ಚು ನೀರಾವರಿ ಪ್ರದೇಶವನ್ನು ಹೊಂದಿದ್ದು, ಬೃಹತ್ ಮಧ್ಯಮ ಗಾತ್ರದ ಕಬ್ಬಿಣ ಮತ್ತು ಉಕ್ಕು ಉದ್ಯಮಗಳನ್ನು ಹಾಗೂ ಗಣಿಗಾರಿಕೆಯನ್ನು ಹೊಂದಿದೆ. ತಾಲ್ಲೂಕಿನ ಪೂರ್ವ ಭಾಗದ ಗ್ರಾಮಗಳು, ಹೆಚ್ಚು ನೀರಾವರಿ ಪ್ರದೇಶಗಳಾಗಿವೆ. ಈ ಭಾಗದಲ್ಲಿ ಬೆಳೆಯುವ ವಾಣಿಜ್ಯ ಬೆಳೆಗಳು ಅಧಿಕವಾಗಿವೆ. ಇದರಿಂದ ಹೊಸಪೇಟೆ ಮಾರುಕಟ್ಟೆ ವ್ಯವಹಾರವನ್ನು ಹೆಚ್ಚಿಸಿದೆ. ತಾಲ್ಲೂಕಿನಲ್ಲಿ ನೀರಾವರಿ ಪ್ರದೇಶ ಕೆಲವೇ ಪ್ರದೇಶಕ್ಕೆ ಮಾತ್ರ ಸಿಮೀತವಾಗಿದೆ. ತಾಲ್ಲೂಕಿನ ಉತ್ತರ ಭಾಗದಲ್ಲಿರುವ, ತುಂಗಭದ್ರ ನದಿ ನೀರಾವರಿಯು, ಕೃಷಿ-ಕೃಷಿಯೇತರ ಕೆಲಸ ಕಾರ್ಯಗಳಿಗೆ ಪ್ರಮುಖ ಮೂಲವಾಗಿದೆ.

ಹೊಸಪೇಟೆ ತಾಲ್ಲೂಕು ೨೦೦೧ರ ಜನಗಣತಿಯ ಪ್ರಕಾರ ಒಟ್ಟು ಜನಸಂಖ್ಯೆ ೩,೭೪,೯೪೯ರಷ್ಟು ಹೊಂದಿದ್ದು, ಇದರಲ್ಲಿ ಪುರುಷರು ೧,೮೯,೬೭೪ ಮತ್ತು ಮಹಿಳೆಯರು ೧,೮೫,೨೭೫ರಷ್ಟಿದ್ದಾರೆ. ಜಿಲ್ಲೆಯಲ್ಲಿ ತಾಲ್ಲೂಕಿನ ಪಾಲು, ಶೇಕಡ ೧೮.೪೫ರಷ್ಟಿದೆ. ಅತಿ ಹೆಚ್ಚು ಜನಸಂಖ್ಯೆಯನ್ನು ಹೊಂದಿದ್ದು, ಜಿಲ್ಲೆಯ ೨ನೇ ತಾಲ್ಲೂಕಾಗಿದೆ. ಜಾತಿವಾರು ಜನಸಂಖ್ಯೆಯಲ್ಲಿ ಪರಿಶಿಷ್ಟ ಜಾತಿ ಜನರ ಪ್ರಮಾಣ ಶೇಕಡ ೩೨.೯೧ರಷ್ಟು ಹೊಂದಿದ್ದು, ಇದು ಜಿಲ್ಲೆಯಲ್ಲಿ ೩ನೇ ಸ್ಥಾನದಲ್ಲಿದೆ. ತಾಲ್ಲೂಕಿನ ಸಾಕ್ಷರರ ವಿವರವನ್ನು ನೋಡಿದಾಗ, ಜಿಲ್ಲೆಯಲ್ಲಿ ತಾಲ್ಲೂಕು ಅತಿಹೆಚ್ಚು ಅಂದರೆ ಶೇಕಡ ೬೦.೦೯ರಷ್ಟು ಸಾಕ್ಷರತೆಯನ್ನು ಹೊಂದಿದೆ. ತಾಲ್ಲೂಕಿನಲ್ಲಿ ಲಿಂಗಾಯಿತರು, ನಾಯಕರು, ಮಾದಿಗರು, ಮುಸ್ಲಿಂಮರು ಮತ್ತು ಕುರುಬರು, ಒಕ್ಕಲಿಗರು ಮುಂತಾದ ಜನ ಸಮುದಾಯಗಳಿವೆ. ರಾಜಕೀಯವಾಗಿ ಹೊಸಪೇಟೆ ತಾಲ್ಲೂಕನ್ನು ನೋಡುವುದಾದರೆ, ತಾಲ್ಲೂಕು ತನ್ನದೇ ಆದ ವಿಧಾನ ಸಭಾ ಕ್ಷೇತ್ರವನ್ನು ಹೊಂದಿದೆ. ಇತ್ತೀಚೆಗೆ ಅದನ್ನು ವಿಜಯನಗರ ವಿಧಾನ ಸಭಾ ಕ್ಷೇತ್ರ ಎಂದು ನಾಮಕರಣ ಮಾಡಲಾಗಿದೆ.

**ಕಮಲಾಪುರ ಪಟ್ಟಣ ಪಂಚಾಯಿತಿ :** ತಾಲ್ಲೂಕಿನ ಕೇಂದ್ರವಾಗಿರುವ ಕಮಲಾಪುರವು ಹೊಸಪೇಟೆ ನಗರದಿಂದ ೧೨ ಕಿ.ಮೀ ದೂರದಲ್ಲಿದೆ. ಈ ಊರು ಪುರಸಭೆಗೆ ಸೇರಿದ್ದು, ಇದರ ವಿಸ್ತೀರ್ಣ ೧೪ ಚ.ಕಿ.ಮೀಟರು. ಇದು ಹೊಸಪೇಟೆಯಿಂದ ಕಂಪ್ಲಿಗೆ ಹೋಗುವ ಮಾರ್ಗದಲ್ಲಿದೆ. ಊರಿನ ದಕ್ಷಿಣಕ್ಕೆ ವಿಜಯನಗರ ಕಾಲದ ಪ್ರಸಿದ್ಧವಾದ ಕಮಲಾಪುರದ ಕೆರೆ ಇದೆ. ಕಮಲಾಪುರವು ಹಿಂದೆ ವಿಜಯನಗರ ಸಾಮ್ರಾಜ್ಯದ ಒಂದು ಭಾಗವಾಗಿತ್ತು ಎಂಬುದಕ್ಕೆ ಆ ಕಾಲದ ಎರಡು ಶಾಸನಗಳು ಈ ಗ್ರಾಮದಲ್ಲಿ ಲಭ್ಯವಾಗಿವೆ. ಒಂದು ಐತಿಹ್ಯದ ಪ್ರಕಾರ ಪ್ರೌಢದೇವರಾಯನ ಪತ್ನಿ ಕಮಲಾದೇವಿಯ ಗ್ರಾಮ ಇದಾಗಿದ್ದರಿಂದ ಅವಳ ಹೆಸರೇ ಈ ಊರಿಗೆ ಬಂದಿದೆಂದು ಹೇಳಲಾಗಿದೆ. ಪ್ರಸ್ತುತದಲ್ಲಿ ಸಹ ಊರಿನ ಒಳಗೆ ಮತ್ತು ಹೊರಗೆ ವಿಜಯನಗರ ಕಾಲದ ಕೋಟೆ ಹಾಗೂ ದೇವಾಲಯಗಳ ಇತರ ಅವಶೇಷಗಳು ಕಂಡುಬರುತ್ತವೆ.

೨೦೦೧ರ ಜನಗಣತಿ ಪ್ರಕಾರ ಇಲ್ಲಿನ ಒಟ್ಟು ಜನಸಂಖ್ಯೆ ೨೧,೮೩೦. ಅದರಲ್ಲಿ ೧೦,೯೩೬ ಪುರುಷರು, ೧೦,೮೯೪ ಮಹಿಳೆಯರಿದ್ದಾರೆ. ಜನಗಣತಿಯ ಪ್ರಕಾರ ೪,೦೯೨ ವಾಸಿಸುವ ಮನೆಗಳಿವೆ. ಈ ಊರಿನಲ್ಲಿ ಪರಿಶಿಷ್ಟ ಜಾತಿ (ಮಾದರು, ಚಲವಾದಿ, ಕೊರವ, ಲಂಬಾಣಿ, ಭೋವಿ) ಇತ್ಯಾದಿ ಪರಿಶಿಷ್ಟ ಪಂಗಡ (ನಾಯಕರು) ಲಿಂಗಾಯಿತರು, ಬ್ರಾಹ್ಮಣರು, ಮುಸ್ಲಿಂರು, ವೈಶ್ಯರು, ಉಪ್ಪಾರರು, ಬಡಗಿ, ಅಕ್ಕಸಾಲಿಗರು, ಕುಂಬಾರರು, ಕುರುಬರು, ಒಕ್ಕಲಿಗರು ಮುಂತಾದ ಜನಸಮುದಾಯದವರು ಇದ್ದಾರೆ. ಇಲ್ಲಿ ಮುಸ್ಲಿಂ, ಪರಿಶಿಷ್ಟ ಜಾತಿ, ಕುರುಬರ ಜನಸಂಖ್ಯೆಯೂ ಹೆಚ್ಚಾಗಿದೆ. ಇಲ್ಲಿನ ಪ್ರದೇಶ ನೀರಾವರಿ ಪ್ರದೇಶವಾದ್ದರಿಂದ ವಾಣಿಜ್ಯ ಬೆಳೆಗಳಾದ ಕಬ್ಬು, ಭತ್ತ, ಬಾಳೆ, ತರಕಾರಿ, ಸೊಪ್ಪು ಇತ್ಯಾದಿ ಬೆಳೆಗಳನ್ನು ಬೆಳೆಯುತ್ತಾರೆ. ಸಾಮಾಜಿಕವಾಗಿ ಗ್ರಾಮವನ್ನು ನೋಡುವುದಾದರೆ, ವಿವಿಧ ಜಾತಿ ವರ್ಗಗಳನ್ನು ಹೊಂದಿದೆ.

ಯಾವುದೇ ಒಂದು ಪ್ರದೇಶದ ಅಭಿವೃದ್ಧಿಯಲ್ಲಿ ಆರ್ಥಿಕ ಚಟುವಟಿಕೆಗಳು ಬಹಳ ಮುಖ್ಯ ಪಾತ್ರವಹಿಸುತ್ತದೆ. ಬಳ್ಳಾರಿ ಜಿಲ್ಲೆಯಲ್ಲಿನ ಖನಿಜ ಸಂಪತ್ತು ಔದ್ಯೋಗಿಕ ಪ್ರಗತಿಗೆ ಬೆನ್ನೆಲುಬಾಗಿದೆ. ಜಿಲ್ಲೆಯು ಉತ್ಕೃಷ್ಟ ಕಬ್ಬಿಣ ಮತ್ತು ಮ್ಯಾಂಗನೀಸ್ ಖನಿಜಗಳಿಗೆ ವಿಶ್ವವಿಖ್ಯಾತಿ ಗಳಿಸಿದೆ. ಊರಿನ ದುಡಿಮೆ ವರ್ಗವನ್ನು ನೋಡಿದಾಗ ಹೆಚ್ಚು ಕೃಷಿಯನ್ನು ಅವಲಂಬಿಸಿದ್ದಾರೆ. ಒಟ್ಟು ಜನಸಂಖ್ಯೆಯಲ್ಲಿ ಶೇಕಡ ೭೩ರಷ್ಟು ಕೃಷಿಯನ್ನು ಅವಲಂಬಿಸಿದ್ದಾರೆ. ಕೃಷಿಗೆ ತುಂಗಭದ್ರಾ ನದಿಯು ಪ್ರಮುಖವಾದ ನೀರಾವರಿಯ ಮೂಲವಾಗಿದೆ. ಈ ನದಿಯು ಜಿಲ್ಲೆಯ ಪಶ್ಚಿಮ ಮತ್ತು ಉತ್ತರ ದಿಕ್ಕುಗಳ ಮೇರೆಯಾಗಿದೆ.

## ೨.೯. ತುಮಕೂರು ಜಿಲ್ಲೆಯ ಚಾರಿತ್ರಿಕ ಹಿನ್ನೆಲೆ

ಜಿಲ್ಲೆಯ ಭವ್ಯ ಪರಂಪರೆಯನ್ನು ವಿವರಿಸುವ ಅನೇಕ ದಂತಕಥೆಗಳು ಪ್ರಚಲಿತದಲ್ಲಿವೆ. ಇವುಗಳಲ್ಲಿ ಕಡಬದ ಕೆರೆಯನ್ನು ಶ್ರೀರಾಮಚಂದ್ರನ ನಿರ್ದೇಶನದಂತೆ ಕಟ್ಟಲಾಯಿತೆಂದು, ಚಕ್ರವರ್ತಿ ನೃಪನು ನಾಗಿಣಿ ನದಿಯಲ್ಲಿ ಸ್ನಾನ ಮಾಡಿ, ಕುಷ್ಠರೋಗದಿಂದ ಮುಕ್ತನಾದನೆಂದು, ಶಕಪುರುಷ ಶಾಲಿವಾಹನನ ಜನ್ಮಸ್ಥಳವೆಂದೂ, ಹೇಳುವ ದಂತಕಥೆಗಳು ಪ್ರಮುಖವಾದವುಗಳು.

ತುಮಕೂರು ಜಿಲ್ಲೆಯ ವಿವಿಧ ಭಾಗಗಳನ್ನು ಗಂಗರು, ನೊಳಂಬರು, ಹೊಯ್ಸಳರು, ಚಾಲುಕ್ಯರು, ವಿಜಯನಗರದ ಸಾಮಂತ ರಾಜರು, ಬಿಜಾಪುರದ ಸುಲ್ತಾನರು, ಹೈದರಾಲಿ, ಟಿಪ್ಪು ಸುಲ್ತಾನ್, ದೆಹಲಿಯ ಮೊಘಲರು, ಮೈಸೂರು ಅರಸರು ಹಾಗೂ ಬ್ರಿಟಿಷರು ಆಳಿದ ಬಗ್ಗೆ ಹಲವಾರು ಶಿಲಾಶಾಸನ ಹಾಗೂ ದಾಖಲೆಗಳಿಂದ ತಿಳಿದುಬರುತ್ತದೆ. ಗಂಗರ ಕಾಲದ ೧೦ನೇ ಶತಮಾನಕ್ಕೆ ಸೇರಿದ ಶಾಸನವೊಂದರಲ್ಲಿ ತುಮಕೂರು ಹೆಸರಿನ ಬಗ್ಗೆ ಪ್ರಪ್ರಥಮವಾಗಿ ಪ್ರಸ್ತಾಪಿಸಲ್ಪಟ್ಟಿದೆ. ಆ ಶಾಸನದಲ್ಲಿ 'ತುಮ್ಮೆಗೂರು' ಎಂದು ಬರೆಯಲಾಗಿದ್ದು, ಆಗ ಆ ಪ್ರದೇಶವು ತುಮ್ಮೆ ಅಥವಾ ತುಂಬೆ ಹೂಗಳಿಗೆ ಪ್ರಸಿದ್ಧಿಯಾದ್ದರಿಂದ ಈ ಹೆಸರು ರೂಢಿಯಲ್ಲಿ ಬಂದಿರಬಹುದೆಂದು ತರ್ಕಿಸಲಾಗಿದೆ. ತುಮಕೂರು ಹೆಸರಿನ ಬಗ್ಗೆ ಪ್ರಚಲಿತದಲ್ಲಿರುವ ಇನ್ನೊಂದು ಕಥೆಯಂತೆ ತುಮಕೂರು ಬಳಿ ಇರುವ ಕ್ರೀಡಾಪುರ ಅಂದರೆ ಕೈದಾಳ ರಾಜಧಾನಿಯನ್ನು ಆಳುತ್ತಿದ್ದ ರಾಜನು ಹಿಂದಿನ ತುಮಕೂರು ಪ್ರದೇಶವನ್ನು ತನ್ನ ಸೈನ್ಯದ ಟುಂಕಿ ಹೊಡೆಯುವವನೊಬ್ಬನಿಗೆ ಜಹಗೀರು ಕೊಟ್ಟಿದ್ದನೆಂದೂ ಕಾಲಕ್ರಮೇಣ ಆ 'ಟುಮಕಿ' ಊರು ಇಂದಿನ ಟುಮಕೂರಾಯಿತ್ತೆಂದು ಹೇಳಲಾಗುತ್ತಿದೆ. ಕ್ರಿ.ಶ. ೧೬೩೦ರಲ್ಲಿ ರಣಧೀರ ಕಂಠೀರವ ನರಸಿಂಹರಾಜ ಒಡೆಯರ್ ತುಮಕೂರನ್ನು ಮೈಸೂರಿಗೆ ಒಳಪಡಿಸಿದ ನಂತರ ಇದು ಮೈಸೂರು ಅರಸರ ಪ್ರಭುತ್ವಕ್ಕೆ ಒಳಪಟ್ಟಿತು. ಬಿಜಾಪೂರದ ದಂಡನಾಯಕ ಕ್ರಿ.ಶ. ೧೬೩೮ರಲ್ಲಿ ಶಿರಾದ ಮೇಲೆ ದಾಳಿ ಮಾಡಿದಾಗ ತುಮಕೂರನ್ನು ಆಕ್ರಮಿಸುವ ಯೋಜನೆಯಲ್ಲಿದ್ದರೂ ಕೂಡ ಕಾರಣಾಂತರದಿಂದ ಕೈಬಿಟ್ಟು, ಬೆಂಗಳೂರಿನ ಕಡೆಗೆ ಮುನ್ನುಗ್ಗಿ ಅದನ್ನು ಗೆದ್ದುಕೊಂಡನು. ಈ

ಸಂದರ್ಭದಲ್ಲಿ ತುಮಕೂರು ಜನತೆ ಮೈಸೂರು ಒಡೆಯರ ಅಧೀನದಲ್ಲಿ ಸಂರಕ್ಷಿತವಾಗಿದ್ದುದ್ದರಿಂದ ಈ ಭಾಗದ ಜನತೆ ಮೈಸೂರು ರಾಜ್ಯದ ಮೇಲೆ ಗೌರವ ಘನತೆಗಳು ಹೆಚ್ಚಾದವು. ಚಿಕ್ಕದೇವರಾಜ ಒಡೆಯರು ತಮ್ಮ ರಾಜ್ಯವನ್ನು ಪ್ರಾಂತ್ಯಗಳನ್ನಾಗಿ ವಿಭಾಗಿಸಿದಾಗ ತುಮಕೂರು ಕೂಡ ಒಂದು ವಿಭಾಗವಾಗಿ ತಾಲ್ಲೂಕಿನ ಸ್ಥಾನಮಾನವನ್ನು ಪಡೆದುಕೊಂಡಿತು. ಕಾಲಕ್ರಮೇಣ ಈ ನಗರ ಹೈದರ್-ಟಿಪ್ಪುವಿನ ಆಳ್ವಿಕೆಗೆ ಒಳಪಟ್ಟಿತು. ಟಿಪ್ಪು ಸುಲ್ತಾನ ೧೭೯೯ರಲ್ಲಿ ಹತನಾದ ನಂತರ ಮೈಸೂರು ರಾಜ್ಯವು ಇಮ್ಮಡಿ ಕೃಷ್ಣರಾಜ ಒಡೆಯರಿಗೆ ವರ್ಗವಾದ ಮೇಲೆ ತುಮಕೂರು ಪ್ರಾಂತ್ಯವು ಮಧುಗಿರಿ ಫೌಜುದಾರರಿಗೆ ಸೇರಿತು. ೧೮೩೧ರಲ್ಲಿ ಬ್ರಿಟಿಷರು ಈ ರಾಜ್ಯವನ್ನು ವಹಿಸಿಕೊಂಡಾಗ ಇದನ್ನು ಎಂಟು ಜಿಲ್ಲೆಗಳನ್ನಾಗಿ ವಿಭಾಗಿಸಲ್ಪಟ್ಟು, ತುಮಕೂರು ಸಹ ಒಂದು ಜಿಲ್ಲೆಯಾಗಿ ಚಿತ್ರದುರ್ಗ ವಿಭಾಗಕ್ಕೆ ಸೇರಿತು. ೧೮೬೩ರಲ್ಲಿ ಚಿತ್ರದುರ್ಗ ವಿಭಾಗದಿಂದ ಬೇರ್ಪಡಿಸಿ ನಂದಿದುರ್ಗ ವಿಭಾಗಕ್ಕೆ ಸೇರಿತ್ತು. ೧೮೮೨ರಲ್ಲಿ ಚಿತ್ರದುರ್ಗವನ್ನು ತುಮಕೂರಿನ ಒಂದು ಉಪವಿಭಾಗವಾಗಿ ಮಾಡಿದರು. ಆದರೆ ೧೮೮೬ರಲ್ಲಿ ಚಿತ್ರದುರ್ಗವನ್ನು ಪ್ರತ್ಯೇಕ ಜಿಲ್ಲೆಯನ್ನಾಗಿ ಮಾಡಿದಾಗ ಪಾವಗಡ, ತುಮಕೂರು ಜಿಲ್ಲೆಗೆ ಸೇರಿತು. ಈ ಅವಧಿಯಲ್ಲಿ ತುಮಕೂರು ಜಿಲ್ಲೆಯ ವ್ಯಾಪ್ತಿಗೆ ಎಂಟು ತಾಲ್ಲೂಕು ಸೇರಿದವು (ಲೀಲಾವತಿ ಟಿ.ಆರ್., ೨೦೦೭).

೧೯ನೇ ಶತಮಾನದ ಆದಿಯಲ್ಲಿ ತುಮಕೂರು ಜಿಲ್ಲೆಯು ಮಧುಗಿರಿ ಫೌಜುದಾರರಿಗೆ ಸೇರಿತ್ತು. ಮೈಸೂರು ರಾಜ್ಯವನ್ನು ಬ್ರಿಟಿಷರು ವಶಪಡಿಸಿಕೊಂಡ ನಂತರ ೧೮೮೬ರಲ್ಲಿ ಪಾವಗಡ ತಾಲ್ಲೂಕು ಸೇರಿದಂತೆ ಇಂದಿನ ತುಮಕೂರು ಜಿಲ್ಲೆ ಅಸ್ತಿತ್ವಕ್ಕೆ ಬಂದಿತು (ಕೆ. ರವಿಕುಮಾರ, ೨೦೦೨).

**೨.೧೦. ಜಿಲ್ಲೆಯ ಭೌಗೋಳಿಕ ಅಂಶಗಳು**

ಅಭಿವೃದ್ಧಿ ಹೊಂದುತ್ತಿರುವ ಜಿಲ್ಲೆಗಳಲ್ಲೊಂದಾದ ತುಮಕೂರು ಜಿಲ್ಲೆಯು ಕರ್ನಾಟಕ ರಾಜ್ಯದ ದಕ್ಷಿಣ ಭಾಗದಲ್ಲಿದೆ. ಜಿಲ್ಲೆಯು ೧೦೫೯೮ ಚದರ ಕಿಲೋಮೀಟರ್ ವಿಸ್ತೀರ್ಣವನ್ನು ಹೊಂದಿದ್ದು, ಇದು ರಾಜ್ಯದ ಜಿಲ್ಲೆಗಳಲ್ಲಿ ಮೂರನೇ ಸ್ಥಾನವನ್ನು ಹೊಂದಿದೆ. ಅಂದರೆ ರಾಜ್ಯದ ವಿಸ್ತೀರ್ಣದ ೫.೫೩ರಷ್ಟಿದೆ. ತುಮಕೂರು ಜಿಲ್ಲೆಯು ಬೆಂಗಳೂರಿನಿಂದ ೭೦ ಕಿಲೋಮೀಟರ್ ದೂರದಲ್ಲಿದೆ. ಈ ಜಿಲ್ಲೆಯು ೧೨°-೪೫° ರಿಂದ ೧೪°-೨೪° ಉತ್ತರ ಅಕ್ಷಾಂಶ ಹಾಗೂ ೭೬°-೨೦° ರಿಂದ ೭೭°-೩೧° ಪೂರ್ವ ರೇಖಾಂಶಗಳ ನಡುವೆ ನೆಲೆಸಿದೆ. ಇದರ ಈಶಾನ್ಯ ಭಾಗವು ಜಿಲ್ಲೆಯ ಉಳಿದ ಪ್ರದೇಶಗಳಿಂದ ಪೂರ್ಣವಾಗಿ ಬೇರ್ಪಟ್ಟಿರುವುದು ಇದರ ಒಂದು ವಿಶಿಷ್ಟ ಲಕ್ಷಣ. ಪಾವಗಡ ತಾಲ್ಲೂಕು ನೆರೆ ರಾಜ್ಯವನ್ನು ಸುತ್ತುವರಿದಿರುವ ಪ್ರದೇಶವಾಗಿದೆ. ತುಮಕೂರು ಜಿಲ್ಲೆಯ ಉತ್ತರಕ್ಕೆ ಆಂಧ್ರಪ್ರದೇಶದ ಅನಂತಪುರ, ಪೂರ್ವಕ್ಕೆ ಕೋಲಾರ ಮತ್ತು ಬೆಂಗಳೂರು ಜಿಲ್ಲೆಗಳು, ದಕ್ಷಿಣಕ್ಕೆ ಮಂಡ್ಯ ಪಶ್ಚಿಮಕ್ಕೆ ಮತ್ತು ವಾಯುವ್ಯ ಭಾಗಕ್ಕೆ ಹಾಸನ ಮತ್ತು ಚಿತ್ರದುರ್ಗ ಜಿಲ್ಲೆಗಳಿವೆ (ಅಂಕಿ-ಅಂಶಗಳ ನೋಟ; ೨೦೦೨-೦೩).

## ೨.೧೧. ಜಿಲ್ಲೆಯ ಜನಸಂಖ್ಯೆ ಮತ್ತು ಜನಸಾಂದ್ರತೆ

೨೦೧೧ರ ಜನಗಣತಿ ಪ್ರಕಾರ ಚಿಕ್ಕನಾಯಕನಹಳ್ಳಿಯಲ್ಲಿ ೨೦೯೬೨೨ರಷ್ಟು, ಗುಬ್ಬಿ ತಾಲ್ಲೂಕುನಲ್ಲಿ ೨೫೬೪೧೩ರಷ್ಟು, ಕೊರಟಗೆರೆಯಲ್ಲಿ ೧೬೦೯೫೨ರಷ್ಟು, ಕುಣಿಗಲ್‌ನಲ್ಲಿ ೨೩೬೦೩೦ರಷ್ಟು, ಮಧುಗಿರಿಯಲ್ಲಿ ೨೬೫೮೮೪ರಷ್ಟು, ಪಾವಗಡದಲ್ಲಿ ೨೪೬೨೫೫ರಷ್ಟು, ಶಿರಾದಲ್ಲಿ ೩೦೧೪೭೩ರಷ್ಟು, ತಿಪಟೂರಿನಲ್ಲಿ ೨೧೭೧೨೪ರಷ್ಟು, ತುಮಕೂರುನಲ್ಲಿ ೫೧೬೬೬೧ರಷ್ಟು ಮತ್ತು ತುರುವೇಕೆರೆ ತಾಲ್ಲೂಕಿನಲ್ಲಿ ೧೭೪೨೯೭ರಷ್ಟು ಜನಸಂಖ್ಯೆ ಇದ್ದು, ತುಮಕೂರು ಜಿಲ್ಲೆಯ ಒಟ್ಟು ಜನಸಂಖ್ಯೆ ೨೫೮೪೭೧೧ರಷ್ಟಿದೆ. ಇದರಲ್ಲಿ ಪುರುಷರ ಸಂಖ್ಯೆ ೧೩೧೩೮೦೧ರಷ್ಟಾಗಿದ್ದು, ಮಹಿಳೆಯರ ಸಂಖ್ಯೆ ೧೨೭೦೯೧೦ರಷ್ಟಿದೆ. ಜಿಲ್ಲೆಯಲ್ಲಿ ತುಮಕೂರು ತಾಲ್ಲೂಕು ಅತಿಹೆಚ್ಚಿನ ಜನಸಂಖ್ಯೆಯನ್ನು ಹೊಂದಿದೆ. ಅಲ್ಲದೇ ಇದೆ ತಾಲ್ಲೂಕಿನಲ್ಲಿ ಅತಿಹೆಚ್ಚು ಪುರುಷರು ಮತ್ತು ಮಹಿಳೆಯರು ಇದ್ದಾರೆ. ಜಿಲ್ಲೆಯ ಜನರು ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ವಾಸವಾಗಿದ್ದಾರೆ. ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ೨೦೭೭೫೦೯ರಷ್ಟು ಜನ ಗ್ರಾಮೀಣ ಪ್ರದೇಶದಲ್ಲಿ ಮತ್ತು ೫೦೭೩೦೨ರಷ್ಟು ಜನ ನಗರ ಪ್ರದೇಶದಲ್ಲಿ ವಾಸವಾಗಿದ್ದಾರೆ. ಇಲ್ಲಿ ೪೭೪೦೪೪ರಷ್ಟು ಪರಿಶಿಷ್ಟ ಜಾತಿಯ ಜನ ಮತ್ತು ೧೯೩೮೧೯ರಷ್ಟು ಪರಿಶಿಷ್ಟ ಪಂಗಡದ ಜನ ವಾಸವಾಗಿದ್ದಾರೆ.

ಜಿಲ್ಲೆಯಲ್ಲಿ ಮಹಿಳೆಯರ ಸಂಖ್ಯೆಗಿಂತ ಪುರುಷರು ಅಧಿಕವಾಗಿರುವುದು ಕಂಡುಬರುತ್ತದೆ. ಅಲ್ಲದೇ ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ನಗರ ಪ್ರದೇಶದ ಜನಸಂಖ್ಯೆಗಿಂತ, ಗ್ರಾಮೀಣ ಪ್ರದೇಶದ ಜನಸಂಖ್ಯೆ ಅಧಿಕವಾಗಿದೆ. ಅಂದರೆ ಗ್ರಾಮೀಣ ಪ್ರದೇಶದಲ್ಲಿಯೇ ಅಧಿಕ ಜನ ವಾಸವಾಗಿರುವುದು ಇದರಿಂದ ತಿಳಿದುಬರುತ್ತದೆ. ಜಿಲ್ಲೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನರು ಇದ್ದು, ಪರಿಶಿಷ್ಟ ಪಂಗಡದವರಿಗಿಂತ ಪರಿಶಿಷ್ಟ ಜಾತಿಯ ಜನರ ಸಂಖ್ಯೆ ಅಧಿಕವಾಗಿದೆ.

ಜನಗಣತಿಯ ಪ್ರಕಾರ ಜಿಲ್ಲೆಯ ಜನಸಾಂದ್ರತೆ ಪ್ರತಿ ಚದರ ಕಿಲೋಮೀಟರ್‌ಗೆ ೨೪೪ ಇದ್ದು, ಇದು ರಾಜ್ಯದ ಜನಸಾಂದ್ರತೆಗಿಂತ ಕಡಿಮೆ ಇದೆ. ಜಿಲ್ಲೆಯಲ್ಲಿ ತಿಪಟೂರು ತಾಲ್ಲೂಕು ಅತಿಹೆಚ್ಚು ಜನಸಾಂದ್ರತೆ ಹೊಂದಿದ್ದು, ಅತಿಕಡಿಮೆ ಜನಸಾಂದ್ರತೆಯನ್ನು ಪಾವಗಡ ತಾಲ್ಲೂಕು ಹೊಂದಿದೆ. ಜಿಲ್ಲೆಯಲ್ಲಿ ಲಿಂಗಾನುಪಾತ ಪ್ರತಿ ಸಾವಿರ ಪುರುಷರಿಗೆ ೯೬೭ ಜನ ಮಹಿಳೆಯರಿದ್ದಾರೆ. ಅಂದರೆ ಜಿಲ್ಲೆಯಲ್ಲಿ ಪುರುಷರಿಗಿಂತ ಮಹಿಳೆಯರ ಪ್ರಮಾಣ ಕಡಿಮೆ ಇದೆ. ವಿಶೇಷವೆಂದರೆ ಜಿಲ್ಲೆಯಲ್ಲಿ ಎರಡು ತಾಲ್ಲೂಕಿನಲ್ಲಿ ಮಾತ್ರ ಅಂದರೆ ಕುಣಿಗಲ್ ಮತ್ತು ತುರುವೇಕೆರೆ ತಾಲ್ಲೂಕಿನಲ್ಲಿ ಮಾತ್ರ ಲಿಂಗಾನುಪಾತ ಅಧಿಕವಾಗಿದೆ. ಅಂದರೆ ಇಲ್ಲಿ ಪ್ರತಿ ಸಾವಿರ ಪುರುಷರಿಗೆ ೧೦೨೪ ಮತ್ತು ೧೦೦೧ ಮಹಿಳೆಯರಿದ್ದಾರೆ. ಹೀಗೆ ಎರಡು ತಾಲ್ಲೂಕನ್ನು ಹೊರತುಪಡಿಸಿದರೆ ಜಿಲ್ಲೆಯ ಉಳಿದೆಲ್ಲಾ ತಾಲ್ಲೂಕಿನಲ್ಲಿ ಪುರುಷರಿಗಿಂತ ಮಹಿಳೆಯರ ಪ್ರಮಾಣ ಕಡಿಮೆಯಿರುವುದು ಕಂಡುಬರುತ್ತದೆ. ಜಿಲ್ಲೆಯಲ್ಲಿ ಅತ್ಯಂತ ಕಡಿಮೆ ಲಿಂಗಾನುಪಾತ ಹೊಂದಿರುವ ತಾಲ್ಲೂಕೆಂದರೆ ತುಮಕೂರು.

ಕೋಷ್ಟಕ-೨.೫

## ತುಮಕೂರು ಜಿಲ್ಲೆಯ ಜನಸಂಖ್ಯೆ ಮತ್ತು ಜನಸಾಂದ್ರತೆ

| ಕ್ರ.ಸಂ | ತಾಲ್ಲೂಕು | ಒಟ್ಟು | ಜನಸಂಖ್ಯೆ | | | | ಜನಸಾಂದ್ರತೆ (ಪ್ರತಿ ಚ.ಕಿ.) | ಲಿಂಗಾನುಪಾತ |
|---|---|---|---|---|---|---|---|---|
| | | | ಪುರುಷರು | ಮಹಿಳೆಯರು | ಗ್ರಾಮೀಣ | ನಗರ | | |
| ೧. | ಚಿಕ್ಕನಾಯಕನಹಳ್ಳಿ | ೨೦೯೬೨೨ | ೧೦೫೫೫೯ | ೧೦೪೦೬೩ | ೧೮೭೨೩೩ | ೨೨೩೮೯ | ೧೮೮ | ೯೮೬ |
| ೨. | ಗುಬ್ಬಿ | ೨೫೬೪೧೩ | ೧೨೯೬೮೨ | • ೧೨೬೭೩೧ | ೨೩೯೬೦೮ | ೧೬೦೮೦೫ | ೨೧೦ | ೯೭೭ |
| ೩. | ಕೊರಟಗೆರೆ | ೧೬೦೯೫೨ | ೮೧೮೬೨ | ೭೯೦೯೦ | ೧೪೭೨೯೭ | ೧೩೦೬೫೫ | ೨೫೦ | ೯೬೬ |
| ೪. | ಕುಣಿಗಲ್ | ೨೩೬೦೩೦ | ೧೧೬೬೧೬ | ೧೧೯೪೧೪ | ೨೦೫೬೮೭ | ೩೦೩೪೦೩ | ೨೪೦ | ೧೦೨೪ |
| ೫. | ಮಧುಗಿರಿ | ೨೬೫೮೮೪ | ೧೩೫೩೨೦ | ೧೩೦೫೬೪ | ೨೩೯೫೮೦ | ೨೬೩೦೪ | ೨೩೬ | ೯೬೫ |
| ೬. | ಪಾವಗಡ | ೨೪೬೨೫೫ | ೧೨೫೭೯೮ | ೧೨೦೪೫೭ | ೨೧೮೧೮೭ | ೨೮೦೬೮ | ೧೮೧ | ೯೫೮ |
| ೭. | ಶಿರಾ | ೩೦೧೪೭೩ | ೧೫೩೭೩೩ | ೧೪೭೭೪೦ | ೨೫೧೩೮೫ | ೫೦೦೮೮ | ೧೯೩ | ೯೬೧ |
| ೮. | ತಿಪಟೂರು | ೨೧೭೧೨೪ | ೧೦೯೭೯೯ | ೧೦೭೩೨೫ | ೧೬೪೦೨೦ | ೫೩೧೦೪ | ೨೭೦ | ೯೭೭ |
| ೯. | ತುಮಕೂರು | ೫೧೬೬೬೧ | ೨೬೮೩೪೧ | ೨೪೮೩೨೦ | ೨೬೭೭೩೨ | ೨೪೮೯೨೯ | ೫೧೦ | ೯೨೫ |
| ೧೦. | ತುರುವೇಕೆರೆ | ೧೭೪೯೨೭ | ೮೭೦೯೧ | ೮೭೨೦೬ | ೧೫೬೭೮೦ | ೧೭೫೧೭ | ೨೨೭ | ೧೦೦೧ |
| | ಜಿಲ್ಲೆಯ ಮೊತ್ತ | ೨೫೮೪೭೧೧ | ೧೩೧೩೮೦೧ | ೧೨೭೦೯೧೦ | ೨೦೭೭೫೦೯ | ೫೦೭೨೦೨ | ೨೪೪ | ೯೬೭ |

ಮೂಲ: ಸೆನ್ಸಸ್ ಆಫ್ ಇಂಡಿಯಾ, ೨೦೦೧, ಡಿಸ್ಟ್ರಿಕ್ಟ್ ಪಾಪ್ಯುಲೇಶನ್ ಬುಕ್‌ಲೆಟ್, ತುಮಕೂರು.

೨.೧೨. ಜಿಲ್ಲೆಯ ಶೈಕ್ಷಣಿಕ ವ್ಯವಸ್ಥೆ

ತುಮಕೂರು ಶಿಕ್ಷಣ ಸಂಸ್ಥೆಯ ತವರೂರು. ಇದು ಶೈಕ್ಷಣಿಕ ಕ್ಷೇತ್ರದಲ್ಲಿ ತನ್ನದೇ ಆದ ಪ್ರಗತಿ ಮತ್ತು ಪರಂಪರೆಯನ್ನು ಹೊಂದಿದೆ. ನಾಗರಿಕತೆಯ ಗೌಜು ಗದ್ದಲಗಳ ನಡುವೆ, ನಗರಗಳಲ್ಲಿ ಕಳೆದು ಹೋಗುತ್ತಿರುವ ಶಿಕ್ಷಣ ಹಾಗೂ ಅದರ ಮೌಲ್ಯಗಳನ್ನು ತುಮಕೂರು ಎಂದೂ ಕಳೆದು ಕೊಂಡಿಲ್ಲ ಎಂದು ಹೇಳಬಹುದು. ಜಿಲ್ಲೆಯಲ್ಲಿ ಎಂಪ್ರೆಸ್ ಗರ್ಲ್ಸ್ ಸ್ಕೂಲ್ ಪ್ರಥಮ ಶಾಲೆಯಾಗಿದ್ದು ೧೯೨೨-೨೩ರ ಅವಧಿಯಲ್ಲಿ ಪ್ರೌಢಶಾಲಾ ಮಟ್ಟಕ್ಕೆ ಈ ಶಾಲೆಯನ್ನು ಉನ್ನತ ಸ್ಥಾನಕ್ಕೇರಿಸಲಾಯಿತು (ಮೈಸೂರು ಸ್ಟೇಟ್ ಗ್ಯಾಜಿಟಿಯರ್, ೧೯೬೯). ಆರಂಭ ಕಾಲದಿಂದಲೂ ಖಾಸಗಿ ಶಿಕ್ಷಣ ಸಂಸ್ಥೆಗಳು ಶಿಕ್ಷಣ ಕ್ಷೇತ್ರಕ್ಕೆ ಸಹಾಯವನ್ನು ನೀಡುತ್ತಾ ಬಂದವು. ಶಿಕ್ಷಣ ಪ್ರಗತಿಯಾಗಲು ಮುಖ್ಯಕಾರಣ ತುಮಕೂರು ಜಿಲ್ಲೆಯಲ್ಲಿ ವಿದ್ಯುಕ್ತವಾಗಿ ಶಾಲೆಯನ್ನು ಪ್ರಾರಂಭಿಸಿದವರೆಂದರೇ ಚಿಕ್ಕನಾಯಕನಹಳ್ಳಿಯ ಜಿ.ವಿ. ನಾರಾಯಣ ಮೂರ್ತಿಯವರು. ಇವರು ೧೯೪೩ರಲ್ಲಿ 'ದೇಶಿಯ ವಿದ್ಯಾಪೀಠ' ಶಿಕ್ಷಣ ಸಂಸ್ಥೆ ಯನ್ನು ಸ್ಥಾಪಿಸಿದರು. ಇದು ತುಮಕೂರು ಜಿಲ್ಲೆಯ ಪ್ರಥಮ ಖಾಸಗಿ ಪ್ರೌಢಶಾಲೆ (ಜಯಮಂಗಲಿ, ೨೦೦೨).

ತುಮಕೂರಿನಲ್ಲಿ ಒಂದೇ ಸರ್ಕಾರಿ ಪ್ರಾಢಶಾಲೆ ೧೯೪೩ರವರೆಗೆ ಇತ್ತು. ಮಕ್ಕಳ ಸಂಖ್ಯೆ ಅಧಿಕ ವಾಗಿ ಈ ಪ್ರೌಢಶಾಲೆಯಲ್ಲಿ ಶಿಕ್ಷಣ ಪಡೆಯಲು ಕಷ್ಟವಾಗಿತ್ತು. ಈ ಪರಿಸ್ಥಿತಿಯನ್ನು ಶಿವಕುಮಾರ ಸ್ವಾಮಿಯವರು ೧೯೪೪ರಲ್ಲಿ ಶ್ರೀ ಸಿದ್ಧಗಂಗ ಪ್ರೌಢಶಾಲೆಯನ್ನು ಸ್ಥಾಪಿಸಿದರು. ಗುರುಮಠ ಪರಂಪರೆಯ ಶಿಕ್ಷಣವೇ ನಮ್ಮ ಭಾರತೀಯ ಶಿಕ್ಷಣ ಪದ್ಧತಿಯ ಮೂಲ. ಈ ಹಿನ್ನೆಲೆಯಲ್ಲಿ ತುಮಕೂರು ಜಿಲ್ಲೆಯೂ ತನ್ನ ಇತಿಹಾಸವನ್ನು ಕಾಯ್ದುಕೊಂಡಿದೆ. ಈ ಹಿನ್ನಲೆಯಲ್ಲಿ ಸಿದ್ಧಗಂಗಾ ಮಠವು ಶೈಕ್ಷಣಿಕ ಕ್ಷೇತ್ರದಲ್ಲಿ ಸಾಕಷ್ಟು ಹೆಸರು ಮಾಡಿದೆ. ಇದು ಅನ್ನದಾಸೋಹ, ಜ್ಞಾನ ದಾಸೋಹ, ವಿದ್ಯಾ ದಾಸೋಹಕ್ಕೆ ಹೆಸರುವಾಸಿಯಾಗಿದೆ. ೧೯೧೭ರಲ್ಲಿ ಸಿದ್ಧಗಂಗಾ ಮಠದಲ್ಲಿ ಉದ್ಧಾನ ಶಿವಯೋಗಿಗಳು ವೇದ, ಸಂಸ್ಕೃತ ಪಾಠಶಾಲೆಯನ್ನು ಪ್ರಾರಂಭಿಸಿದರು. ಎಲ್ಲಾ ಜನಾಂಗದ ವಿದ್ಯಾರ್ಥಿಗಳಿಗೂ ಉಚಿತ ಊಟ, ವಸತಿ ಸೌಲಭ್ಯಗಳನ್ನು ಕಲ್ಪಿಸಿ, ಜ್ಞಾನ ದಾಸೋಹ ಕಾಯಕದಲ್ಲಿ ತೊಡಗಿದ ಹಿರಿಮೆ ಈ ನಾಡಿನದು. ಸುಮಾರು ೩೦೦ ವಿದ್ಯಾರ್ಥಿಗಳಿಂದ ಆರಂಭವಾದ ಈ ಗುರುಕುಲ ಇಂದು ಹತ್ತು ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿಗಳಿಗೆ ತ್ರಿವಿಧ ದಾಸೋಹ ನಡೆಸುತ್ತಿದೆ.

ತುಮಕೂರು ಜಿಲ್ಲೆಯ ಒಟ್ಟು ಸಾಕ್ಷರತೆ ಶೇಕಡ ೬೭.೦ರಷ್ಟಿದೆ. ಪುರುಷರ ಒಟ್ಟು ಸಾಕ್ಷರತೆ ಶೇಕಡ ೭೬.೮ರಷ್ಟು ಇದ್ದರೆ, ಮಹಿಳೆಯರ ಒಟ್ಟು ಸಾಕ್ಷರತೆ ಶೇಕಡ ೫೭.೯ರಷ್ಟಿದೆ. ಇಲ್ಲಿ ಪುರುಷರ ಮತ್ತು ಮಹಿಳೆಯರ ನಡುವಿನ ಸಾಕ್ಷರತೆಯಲ್ಲಿ ಲಿಂಗತಾರತಮ್ಯ ಶೇಕಡ ೧೯.೯೦ ಅಂಶಗಳಷ್ಟಿದೆ. ತುಮಕೂರು ಜಿಲ್ಲೆಯ ಗ್ರಾಮೀಣ ಪ್ರದೇಶದ ಒಟ್ಟು ಸಾಕ್ಷರತೆ ಶೇಕಡ ೬೩.೪ರಷ್ಟಿದ್ದರೆ, ಮಹಿಳೆಯರ ಸಾಕ್ಷರತೆ ಪ್ರಮಾಣ ಶೇಕಡ ೫೨.೩ರಷ್ಟಿದೆ. ಹಾಗೆಯೇ ಪುರುಷರ ಸಾಕ್ಷರತೆ ಶೇಕಡ

೭೪.೨ರಷ್ಟಿದೆ. ಜಿಲ್ಲೆಯ ಪರಿಶಿಷ್ಟ ಜಾತಿಯ ಸಾಕ್ಷರತೆಯ ಪ್ರಮಾಣವನ್ನು ನೋಡುವುದಾದರೆ ಒಟ್ಟು ಶೇಕಡ ೫೪.೩ರಷ್ಟಿದೆ. ಇದರಲ್ಲಿ ಮಹಿಳೆಯರ ಸಾಕ್ಷರತೆ ಪ್ರಮಾಣ ಶೇಕಡ ೪೩.೪ರಷ್ಟು ಇದ್ದರೆ, ಪುರುಷರ ಸಾಕ್ಷರತೆ ಶೇಕಡ ೬೪.೯ರಷ್ಟಿದೆ. ಪರಿಶಿಷ್ಟ ಪಂಗಡದ ಒಟ್ಟು ಸಾಕ್ಷರತೆ ಪ್ರಮಾಣ ಶೇಕಡ ೫೯.೭ರಷ್ಟಿದೆ. ಇದರಲ್ಲಿ ಮಹಿಳೆಯರ ಸಾಕ್ಷರತೆ ಪ್ರಮಾಣ ೭೦.೩ರಷ್ಟಿದೆ. ಪರಿಶಿಷ್ಟ ಪಂಗಡಗಿಂತ ಪರಿಶಿಷ್ಟ ಜಾತಿಯ ಸಾಕ್ಷರತೆ ಪ್ರಮಾಣ ಕಡಿಮೆ ಇದೆ ಎಂದು ಹೇಳಬಹುದು. ಈ ವಿವರವನ್ನು ಕೆಳಗಿನ ವಿವರಿಸಲಾಗಿದೆ.

**ಕೋಷ್ಟಕ-೨.೬**

## ತುಮಕೂರು ಜಿಲ್ಲೆಯ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಸಾಕ್ಷರತೆ ಪ್ರಮಾಣ (೨೦೦೧)

| ಕ್ರ.ಸಂ. | ಜಿಲ್ಲೆ | ಪ್ರದೇಶ | ಸಾಕ್ಷರತಾ ಪ್ರಮಾಣ | | |
|---|---|---|---|---|---|
| | | | ಗಂಡಸರು | ಹೆಂಗಸರು | ಒಟ್ಟು |
| ೧. | ತುಮಕೂರು | ಒಟ್ಟು | ೭೬.೮ | ೫೬.೯ | ೬೭.೦ |
| | | ಗ್ರಾಮೀಣ | ೭೪.೨ | ೫೨.೩ | ೬೩.೪ |
| | | ನಗರ | ೮೬.೯ | ೭೬.೩ | ೮೧.೮ |
| ೨. | ಪರಿಶಿಷ್ಟ ಜಾತಿ | ಒಟ್ಟು | ೬೪.೯ | ೪೩.೪ | ೫೪.೩ |
| | | ಗ್ರಾಮೀಣ | ೬೨.೯ | ೪೦.೭ | ೫೨.೦ |
| | | ನಗರ | ೭೭.೭ | ೬೧.೨ | ೬೯.೭ |
| ೩. | ಪರಿಶಿಷ್ಟ ಪಂಗಡ | ಒಟ್ಟು | ೭೦.೩ | ೪೮.೭ | ೫೯.೭ |
| | | ಗ್ರಾಮೀಣ | ೬೮.೬ | ೪೬.೪ | ೫೭.೭ |
| | | ನಗರ | ೮೧.೮ | ೬೫.೫ | ೭೩.೯ |

ಮೂಲ : ತುಮಕೂರು ಡಿಸ್ಟ್ರಿಕ್ಟ್ ಪಾಪ್ಯುಲೇಶನ್ ಬುಕ್‌ಲೆಟ್, ಸೆನ್ಸಸ್ ಆಫ್ ಇಂಡಿಯಾ, ೨೦೦೧
ಅಭಿವೃದ್ಧಿ ಅಧ್ಯಯನ ಪತ್ರಿಕೆ, ಸಂಪುಟ ೩, ಸಂಚಿಕೆ ೨, ೨೦೦೫

ಕೋಷ್ಟಕ-೨.೭

## ತುಮಕೂರು ಜಿಲ್ಲೆಯ ತಾಲ್ಲೂಕುಗಳ ಗ್ರಾಮೀಣ/ನಗರ ಪ್ರಾದೇಶವಾರು ಸಾಕ್ಷರತೆ ಪ್ರಮಾಣ (೨೦೦೧)

| ಕ್ರ.ಸಂ | ತಾಲ್ಲೂಕು | ಸಾಕ್ಷರತಾ ಪ್ರಮಾಣ | | |
|---|---|---|---|---|
| | | ಗಂಡಸರು | ಹೆಂಗಸರು | ಒಟ್ಟು |
| ೧. | ಚಿಕ್ಕನಾಯ್ಕನಹಳ್ಳಿ | ೭೯.೫ | ೬೦.೮ | ೭೦.೨ |
| | ಗ್ರಾಮೀಣ | ೭೮.೬ | ೫೯.೬ | ೬೯.೦ |
| | ನಗರ | ೮೭.೫ | ೭೩.೦ | ೮೦.೩ |
| ೨. | ಸಿರಾ | ೭೩.೧ | ೫೧.೪ | ೬೨.೪ |
| | ಗ್ರಾಮೀಣ | ೭೧.೩ | ೪೭.೮ | ೫೯.೭ |
| | ನಗರ | ೮೨.೦ | ೭೦.೩ | ೭೬.೩ |
| ೩. | ಪಾವಗಡ | ೬೮.೬ | ೪೪.೦ | ೫೬.೫ |
| | ಗ್ರಾಮೀಣ | ೬೬.೭ | ೪೧.೦ | ೫೪.೧ |
| | ನಗರ | ೮೩.೨ | ೬೭.೦ | ೭೫.೩ |
| ೪. | ಮಧುಗಿರಿ | ೭೨.೭ | ೪೯.೪ | ೬೧.೨ |
| | ಗ್ರಾಮೀಣ | ೭೧.೨ | ೪೬.೭ | ೫೯.೨ |
| | ನಗರ | ೮೫.೭ | ೭೩.೪ | ೭೯.೭ |
| ೫. | ಕೊರಟಗೆರೆ | ೭೩.೩ | ೫೧.೮ | ೬೨.೭ |
| | ಗ್ರಾಮೀಣ | ೭೨.೧ | ೪೯.೯ | ೬೧.೨ |
| | ನಗರ | ೮೬.೫ | ೭೨.೧ | ೭೯.೪ |
| ೬. | ತುಮಕೂರು | ೮೨.೩ | ೬೭.೧ | ೭೫.೦ |
| | ಗ್ರಾಮೀಣ | ೭೬.೮ | ೫೫.೮ | ೬೬.೭ |
| | ನಗರ | ೮೮.೧ | ೭೯.೧ | ೮೩.೮ |
| ೭. | ಗುಬ್ಬಿ | ೭೬.೭ | ೫೮.೨ | ೬೭.೫ |
| | ಗ್ರಾಮೀಣ | ೭೫.೮ | ೫೬.೭ | ೬೬.೪ |
| | ನಗರ | ೮೯.೨ | ೭೯.೪ | ೮೪.೪ |
| ೮. | ತಿಪಟೂರು | ೮೩.೭ | ೬೬.೨ | ೭೫.೦ |
| | ಗ್ರಾಮೀಣ | ೮೨.೪ | ೬೨.೫ | ೭೨.೫ |
| | ನಗರ | ೮೭.೮ | ೭೭.೭ | ೮೨.೯ |

| | | | | |
|---|---|---|---|---|
| ೯. | ತುರುವೇಕೆರೆ | ೮೧.೭ | ೬೧.೧ | ೭೧.೪ |
| | ಗ್ರಾಮೀಣ | ೮೦.೬ | ೫೯.೧ | ೬೯.೮ |
| | ನಗರ | ೯೦.೭ | ೮೦.೧ | ೮೫.೬ |
| ೧೦. | ಕುಣಿಗಲ್ | ೭೨.೦ | ೫೧.೦ | ೬೧.೩ |
| | ಗ್ರಾಮೀಣ | ೭೦.೧ | ೪೮.೦ | ೫೮.೮ |
| | ನಗರ | ೮೪.೩ | ೭೨.೫ | ೭೮.೬ |

ಮೂಲ : ತುಮಕೂರು ಡಿಸ್ಟ್ರಿಕ್ಟ್ ಪಾಪ್ಯುಲೇಶನ್ ಬುಕ್‌ಲೆಟ್, ಸೆನ್ಸಸ್ ಆಫ್ ಇಂಡಿಯಾ, ೨೦೦೧
ತುಮಕೂರು ಜಿಲ್ಲೆಯ ಅಂಕಿ-ಅಂಶಗಳ ನೋಟ, ೨೦೦೩-೦೪.

### ೨.೧೩. ಜಿಲ್ಲೆಯ ಆರ್ಥಿಕತೆ

ಜಿಲ್ಲೆಯು ಉತ್ತಮ ಹವಾಗುಣ ಮತ್ತು ಪರಿಸರವನ್ನು ಹೊಂದಿದ್ದು ಆರ್ಥಿಕವಾಗಿ ಅಭಿವೃದ್ಧಿಯತ್ತ ಸಾಗುತ್ತಿದೆ ಎಂದು ಹೇಳಬಹುದು. ಜಿಲ್ಲೆಯಲ್ಲಿ ನಗರ ಪ್ರದೇಶಕ್ಕಿಂತ ಹೆಚ್ಚಿನ ಜನರು ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಿದ್ದಾರೆ. ಇವರಿಗೆ ಕೃಷಿಯೇ ಪ್ರಮುಖ ವೃತ್ತಿಯಾಗಿದೆ. ಸುಮಾರು ಜನರು ಸರ್ಕಾರಿ ಮತ್ತು ಖಾಸಗಿ ಉದ್ಯೋಗವನ್ನು ಪಡೆದುಕೊಂಡಿದ್ದಾರೆ. ರಾಜಧಾನಿ ಬೆಂಗಳೂರು ಈ ಜಿಲ್ಲೆಗೆ ಹತ್ತಿರವಿರುವುದರಿಂದ ಕೈಗಾರಿಕೆಗಳು, ಎಚ್.ಎಂ.ಟಿ. ಕಾರ್ಖಾನೆಗಳು, ಬಹುರಾಷ್ಟ್ರೀಯ ಕಂಪನಿಗಳು ಪ್ರಾರಂಭಗೊಂಡಿದ್ದರಿಂದ ಅನೇಕ ಜನರಿಗೆ ಉದ್ಯೋಗಾವಕಾಶಗಳು ಲಭಿಸಿ ಆರ್ಥಿಕವಾಗಿ ಜನರು ಸಬಲರಾಗುತ್ತಿದ್ದಾರೆ.

### ೨.೧೪. ಜಿಲ್ಲೆಯ ಆದಾಯ

೧೯೯೯-೨೦೦೦ನೇ ಸಾಲಿನಲ್ಲಿ ತಾತ್ಕಾಲಿಕ ಚಾಲ್ತಿ ಬೆಲೆಗಳಲ್ಲಿ ಜಿಲ್ಲೆಯ ಒಟ್ಟು ಆದಾಯ ೩೫೧೮೪೫ ಲಕ್ಷ ರೂ.ಗಳಾಗಿದ್ದು ತಲಾ ವರಮಾನ ೧೩೮೮೧ ರೂ.ಗಳಾಗಿದ್ದಿತು. ೧೯೯೯-೨೦೦೦ನೇ ಸಾಲಿನಲ್ಲಿ ರಾಜ್ಯದ ಒಟ್ಟು ನಿವ್ವಳ ಆದಾಯವು ಚಾಲ್ತಿ ಬೆಲೆಗಳಲ್ಲಿ ೮೬೭೯೬೩೦ ಲಕ್ಷ ರೂ.ಗಳಲ್ಲಿ ಜಿಲ್ಲೆಯ ನಿವ್ವಳ ಆದಾಯ ಚಾಲ್ತಿ ಬೆಲೆಗಳಲ್ಲಿ ೩೧೫೯೬ ಲಕ್ಷ ರೂ.ಗಳಾಗಿದೆ. ರಾಜ್ಯದ ವಿವಿಧ ಜಿಲ್ಲೆಗಳ ಆದಾಯಕ್ಕೆ ಹೋಲಿಸಿದಾಗ ಜಿಲ್ಲೆಯು ೬ನೇ ಸ್ಥಾನದಲ್ಲಿರುತ್ತದೆ (ತುಮಕೂರು ಜಿಲ್ಲೆಯ ಅಂಕಿ-ಅಂಶಗಳ ನೋಟ; ೨೦೦೨-೦೩).

### ೨.೧೫. ಜಿಲ್ಲೆಯ ಪ್ರಾಕೃತಿಕ ಸಂಪನ್ಮೂಲಗಳು ಮತ್ತು ಹವಾಮಾನ

ಯಾವುದೇ ಕ್ಷೇತ್ರದಲ್ಲಿನ ಸಾಮಾಜಿಕ, ಆರ್ಥಿಕ ಅಭಿವೃದ್ಧಿಯನ್ನು ಅರ್ಥಮಾಡಿಕೊಳ್ಳಲು ಪ್ರಕೃತಿದತ್ತವಾಗಿ ಆ ಪ್ರದೇಶಕ್ಕೆ ಒದಗಿರುವ ನೈಸರ್ಗಿಕ ಸಂಪನ್ಮೂಲಗಳು ತಮ್ಮದೇ ಆದ ಪಾತ್ರವನ್ನು ನಿರ್ವಹಿಸುತ್ತಿವೆ. ನೈಸರ್ಗಿಕ ಸಸ್ಯ ಸಂಪತ್ತುಗಳಾದ ಅಪಾರ ಸಸ್ಯರಾಶಿ ಮತ್ತು ನದಿ ನೀರಿನಂತಹ ನೈಸರ್ಗಿಕ ಸಂಪನ್ಮೂಲಗಳು ಈ ಜಿಲ್ಲೆಯಲ್ಲಿ ಬಹುಮಟ್ಟಿಗೆ ಕಡಿಮೆಯೇ ಎಂದು

ಹೇಳಬಹುದು. ಏಕೆಂದರೆ ಇದೊಂದು ಸಾಧಾರಣವಾಗಿ ಒಣ ಭೂಪ್ರದೇಶವಾಗಿದೆ. ಸಸ್ಯ ಸಂಪತ್ತಿನಲ್ಲಿ ಹೆಚ್ಚಿನವು ಮಾನವ ನಿರ್ಮಿತ ಸಸ್ಯಗಳಾಗಿದ್ದು, ರಕ್ಷಿತ ಅರಣ್ಯ ಪ್ರದೇಶಗಳಲ್ಲಿ ಬೆಟ್ಟಗುಡ್ಡಗಳ ತೆಳುವಾದ ನೈಸರ್ಗಿಕ ಸಸ್ಯ ಸಂಪತ್ತಿನಿಂದ ಕೂಡಿದ ಪ್ರದೇಶಗಳಿವೆ ಎನ್ನಬಹುದು.

ಜಿಲ್ಲೆಯ ಭೂಪ್ರದೇಶವು ಸಮುದ್ರಮಟ್ಟದಿಂದ ಸುಮಾರು ೮೧೮.೫೧ ಮೀಟರ್ ಎತ್ತರದಲ್ಲಿದೆ. ಆದ್ದರಿಂದ ಸಮತೋಲನವಾದ ಹವಾಗುಣ ಹೊಂದಿದ್ದು, ಒಣಹವೆಯಿಂದ ಕೂಡಿರುತ್ತದೆ. ನೈರುತ್ಯ ಮಾರುತಗಳಿಂದ ಜೂನ್ ತಿಂಗಳಿನಲ್ಲಿ ಪ್ರಾರಂಭವಾಗಿ, ಸೆಪ್ಟೆಂಬರ್ ತಿಂಗಳಿನವರೆಗೂ, ಈಶಾನ್ಯ ಮಾರುತಗಳಿಂದ ಅಕ್ಟೋಬರ್ ತಿಂಗಳಿನಿಂದ ನವೆಂಬರ್ ಕೊನೆಯವರೆಗೂ ಮಳೆ ಬೀಳುತ್ತದೆ. ಡಿಸೆಂಬರ್ ತಿಂಗಳಿನಲ್ಲಿ ಚಳಿಗಾಲ ಪ್ರಾರಂಭವಾಗಿ ಫೆಬ್ರವರಿ ತಿಂಗಳ ಅಂತ್ಯದವರೆಗೂ ಇರುತ್ತದೆ. ಬೇಸಿಗೆಯೂ ಮಾರ್ಚ್ ತಿಂಗಳಿನಿಂದ ಪ್ರಾರಂಭವಾಗಿ ಮೇ ತಿಂಗಳ ಕೊನೆಯವರೆಗೂ ಇರುತ್ತದೆ (ತುಮಕೂರು ಜಿಲ್ಲೆಯ ಅಂಕಿ-ಅಂಶಗಳ ನೋಟ; ೨೦೦೩-೦೪).

**೨.೧೬. ಜಿಲ್ಲೆಯ ಆಡಳಿತ ವ್ಯವಸ್ಥೆ**

ಜಿಲ್ಲೆಯನ್ನು ಆಡಳಿತದ ದೃಷ್ಟಿಯಿಂದ ಮೂರು ಉಪವಿಭಾಗಗಳನ್ನಾಗಿ ವಿಂಗಡಿಸಲಾಗಿದೆ. ತುಮಕೂರು ಉಪವಿಭಾಗದಲ್ಲಿ ತುಮಕೂರು, ಗುಬ್ಬಿ, ಕುಣಿಗಲ್ ತಾಲ್ಲೂಕುಗಳು. ತಿಪಟೂರು ಉಪವಿಭಾಗದಲ್ಲಿ ತಿಪಟೂರು, ಚಿಕ್ಕನಾಯ್ಕನಹಳ್ಳಿ, ತುರುವೇಕೆರೆ ತಾಲ್ಲೂಕುಗಳು ಹಾಗೂ ಮಧುಗಿರಿ ಉಪವಿಭಾಗದಲ್ಲಿ ಮಧುಗಿರಿ, ಕೊರಟಗೆರೆ, ಪಾವಗಡ ಮತ್ತು ಶಿರಾ ತಾಲ್ಲೂಕುಗಳಿವೆ.

**ಪ್ರಮುಖವಾದ ಬೆಳೆಗಳು :** ಜಿಲ್ಲೆಯಲ್ಲಿ ಪ್ರಮುಖವಾಗಿ ಭತ್ತ, ರಾಗಿ, ನೆಲಗಡಲೆ, ಹುರುಳಿ, ತೊಗರಿ, ರೇಷ್ಮೆ ಬೆಳೆಗಳನ್ನು ಬೆಳೆಯುತ್ತಿದ್ದು, ಜೊತೆಯಲ್ಲಿ ಅಲಸಂದೆ, ಹುಚ್ಚೆಳ್ಳು, ಹೆಸರುಕಾಳು, ಉದ್ದು, ಅವರೆ, ಮುಸುಕಿನ ಜೋಳ ಬೆಳೆಗಳನ್ನು ಬೆಳೆಯಲಾಗುತ್ತಿದೆ. ಪಾವಗಡ, ಶಿರಾ, ಕೊರಟಗೆರೆ ಮತ್ತು ಮಧುಗಿರಿ ತಾಲ್ಲೂಕುಗಳಲ್ಲಿ ನೆಲಗಡಲೆ ಬೆಳೆಯನ್ನು ಪ್ರಮುಖವಾಗಿ ಬೆಳೆಯುತ್ತಾರೆ. ತುಮಕೂರು, ಕುಣಿಗಲ್ ಮತ್ತು ಗುಬ್ಬಿ ತಾಲ್ಲೂಕುಗಳಲ್ಲಿ ಭತ್ತ, ರಾಗಿ, ಬೆಳೆಗಳನ್ನು ಪ್ರಮುಖವಾಗಿ ಬೆಳೆಯಲಾಗುತ್ತಿದೆ. ತಿಪಟೂರು, ಚಿಕ್ಕನಾಯ್ಕನಹಳ್ಳಿ ತಾಲ್ಲೂಕುಗಳಲ್ಲಿ ಮುಖ್ಯವಾಗಿ ತೆಂಗನ್ನು ವಾಣಿಜ್ಯ ಬೆಳೆಯನ್ನಾಗಿ ಬೆಳೆಯಲಾಗುತ್ತಿದೆ. ಇನ್ನುಳಿದ ತಾಲ್ಲೂಕುಗಳಲ್ಲಿ ರಾಗಿ ಮತ್ತು ಇತರೆ ಬೆಳೆಗಳನ್ನು ಬೆಳೆಯಲಾಗುತ್ತದೆ.

ಜಿಲ್ಲೆಯಲ್ಲಿ ಮಧುಗಿರಿ, ಕೊರಟಗೆರೆ, ತುಮಕೂರು ಮತ್ತು ಕುಣಿಗಲ್ ತಾಲ್ಲೂಕಿನ ಸ್ವಲ್ಪ ಭಾಗಗಳಲ್ಲಿ ಕೆಂಪು ಜೇಡಿಮಣ್ಣು ಕಂಡು ಬಂದರೆ, ಉಳಿದೆಲ್ಲೆಡೆ (ಚಿಕ್ಕನಾಯಕನಹಳ್ಳಿಯ ವಾಯುವ್ಯ ಭಾಗವನ್ನು ಬಿಟ್ಟು) ಕೆಂಪು ಮರಳು ಮಿಶ್ರಿತ ಮಣ್ಣು ಕಂಡುಬರುತ್ತದೆ. ಚಿಕ್ಕನಾಯಕನಹಳ್ಳಿಯ ವಾಯುವ್ಯ ಭಾಗದಲ್ಲಿ ಮಿಶ್ರ ಕೆಂಪು ಮತ್ತು ಕಪ್ಪು ಮಣ್ಣನ್ನು ಕಾಣಬಹುದು (ತುಮಕೂರು ಜಿಲ್ಲೆ ಅಂಕಿ-ಅಂಶಗಳ ನೋಟ; ೨೦೦೨-೦೩).

**ಖನಿಜ ಸಂಪತ್ತು :** ಖನಿಜ ಸಂಪತ್ತಿನಲ್ಲಿ ತುಮಕೂರು ಜಿಲ್ಲೆಯು ರಾಜ್ಯದಲ್ಲಿ ಪರಿಗಣಿಸಬಹುದಾದಷ್ಟು ಖನಿಜ ಸಂಪತ್ತನ್ನು ಹೊಂದಿದೆ. ಜಿಲ್ಲೆಯಲ್ಲಿ ಲಭಿಸುವಂತಹ ಮುಖ್ಯ ಖಜನಿಗಳೆಂದರೆ ಮ್ಯಾಂಗನೀಸ್, ಸುಣ್ಣದಕಲ್ಲು, ಕಬ್ಬಿಣದ ಅದಿರು, ಬೆಣಚುಕಲ್ಲು, ಕೋರಂಡಮ್, ಸಿಲ್ವರ್ ಸ್ಯಾಂಡ್, ಡಾಲಮೈಟ್, ಜೇಡಿಮಣ್ಣು, ಗ್ರಾನೈಟ್, ಸೋಪ್‌ಸ್ಟೋನ್ ಮತ್ತು ಗ್ರಾನೈಟ್ ಇನ್ನು ಮುಂತಾದವು (ಸಿ.ಎಂ. ಲಕ್ಷ್ಮಣ; ೨೦೦೬; ಪುಟ. ೬).

**ಕೊರಟಗೆರೆ ತಾಲ್ಲೂಕು**

ತುಮಕೂರು ಜಿಲ್ಲೆಯಲ್ಲಿ ಕೊರಟಗೆರೆ ತಾಲ್ಲೂಕು ತನ್ನದೇ ಆದ ಮಹತ್ವವನ್ನು ಹೊಂದಿ, ಅತಿಕಡಿಮೆ ಎಂದರೆ ೬೪೩ ವಿಸ್ತೀರ್ಣವನ್ನು ಹೊಂದಿದೆ. ೨೦೦೧ರ ಜನಗಣತಿ ಪ್ರಕಾರ ಒಟ್ಟು ಜನಸಂಖ್ಯೆ ೧೬೯೫೨ರಷ್ಟು ಹೊಂದಿದ್ದು, ಇದರಲ್ಲಿ ಪುರುಷರು ೮೧೮೬೨ರಷ್ಟು ಮತ್ತು ಮಹಿಳೆಯರು ೭೯೯೦ರಷ್ಟಿದ್ದಾರೆ. ಜಿಲ್ಲೆಯಲ್ಲಿ ಅತ್ಯಂತ ಕಡಿಮೆ ಜನಸಂಖ್ಯೆ ಹೊಂದಿದ್ದ ತಾಲ್ಲೂಕು ಇದಾಗಿದೆ. ತಾಲ್ಲೂಕಿನ ಸಾಕ್ಷರತೆ ಪ್ರಮಾಣವನ್ನು ನೋಡಿದಾಗ ಶೇಕಡ ೬೨.೦೭ರಷ್ಟು ಹೊಂದಿದೆ. ತಾಲ್ಲೂಕಿನಲ್ಲಿ ಎಲ್ಲಾ ಜನಸಮುದಾಯದವರು ವಾಸವಾಗಿದ್ದಾರೆ. ರಾಜಕೀಯವಾಗಿ ಕೊರಟಗೆರೆ ತಾಲ್ಲೂಕನ್ನು ನೋಡುವುದಾದರೆ ತನ್ನದೇ ಆದ ವಿಧಾನ ಸಭಾ ಕ್ಷೇತ್ರವನ್ನು ಹೊಂದಿದೆ.

**ಕೊರಟಗೆರೆ ಪಟ್ಟಣ ಪಂಚಾಯಿತಿ :** 'ಕೊರಟಗೆರೆ' ಈ ಹಿಂದೆ 'ಕರಟಗಿರಿ' ಎಂಬ ಹೆಸರಿನಿಂದ ಇತ್ತು. ಈ ಊರಿಗೆ 'ಕರಟಗಿರಿ' ಎಂಬ ಹೆಸರು ಬರಲು ಕಾರಣ ಈ ಊರು ತೆಂಗಿನ ಚಿಪ್ಪಿನ ಬೋರಲು ಬಿದ್ದ ಆಕೃತಿಯಿಂದ ಕಾಣುವುದರಿಂದ ಬಂದಿರಬಹುದು ಎಂಬುದು ವಿಚಾರವಾದಿಗಳಾದ ಹಿರಿಯರ ವಾದ. ಈ ಗಿರಿಯಲ್ಲಿ ಶ್ರೀ ಜಲಗಂಗಾಧರೇಶ್ವರ ಎಂಬ ದೇವಸ್ಥಾನವಿದ್ದು, ಇದು ಮಜುರಾಯಿ ಇಲಾಖೆಗೆ ಒಳಪಟ್ಟಿದೆ. ಈ ದೇವಸ್ಥಾನದ ಪಕ್ಕದಲ್ಲಿ ದೇವರ ಸೇವೆಗಾಗಿ ನಿರ್ಮಿಸಿರುವಂತಹ 'ಪುಷ್ಕರಣೆ' ಇದೆ. ಇದು ಸದಾ ನೀರಿನಿಂದ ತುಂಬಿರುತ್ತದೆ. ಈ ಕಲ್ಯಾಣಿಯ ಮೇಲ್ಭಾಗದಲ್ಲಿ ನಂದಿಯ ವಿಗ್ರಹವಿದೆ.

ಈ ಊರಿನಲ್ಲಿ ಪಾಳೆಯಗಾರರು ಆಳ್ವಿಕೆಯನ್ನು ನಡೆಸಿದ್ದು, ಇತಿಹಾಸದ ಪುಟಗಳಲ್ಲಿ ಕಾಣಸಿಗುತ್ತದೆ. ಇತಿಹಾಸಗಳಲ್ಲಿ ಗತವೈಭವದಿಂದ ಮೆರೆದಂತಹ ಈ ಕೊರಟಗೆರೆ ಈಗಲೂ ತನ್ನ ವೈವಿಧ್ಯತೆಯನ್ನು ಉಳಿಸಿಕೊಂಡು ಬಂದಿದೆ. ತುಮಕೂರು ಜಿಲ್ಲೆಯಲ್ಲಿ ತನ್ನದೇ ಆದ ಮಹತ್ವವನ್ನು ಪಡೆದುಕೊಂಡಿರುವ ಕೊರಟಗೆರೆ ಜಿಲ್ಲಾ ಕೇಂದ್ರಕ್ಕೆ ೨೬.೮ ಕಿ.ಮೀ ದೂರದಲ್ಲಿದೆ. ಈ ಊರು ತುಮಕೂರಿನಿಂದ ಮಧುಗಿರಿಗೆ ಹೋಗುವ ಮಾರ್ಗದಲ್ಲಿದೆ. ಬೆಂಗಳೂರು ಮತ್ತು ತುಮಕೂರಿನಿಂದ ಕೊರಟಗೆರೆ ಮಾರ್ಗವಾಗಿ ಮಧುಗಿರಿ, ಪಾವಗಡ ಹಾಗೂ ಹೊಳವನಹಳ್ಳಿ, ಭೈರೇನಹಳ್ಳಿ, ಆರೂಡಿ ಮಾರ್ಗವಾಗಿ ಗೌರಿಬಿದನೂರುಗಳಿಗೆ ಹೋಗಲು ಎರಡು ಬಸ್ ಮಾರ್ಗವನ್ನು ಹೊಂದಿದೆ.

೨೦೦೧ರ ಜನಗಣತಿ ಪ್ರಕಾರ ಇಲ್ಲಿನ ಒಟ್ಟು ಜನಸಂಖ್ಯೆ ೧೩,೬೫೫. ಇದರಲ್ಲಿ ಪುರುಷರ ಸಂಖ್ಯೆ ೬,೯೨೯ ಮತ್ತು ಮಹಿಳೆಯರ ಸಂಖ್ಯೆ ೬,೭೨೬. ಇಲ್ಲಿನ ಪರಿಶಿಷ್ಟ ಜಾತಿಯ ಒಟ್ಟು ಜನಸಂಖ್ಯೆ ೨,೦೨೯. ಇದರಲ್ಲಿ ಪುರುಷರ ಸಂಖ್ಯೆ ೯೯೬ ಮತ್ತು ಮಹಿಳೆಯರ ಸಂಖ್ಯೆ ೧,೦೩೩. ಪರಿಶಿಷ್ಟ ಪಂಗಡಕ್ಕೆ ಸೇರಿದವರ ಒಟ್ಟು ಜನಸಂಖ್ಯೆ ೨,೧೯೯. ಇದರಲ್ಲಿ ಪುರುಷರು ೧,೧೨೩ ಮತ್ತು ಮಹಿಳೆಯರ ಸಂಖ್ಯೆ ೧,೦೨೬. ಈ ಪ್ರದೇಶದಲ್ಲಿನ ಜನರು ಕೃಷಿಗೆ ಸಂಪೂರ್ಣವಾಗಿ ಮಳೆಯನ್ನೇ ಆಧರಿಸಿದ್ದಾರೆ. ಇಲ್ಲಿನ ಪ್ರಮುಖ ಬೆಳೆಗಳೆಂದರೆ ರಾಗಿ, ಶೇಂಗಾ, ಜೋಳ, ತೊಗರಿ, ಹಳಸಂದೆ, ಭತ್ತ ಇತ್ಯಾದಿ ಬೆಳೆಗಳನ್ನು ಬೆಳೆಯುತ್ತಾರೆ.

ಈ ಪ್ರದೇಶದಲ್ಲಿ ಲಿಂಗಾಯಿತರು (ಜಂಗಮರು, ಪಂಚಾಚಾರ್ಯರು, ಸಜ್ಜನರು, ಸಾದ ಲಿಂಗಾಯಿತ), ಪರಿಶಿಷ್ಟ ಜಾತಿ (ಆದಿಕರ್ನಾಟಕ, ಆದಿದ್ರಾವಿಡ, ಲಂಬಾಣಿ, ಭೋವಿ ಇತ್ಯಾದಿ), ಪರಿಶಿಷ್ಟ ಪಂಗಡ (ಪಾಳೇಗಾರರು, ನಾಯಕ, ತಳವಾರ), ಬ್ರಾಹ್ಮಣರು (ಪಂಚಗ್ರಾಮ, ಕೋಟಾ, ಮಾತ್ರರು, ಇತ್ಯಾದಿ), ಒಕ್ಕಲಿಗರು, ಕುಂಚಿಟಿಗರು, ಮರಾಠಿಗರು, ವೈಶ್ಯರು, ಮುಸ್ಲಿಮರು, ಕ್ರಿಶ್ಚಿಯನ್ನರು, ಗೊಲ್ಲರು (ಕಾಡುಗೊಲ್ಲರು, ಊರಗೊಲ್ಲರು) ಇತ್ಯಾದಿ ಜನಸಮುದಾಯಗಳಿವೆ.

### ಆಕರಗ್ರಂಥಗಳು

ಕರ್ನಾಟಕದಲ್ಲಿ ಮಾನವ ಅಭಿವೃದ್ಧಿ ವರದಿ, (೨೦೦೫), ಯೋಜನಾ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು.

ಜನಾರ್ದನ, (೨೦೦೩), ಕರ್ನಾಟಕ : ತಾಲ್ಲೂಕುವಾರು ಜನಸಂಖ್ಯೆ ಅಕ್ಷರಸ್ಥರು ಮತ್ತು ಸಾಕ್ಷರತೆ ೨೦೦೧, ಅಭಿವೃದ್ಧಿ ಅಧ್ಯಯನ ಪತ್ರಿಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಸಂಪುಟ ೨, ಸಂಚಿಕೆ ೧, ಜನವರಿ.

ಜಗದೀಶಕುಮಾರ, (೨೦೦೩), ಬೇಡ ಬುಡಕಟ್ಟಿನ ಬೇಟೆ ಆಚರಣೆ ಒಂದು ಸಮಾಜಶಾಸ್ತ್ರಿಯ ಅಧ್ಯಯನ, ಅಪ್ರಕಟಿತ ಎಂ.ಫಿಲ್ ಸಂಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ತುಮಕೂರು ಜಿಲ್ಲೆಯ ಅಂಕಿ-ಅಂಶಗಳ ನೋಟ, (೨೦೦೩-೦೪), ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ತುಮಕೂರು.

ನಾಗಮಣಿ ಪದ್ಮನಾಭ (ಸಂ.), (೨೦೦೩), ಕೊರಟಗೆರೆ ತಾಲ್ಲೂಕು ದರ್ಶನ, ೫ನೇ ವಾರ್ಷಿಕೋತ್ಸವ ವಿಶೇಷ ಸಂಚಿಕೆ, ಯಶು ಅಭಿವೃದ್ಧಿ ಪ್ರಕಾಶನ, ಕೊರಟಗೆರೆ, ತುಮಕೂರು ಜಿಲ್ಲೆ.

ಪ್ರಶಾಂತ್ ಎಚ್.ಡಿ. (೨೦೦೫), "ಈಶಾನ್ಯ ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣ ಮತ್ತು ಸಮಾಜ", ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ. ೯೩.

ಬಳ್ಳಾರಿ ಜಿಲ್ಲೆಯ ಅಂಕಿ-ಅಂಶಗಳ ನೋಟ, (೨೦೦೨-೦೩), ಜಿಲ್ಲಾ ಸಂಗ್ರಹಣಾಧಿಕಾರಿಗಳ ಕಛೇರಿ, ಬಳ್ಳಾರಿ.

ಮುದ್ದವೀರಪ್ಪ ಕೆ.ಪಿ., (೨೦೦೪), ತುಮಕೂರು ಜಿಲ್ಲೆಯ ಕೋಟೆಕೊತ್ತಲುಗಳ ಜಾನಪದೀಯ ಅಧ್ಯಯನ, ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಮೈಸೂರು ಸ್ಟೇಟ್ ಗೆಜೆಟೀಯರ್ಸ್, (೧೯೬೯), ತುಮಕೂರು ಡಿಸ್ಟ್ರಿಕ್ಟ್ (ಇಡಿ) ಅಭಿಶಂಕರ, ಪಬ್ಲಿಷ್ಡ್ ಬೈ ಗೌರ್ನಮೆಂಟ್ ಆಫ್ ಮೈಸೂರು.

ಮಲ್ಲಿಕಾರ್ಜುನ ಕಿಚಡಿ, (೨೦೦೩), ಬಳ್ಳಾರಿ ಜಿಲ್ಲೆ ಬೇಡ ಸಮುದಾಯದ ಶಿಕ್ಷಣದ ಪ್ರಗತಿ, ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಯರಿಸ್ವಾಮಿ ಎಂ., (೨೦೦೨), ಗ್ರಾಮಪಂಚಾಯಿತಿ ಮತ್ತು ಸಬಲೀಕರಣ, ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ರವೀಂದ್ರನಾಥ ಕೆ. (ಸಂ.), (೨೦೦೫), ಬಳ್ಳಾರಿ ಜಿಲ್ಲಾ ದರ್ಶನ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

ರವಿಕುಮಾರ ಕೆ., (೨೦೦೩), ತುಮಕೂರು ಜಿಲ್ಲಾ ದರ್ಶನ, ಜಯಮಂಗಲಿ, ೬೯ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ, ತುಮಕೂರು.

ಲೀಲಾವತಿ ಟಿ.ಆರ್., (೨೦೦೭), ಕರ್ನಾಟಕದ ಶೈಕ್ಷಣಿಕ ಬೆಳವಣಿಗೆಯಲ್ಲಿ ಧಾರ್ಮಿಕ ಸಂಸ್ಥೆಗಳ ಪಾತ್ರ ಮತ್ತು ಅದರ ಸಾಮಾಜಿಕ ಆಯಾಮಗಳು, ತುಮಕೂರು ಜಿಲ್ಲೆಯ ಸಿದ್ಧಗಂಗಾ ಮಠವನ್ನು ಅನುಲಕ್ಷಿಸಿ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ.

ಲಕ್ಷ್ಮಣ್ ಸಿ.ಎಂ., (೨೦೦೦), ತುಮಕೂರು ಜಿಲ್ಲೆಯ ಭೌಗೋಳಿಕ ಪರಿಸರ ಮತ್ತು ಅಭಿವೃದ್ಧಿ, ಪ್ರಕಾಶಕರು, ೨ನೇ ಅಡ್ಡರಸ್ತೆ, ವಾಸವಿ ಹಾಸ್ಟಲ್ ಮುಂಭಾಗ, ಸಿದ್ಧಗಂಗಾ ಬಡಾವಣೆ, ತುಮಕೂರು.

ಶಿವತಾರಕ, (೧೯೯೯), ತುಮಕೂರು ಜಿಲ್ಲೆಯ ಪುರಾತತ್ವ ಕುರುಹುಗಳು, ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಶೈಕ್ಷಣಿಕ ಅಂಕಿ-ಅಂಶಗಳ ಪಕ್ಷಿನೋಟ, ೨೦೦೨-೦೩ ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು.

ಸೆನ್ಸಸ್ ಆಫ್ ಇಂಡಿಯಾ, (೨೦೦೧), ಸಿರೀಸ್-೩೦, ಕರ್ನಾಟಕ ಪೇಪರ್ ಸೆಕೆಂಡ್ ಆಫ್ ೨೦೦೧, ಪ್ರಾವೀಜನಲ್ ಪಾಪ್ಯುಲೇಶನ್ ಟೋಟಲ್ಸ್, ರೂರಲ್-ಅರ್ಬನ್ ಡಿಸ್ಟ್ರಿಬ್ಯೂಷನ್ ಆಫ್ ಪಾಪ್ಯುಲೇಶನ್ ಡೈರೆಕ್ಟೊರೆಟ್ ಆಫ್ ಸೆನ್ಸಸ್ ಆಪರೇಷನ್ಸ್, ಕರ್ನಾಟಕ.

ಸುಧಾಕರ್ ಬಿ.ಎಸ್., (೨೦೦೭), ಬಳ್ಳಾರಿ ಜಿಲ್ಲೆಯ ಜನಪದ ವೈದ್ಯ ಒಂದು ವೈಜ್ಞಾನಿಕ ಅಧ್ಯಯನ, ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸುಮಂಗಲಾ ಅತ್ತಿಗೇರಿ, (೨೦೦೭), ಕೃಷಿ ಜಾನಪದ ಮತ್ತು ಮಹಿಳೆ, ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸೂರ್ಯನಾಥ್ ಯು., ಕಾಮತ್, (೧೯೮೭), ಮೈಸೂರು ಸ್ಟೇಟ್ ಗೆಜೆಟಿಯರ್, ಭಾಗ ಮೂರು, ವಿ.ಬಿ. ಸುಬ್ಬಯ್ಯ ಅಂಡ್ ಸನ್ಸ್, ಬೆಂಗಳೂರು.

• • •

# ಅಧ್ಯಾಯ ಮೂರು

# ಶಾಲಾ ಶಿಕ್ಷಣದ ಸಾರ್ವತ್ರೀಕರಣಕ್ಕೆ ನಡೆದಿರುವ ಪ್ರಯತ್ನಗಳು

---

ಪ್ರಸ್ತುತ ಅಧ್ಯಾಯದಲ್ಲಿ ಶಾಲಾ ಶಿಕ್ಷಣದ ಸಾರ್ವತ್ರೀಕರಣಕ್ಕೆ ನಡೆದಿರುವ ಪ್ರಯತ್ನಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಭಾರತದ ಭವಿಷ್ಯ ಇಂದಿನ ಮಕ್ಕಳ ಬೆಳವಣಿಗೆಯ ಮೇಲೆ ನಿಂತಿದೆ. ಭಾರತ ಸರ್ಕಾರ ಪ್ರತಿಯೊಂದು ಮಗು ಪ್ರಾಥಮಿಕ ಶಿಕ್ಷಣ ಪಡೆಯಬೇಕೆಂದು ವಿವಿಧ ಕಾರ್ಯಕ್ರಮಗಳೊಂದಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣವೆಂದು ಜಾರಿಗೆ ತರಲಾಯಿತು. ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣವೆಂದರೆ "ಮಗುವಿನ ಆರು ವರ್ಷದಿಂದ ಹದಿನಾಲ್ಕು ವರ್ಷದವರೆಗೆ ಯಾವುದೇ ಜಾತಿ, ಮತ, ಲಿಂಗ, ನಾಡು-ನುಡಿ ನೋಡದೆ ಕಡ್ಡಾಯ ಮತ್ತು ಉಚಿತವಾಗಿ ಶಿಕ್ಷಣ ನೀಡುವುದು". ಇಂತಹ ನಿಯಮಕ್ಕೆ ಪ್ರೇರಣೆಯಂತೆ ಹಲವು ವಿಚಾರವಂತರು, ಶಿಕ್ಷಣತಜ್ಞರು, ಮಗುವಿಗೆ ಕಡ್ಡಾಯ ಮತ್ತು ಉಚಿತ ಶಿಕ್ಷಣ ಕೊಡಬೇಕೆಂದು ಒತ್ತಿ ಹೇಳಿದರು. ಉದಾಹರಣೆಗೆ. ಗೋಪಾಲಕೃಷ್ಣ ಗೋಖಲೆ, ದಾದಾಬಾಯಿ ನವರೂಜಿ ಮುಂತಾದವರು ೧೮೮೨ರಲ್ಲಿ ವಿಲಿಯಂ ಹಂಟರ್ ತನ್ನ ವರದಿಯಲ್ಲಿ ಪ್ರಥಮವಾಗಿ ಪ್ರಾಥಮಿಕ ಶಿಕ್ಷಣಕ್ಕೆ ಪ್ರಾಶಸ್ತ್ಯ ಕೊಟ್ಟರು. ನಂತರ ೧೯೦೬ ಮತ್ತು ೧೯೧೧ರಲ್ಲಿ ಭಾರತ ಸರ್ಕಾರ ಹಲವು ರಾಜ್ಯಗಳಲ್ಲಿ ಶಿಕ್ಷಣ ಕಡ್ಡಾಯಗೊಳಿಸಲು ಮುಂದಾಯಿತು. ಇಂಡಿಯಾದ ಸಾಮಾಜಿಕ ವ್ಯವಸ್ಥೆಯಲ್ಲಿ ಅನೇಕ ಸ್ವರೂಪದ ಜನಸಮುದಾಯಗಳು ಕಂಡುಬರುತ್ತವೆ. ವಿಭಿನ್ನ ಜನವರ್ಗಗಳಿಗೆ ಶಿಕ್ಷಣವನ್ನು ನೀಡುವ ಪ್ರಯತ್ನವು ಸ್ವಾತಂತ್ರ್ಯ ಪೂರ್ವ ದಿಂದಲೂ ನಿರಂತರವಾಗಿ ನಡೆಯುತ್ತಾ ಬಂದಿದೆ. ಇದನ್ನು ಅನೇಕ ಅಧ್ಯಯನಗಳು ಗುರುತಿಸಿವೆ (ಎಚ್.ಡಿ. ಪ್ರಶಾಂತ್; ೨೦೦೬; ರಾಮಚಂದ್ರನ್ ವಿ.ಕೆ.; ೧೯೯೬; ಅನಿತಾ; ೨೦೦೦). ಶಿಕ್ಷಣವನ್ನು ಮೂಲಭೂತವಾಗಿ ಸಮಾಜದ ಪ್ರತಿಯೊಬ್ಬರಿಗೂ ದೊರೆಯುವಂತೆ ಆಗಬೇಕು ಎನ್ನುವ ನಿಟ್ಟಿನಲ್ಲಿ ಸರ್ಕಾರ ಹಲವಾರು ಆಯೋಗಗಳನ್ನು ಜಾರಿಗೊಳಿಸಿದೆ.

ಶಾಲಾ ಶಿಕ್ಷಣ ವ್ಯವಸ್ಥೆಯನ್ನು ಅರ್ಥಮಾಡಿಕೊಳ್ಳಬೇಕಾದರೆ ೧೯೫೦ಕ್ಕೆ ಮೊದಲು ಅಂದರೆ ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಶಾಲಾ ಶಿಕ್ಷಣಕ್ಕೆ ವಿವಿಧ ಕಾಲಘಟ್ಟದಲ್ಲಿ ನಡೆಸಿದ ಪ್ರಯತ್ನ ಗಳನ್ನು ನಾವು ಮೊದಲಿಗೆ ಅರ್ಥಮಾಡಿಕೊಳ್ಳಬೇಕು. ಸ್ವಾತಂತ್ರ್ಯ ಚಳುವಳಿಯ ಕಾಲದಲ್ಲಿ ಬಹಳ ಸ್ಪಷ್ಟವಾಗಿ ಅರ್ಥವಾಗುವ ವಿಷಯವೆಂದರೆ ಹೆಚ್ಚು ತ್ಯಾಗ, ಬಲಿದಾನ ಯುದ್ಧಕ್ಕಿಂತಲೂ ಚರ್ಚೆಯಾದ ಒಂದು ಪ್ರಮುಖ ವಿಚಾರವೆಂದರೆ ಶಾಲಾ ಶಿಕ್ಷಣದ ಸಾರ್ವತ್ರೀಕರಣ.

ಈ ಕಾಲಘಟ್ಟದಲ್ಲಿ ಜನರ ಒತ್ತಾಯಗಳಿಗೆ ಮಣಿದ ಬ್ರಿಟಿಷ್ ಸರ್ಕಾರ ಆಗಿಂದ್ದಾಗ್ಗೆ ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸುವ ಪ್ರಯತ್ನವನ್ನು ಅನೇಕ ಆಯೋಗಗಳನ್ನು ರಚಿಸುವ ಮೂಲಕ ಪ್ರಾರಂಭಿಸಿತು. ಅವುಗಳಲ್ಲಿ ಪ್ರಮುಖವಾದವುಗಳು ಎಂದರೆ, ವುಡ್ಸ್ ಆಯೋಗ (೧೮೫೪), ಹಂಟರ್ ಆಯೋಗ (೧೮೮೨), ಸ್ಯಾಡ್ಲರ್ ಆಯೋಗ (೧೯೧೭), ಹರ್ಟಾಗ್ ಆಯೋಗ (೧೯೨೯), ಸಾರ್ಜೆಂಟ್ ಆಯೋಗ (೧೯೪೪) ಇದಲ್ಲದೆ ದೇಶೀಯವಾಗಿ ಮಹಾರಾಜ ಗಾಯ್ಕವಾಡ್ ಅವರ ಪ್ರಯತ್ನ, ದಾದಾಬಾಯಿ ನವರೋಜಿ ಅವರ ಒತ್ತಾಯ, ಮೈಸೂರು ಪ್ರಾಂತ್ಯದ ರಾಜಾಜ್ಞೆ, ಗಾಂಧೀಜಿಯವರ ಮೂಲಶಿಕ್ಷಣದ ಕಲ್ಪನೆ, ಗೋಪಾಲಕೃಷ್ಣ ಗೋಖಲೆ ಅವರ ಕಡ್ಡಾಯ ಶಿಕ್ಷಣ ಮಸೂದೆ ಮತ್ತು ಗೊತ್ತುವಳಿ ಮಂಡಿಸುವ ಪ್ರಯತ್ನ, ಇವು ಶಾಲಾ ಶಿಕ್ಷಣ ಸಾರ್ವತ್ರೀಕರಣ ಪ್ರಕ್ರಿಯೆಯಲ್ಲಿ ಅತ್ಯಂತ ಪ್ರಮುಖವಾದ ಘಟನೆಗಳಾಗಿವೆ.

ಭಾರತದಲ್ಲಿ ಬ್ರಿಟಿಷರ ಆಡಳಿತದ ಸಂದರ್ಭದಲ್ಲಿ, ಸಮಾಜ ಸುಧಾರಕರ ಹೋರಾಟ ಮತ್ತು ಪ್ರತಿಭಟನೆಯ ಫಲವಾಗಿ ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸುವ ಪ್ರಯತ್ನಕ್ಕೆ ಬ್ರಿಟೀಷ್ ಸರ್ಕಾರವು ಪ್ರಥಮ ಬಾರಿಗೆ ಅಂದರೆ ಸುಮಾರು ೧೮೧೩ರ ಸನ್ನದಿಯಲ್ಲಿ ಶಿಕ್ಷಣದ ಸಲುವಾಗಿ ಪ್ರತಿವರ್ಷ ಒಂದು ಲಕ್ಷ ರೂಪಾಯಿಗಳನ್ನು ಖರ್ಚು ಮಾಡುವಂತೆ ಈಸ್ಟ್ ಇಂಡಿಯಾ ಕಂಪನಿಯೂ ಸೂಚಿಸಿತು. ಬ್ರಿಟೀಷ್ ಅಧಿಪತ್ಯದಲ್ಲಿರುವ ಎಲ್ಲಾ ಪ್ರಾಂತ್ಯಗಳು ಸೇರಿ ಈ ಒಂದು ಲಕ್ಷ ರೂಪಾಯಿಗಳನ್ನು ಶಿಕ್ಷಣದ ಸಲುವಾಗಿ ವ್ಯಯ ಮಾಡುತ್ತಿದ್ದವು. ಟ್ರಾವನ್‌ಕೋರ್ ಪ್ರಾಂತ್ಯದ (ಈಗಿನ ಕೇರಳ ರಾಜ್ಯದ ಪ್ರದೇಶ) ಮಹಾರಾಣಿಯು ಸಹ ೧೮೧೭ರಲ್ಲಿ ತಮ್ಮ ಆಡಳಿತದ ಸುತ್ತೋಲೆಗಳನ್ನು, ಆದೇಶಗಳನ್ನು ಹಾಗೂ ಅಲ್ಲಿನ ಪ್ರಜೆಗಳು ಸಕ್ರಿಯವಾಗಿ ಪಾಲ್ಗೊಳ್ಳಬೇಕಾದರೆ, ಶಿಕ್ಷಣವು ಅತ್ಯವಶ್ಯಕವೆಂದು ಅರಿತುಕೊಂಡು, ತಮ್ಮ ಪ್ರಾಂತ್ಯದ ಎಲ್ಲಾ ಪ್ರಜೆಗಳಿಗೆ ಸಾರ್ವತ್ರಿಕವಾಗಿ ಶಿಕ್ಷಣ ನೀಡುವಂತೆ ಘೋಷಣೆಯೊಂದನ್ನು ಜಾರಿಗೆ ತಂದರು. ಇದಾದ ಮೇಲೆ, ದಾದಾಬಾಯಿ ನವರೋಜಿಯವರು ೧೮೮೨ರಲ್ಲಿ ಮೂಲಭೂತವಾಗಿ ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣಕ್ಕೆ ಪ್ರಮುಖ ಆದ್ಯತೆ ನೀಡಬೇಕೆಂದು ಬ್ರಿಟೀಷ್ ಸರ್ಕಾರದ ಭಾರತೀಯ ಶಿಕ್ಷಣ ಆಯೋಗ(ಹಂಟರ್)ವನ್ನು ಒತ್ತಾಯಿಸಿತು. ಈ ಅವಧಿಯಲ್ಲಿ ಪ್ರಾಂತೀಯವಾಗಿ ಶಿಕ್ಷಣದ ಸಾರ್ವತ್ರೀಕರಣಕ್ಕೆ ಹಲವು ಪ್ರದೇಶಗಳಲ್ಲಿ ಮನ್ನಣೆ ದೊರೆಯುತ್ತಿದ್ದಂತೆ, ಬರೋಡಾದ ಮಹಾರಾಜ ಗಾಯಕವಾಡ್‌ರವರು ಸಹ ೧೮೯೩ರಲ್ಲಿ ತಮ್ಮ ರಾಜ್ಯದ ವ್ಯಾಪ್ತಿಗೆ ಒಳಪಡುವ ಸಣ್ಣ ಪ್ರಾಂತ್ಯವಾದ ಅಮರಾಲಿಯಲ್ಲಿ ಶಿಕ್ಷಣದ ಸಾರ್ವತ್ರೀಕರಣ ಪ್ರಕ್ರಿಯೆಗೆ ಚಾಲನೆ ನೀಡಿದರು.

ಮೊದಲ ಪ್ರಯತ್ನದಲ್ಲಿ ಅಪಾರ ಯಶಸ್ಸು ಹಾಗೂ ಜನರ ಮನ್ನಣೆ ಗಳಿಸಿತು. ಮಹಾರಾಜರು ಪುನಃ ೧೯೦೬ರಲ್ಲಿ ಶಿಕ್ಷಣದ ಸಾರ್ವತ್ರೀಕರಣವನ್ನು, ಬರೋಡ ಪ್ರಾಂತ್ಯದ ಉದ್ದಗಲಕ್ಕೂ ವಿಸ್ತರಣೆ ಮಾಡಿದರು. ಇದೇ ಸಂದರ್ಭದಲ್ಲಿ ಸಮಾಜ ಸುಧಾರಣೆಯ ಮುಖಂಡರಾದ ಗೋಪಾಲಕೃಷ್ಣ

ಗೋಖಲೆಯವರು, ಕಡ್ಡಾಯ ಪ್ರಾಥಮಿಕ ಶಿಕ್ಷಣಕ್ಕೆ ಸಂಬಂಧಿಸಿದಂತೆ ೧೯೧೧ರಲ್ಲಿ ಕೇಂದ್ರ ಶಾಸನ ಸಭೆಯಲ್ಲಿ ವರದಿಯೊಂದನ್ನು ಪ್ರಸ್ತುತಪಡಿಸಿ, ಶಿಕ್ಷಣದ ಸಾರ್ವತ್ರೀಕರಣಕ್ಕೆ ಸರ್ಕಾರ ಹೆಚ್ಚಿನ ಗಮನ ಕೊಟ್ಟು, ಕ್ರಮ ಕೈಗೊಳ್ಳಬೇಕೆಂದು ಒತ್ತಾಯಿಸಿದರು. ಆದರೆ ನಮ್ಮ ನಾಡಿನ ಜನರ ದುರಂತವೋ ಏನು? ಈ ಮಸೂದೆಗೆ ಒಪ್ಪಿಗೆ ದೊರೆಯಲಿಲ್ಲ.

ಶಿಕ್ಷಣದ ಸಾರ್ವತ್ರೀಕರಣದ ಪ್ರಯತ್ನವು ಕರ್ನಾಟಕ ಏಕೀಕರಣೋತ್ತರದಲ್ಲಿ ಮೈಸೂರು ಪ್ರಾಂತ್ಯದಲ್ಲಿಯೂ, ಸಹ ಅನೇಕ ರೀತಿಯ ಪ್ರಯತ್ನ ಜರುಗಿದವು. ಅದರಲ್ಲಿ ಮೈಸೂರಿನ ಮಹಾರಾಜರು ಶಿಕ್ಷಣದ ಸಾರ್ವತ್ರೀಕರಣಕ್ಕೆ ನಡೆಸಿದ ಪ್ರಯತ್ನ, ೧೮೪೫ರಲ್ಲಿ ಆಯೋಗದ ವರದಿಯನ್ನು ಆಧರಿಸಿ, ರಾಜ್ಯಕ್ಕೆ ಶಿಕ್ಷಣ ಯೋಜನೆಯನ್ನು ಅಂದಿನ ನ್ಯಾಯಾಂಗ ಆಯುಕ್ತರು ಸಿದ್ಧಪಡಿಸಿ, ಮೂರು ವರ್ಷಗಳಲ್ಲಿ ಅಂದರೆ ೧೮೫೭ರಲ್ಲಿ ಭಾರತ ಸರ್ಕಾರದ ಅನುಮೋದನೆ ಪಡೆದುಕೊಂಡರು. ನಂತರ ಶಿಕ್ಷಣ ವ್ಯವಸ್ಥೆಯನ್ನು ವಿಕೇಂದ್ರೀಕರಣಗೊಳಿಸಿ, ೧೮೬೭ರಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ನಿರ್ದೇಶಕರ ವ್ಯಾಪ್ತಿಗೆ ತರುವುದರ ಮೂಲಕ ಮೈಸೂರು ಪ್ರಾಂತ್ಯದಲ್ಲಿ ಉಚಿತ ಮತ್ತು ಕಡ್ಡಾಯ ಶಿಕ್ಷಣಕ್ಕೆ ವಿನೂತನ ಚಾಲನೆ ನೀಡಲಾಯಿತು. ಇಲ್ಲಿ ನಾವು ಗಮನಿಸಬೇಕಾದ ವಿಶೇಷ ಅಂಶವೆಂದರೆ ೧೯೧೧ರಲ್ಲಿ ಪ್ರಾಥಮಿಕ ಶಿಕ್ಷಣ ಉಚಿತವೆಂದು ಹೇಳುವ ಒಂದು ರಾಜಾಜ್ಞೆಯನ್ನು ಜಾರಿಗೊಳಿಸಲಾಯಿತು. ಇನ್ನು ಮುಂದುವರಿದು ೧೯೩೪ರಲ್ಲಿ ಶಿಕ್ಷಣವನ್ನು ಕಡ್ಡಾಯಗೊಳಿಸುವ ಕಾಯಿದೆಯನ್ನು ಜಾರಿಗೆ ತರಲಾಯಿತು.

ಇಂತಹ ಹಲವು ಪ್ರಯತ್ನಗಳು ಭಾರತದ ಅನೇಕ ಪ್ರಾಂತೀಯ ಪ್ರದೇಶಗಳಲ್ಲಿ ಜಾರಿಗೊಂಡರೂ ಅದರಲ್ಲಿ ಕೆಲವೊಂದು ದಾಖಲಾತಿ ಆಗದೆ ಹೋದವು. ಸ್ವಾತಂತ್ರ್ಯಪೂರ್ವದಿಂದಲೂ ಪ್ರಾಥಮಿಕ ಶಿಕ್ಷಣಕ್ಕೆ ಮನ್ನಣೆ ನೀಡುವುದರ ಮೂಲಕ ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸಲಾಯಿತು. ಭಾರತೀಯ ಸಮಾಜ ಸುಧಾರಕರ ಒತ್ತಾಯಕ್ಕೆ ಮಣಿದ ಬ್ರಿಟಿಷ್ ಸರ್ಕಾರ ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸುವ ಕೆಲಸವನ್ನು ತೀವ್ರಗೊಳಿಸಲು ಹಲವು ಆಯೋಗಗಳನ್ನು ರಚಿಸಿತು. ಅವುಗಳಲ್ಲಿ ಪ್ರಮುಖವಾದವುಗಳೆಂದರೆ

೧. ವುಡ್ಸ್ ಆಯೋಗ, ೧೮೫೪
೨. ಹಂಟರ್ ಆಯೋಗ, ೧೮೮೨
೩. ಸ್ಯಾಡ್ಲರ್ ಆಯೋಗ, ೧೯೧೭
೪. ಹರ್ಟಾಗ್ ಆಯೋಗ, ೧೯೨೯
೫. ಸಾರ್ಜೆಂಟ್ ಆಯೋಗ, ೧೯೪೪
೬. ಸಂವಿಧಾನ ಜಾರಿಗೆ ಬಂದ ನಂತರದ ಪ್ರಯತ್ನಗಳು
೭. ಶಿಕ್ಷಣ ಆಯೋಗ, ೧೯೬೪
೮. ರಾಷ್ಟ್ರೀಯ ಶಿಕ್ಷಣ ನೀತಿ, ೧೯೮೬

## ೩.೧. ಚಾರ್ಲ್ಸ್ ವುಡ್ಸ್ ವರದಿ

ಬ್ರಿಟಿಷ್ ಸಂವಿಧಾನದಲ್ಲಿ ಈಸ್ಟ್ ಇಂಡಿಯಾ ಕಂಪನಿಯು ಭಾರತದಲ್ಲಿ ಶಿಕ್ಷಣವನ್ನು ಉತ್ತಮಪಡಿಸಲು ಚಾರ್ಟರ್ ಕಾನೂನನ್ನು ಪ್ರತಿ ಇಪ್ಪತ್ತು ವರ್ಷಗಳಿಗೊಮ್ಮೆ ಬದಲಾಯಿಸುವ, ಉತ್ತಮಪಡಿಸುವ ವ್ಯವಸ್ಥೆಯನ್ನು ಹೊಂದಿತ್ತು. ಇದನ್ನು ೧೭೭೩ರಲ್ಲಿ ಬಳಕೆಗೆ ತರಲಾಯಿತು. ಆದರೆ ಇದಕ್ಕೆ ಕೆಲವು ಲೇಖನಗಳನ್ನು ಸೇರಿಸಬೇಕೆಂಬ ಆಪೇಕ್ಷೆ ವ್ಯಕ್ತಪಡಿಸಿದುದರಿಂದ ೧೮೧೩ರಲ್ಲಿ ಅದನ್ನು ಪೂರ್ಣಮಾಡಿ ಆಚರಣೆಗೆ ತರಲಾಯಿತು. ೧೮೫೩ರ ಶಿಕ್ಷಣದಲ್ಲಿ ಸ್ಪಷ್ಟ ಮತ್ತು ಸ್ಥಿರವಾದ ನೀತಿಯನ್ನು ತರಲು ಭದ್ರವಾದ ಸಮಿತಿಯನ್ನು ರಚಿಸಿ, ಶಿಕ್ಷಣದ ಅಭಿವೃದ್ಧಿಗೆ ಗಮನ ನೀಡಲಾಯಿತು.

### ವುಡ್ಸ್‌ನ ವರದಿಯ ಶಿಫಾರಸ್ಸುಗಳು

ಉನ್ನತ ಮತ್ತು ದೀರ್ಘವಾದ ನೂರು ಪುಟಗಳ ಬಹುಮುಖ್ಯವಾದ ಶೈಕ್ಷಣಿಕ ಅಂಶಗಳನ್ನೊಳಗೊಂಡ ವರದಿಯನ್ನು ೧೮೫೪ರ ಜುಲೈ ೧೯ರಂದು ಬ್ರಿಟಿಷ್ ಸರ್ಕಾರಕ್ಕೆ ವುಡ್ಸ್‌ನ ಅಧ್ಯಕ್ಷತೆಯಲ್ಲಿ ಮಂಡಿಸಲಾಯಿತು. ಇದರ ಶಿಫಾರಸ್ಸುಗಳನ್ನು ಈ ಕೆಳಕಂಡಂತೆ ವಿವರಿಸಲಾಗಿದೆ.

೧. ಶೈಕ್ಷಣಿಕ ಪ್ರಗತಿಯನ್ನು ಸಾಧಿಸುವಲ್ಲಿ ಜವಾಬ್ದಾರಿಯುತವಾದ ಪ್ರಾಥಮಿಕ ಶಿಕ್ಷಣ ಜಾರಿಗೆ ತರಬೇಕೆಂದು ಹಾಗೂ ಅಂಗೀಕಾರ ಮಾಡಬೇಕೆಂದು ಒತ್ತಾಯಿಸಲಾಯಿತು.

೨. ಮಹಿಳಾ ಶಿಕ್ಷಣಕ್ಕೆ ಹೆಚ್ಚಿನ ಗಮನಕೊಟ್ಟು ಅವರಿಗೆ ಬೇಕಾಗಿರುವ ಸೌಲಭ್ಯಗಳನ್ನು ಒದಗಿಸಬೇಕೆಂದು ಹೇಳಿತು.

೩. ವೃತ್ತಿಪರ ಶಿಕ್ಷಣಕ್ಕೆ ಮಹತ್ವ ಕೊಟ್ಟು ಶಾಲಾ ಕಾಲೇಜುಗಳಲ್ಲಿ ವೃತ್ತಿಪರ ಶಿಕ್ಷಣದ ಬಗ್ಗೆ ಗಮನಕೊಟ್ಟು ಇದರ ಬಗ್ಗೆ ಜನಗಳು ಹೆಚ್ಚು ಲಾಭ ಪಡೆದುಕೊಳ್ಳುವಂತೆ ಮಾಡಬೇಕೆಂದು ಒತ್ತಾಯ ಮಾಡಿತು.

ಹೀಗೆ ವುಡ್ಸ್ ವರದಿಯೂ ಪ್ರಮುಖವಾದಂತಹ ಅಂಶಗಳನ್ನು ಶಿಫಾರಸ್ಸು ಮಾಡುವ ಮೂಲಕ ಒತ್ತಾಯಿಸಿತು.

## ೩.೨. ಹಂಟರ್ ಆಯೋಗ

ಹಂಟರ್ ಆಯೋಗವು ಭಾರತದ ಪ್ರಥಮ ಆಯೋಗವಾಗಿ ೧೮೮೨ರ ಫೆಬ್ರವರಿ ೩ ರಂದು ಭಾರತದ ಗೌರ್ನರ್ ಜನರಲ್ ಆಗಿದ್ದ ಲಾರ್ಡ್‌ರಿಪ್ಪನ್ ವಿಲಿಯು ಹಂಟರ್‌ನ ಅಧ್ಯಕ್ಷತೆಯಲ್ಲಿ ರಚಿಸಿದ್ದರಿಂದ ಇದಕ್ಕೆ ಹಂಟರ್ ಆಯೋಗವೆಂದೇ ನಾಮಕರಣ ಮಾಡಲಾಯಿತು. ಇದರ ಕಾರ್ಯದರ್ಶಿಯಾಗಿ ಬಿ.ಎಲ್. ರೈಸ್ ಅವರನ್ನು ನೇಮಕ ಮಾಡಲಾಯಿತು.

### ಆಯೋಗದ ಶಿಫಾರಸ್ಸುಗಳು

* ಪ್ರಾಥಮಿಕ ಶಿಕ್ಷಣವು ಸಾಮಾನ್ಯ ಜನರಿಗೆ ಉಪಯೋಗವಾಗುವಂತಿರಬೇಕು. ಪ್ರಾಥಮಿಕ ಶಿಕ್ಷಣ ಕೊಡುವ ಮಾಧ್ಯಮವು ಭಾರತದ ಭಾಷೆಗಳಲ್ಲೇ ಆಗಬೇಕು.

* ಮಹಿಳಾ ಶಿಕ್ಷಣದ ಬಗ್ಗೆ ಹೆಚ್ಚು ಶಿಫಾರಸ್ಸು ಮಾಡಿತು.

* ಮಹಿಳೆಯರಿಗಾಗಿ ಉಚಿತ ಶಿಕ್ಷಣ ನೀಡುವುದು.

* ಮಹಿಳಾ ಶಿಕ್ಷಕರನ್ನು ನೇಮಕ ಮಾಡುವಂತೆ, ಪರದಾ ಪದ್ಧತಿ ಇರುವ ಮಹಿಳೆಯರಿಗೆ ಪ್ರತ್ಯೇಕ ಶಿಕ್ಷಣದ ವ್ಯವಸ್ಥೆ ಮಾಡುವುದು.

* ಬಾಲಕಿಯರಿಗೆ ಪ್ರತ್ಯೇಕ ವಿದ್ಯಾರ್ಥಿ ನಿಲಯವನ್ನು ತೆರೆಯುವುದು.

ಒಟ್ಟಾರೆಯಾಗಿ ಹಂಟರ್ ಆಯೋಗವು ಪ್ರಾಥಮಿಕ ಶಾಲಾ ಶಿಕ್ಷಣದ ಸಮಸ್ಯೆಗಳನ್ನು ಗುರುತಿಸಿ, ಅದರ ಅಭಿವೃದ್ಧಿಗೆ ಸಲಹೆಗಳನ್ನು ಕೊಟ್ಟಿತು. ಇದರ ಜೊತೆಗೆ ಮಹಿಳಾ ಶಿಕ್ಷಣ ಮತ್ತು ನವೀನ ಶಿಕ್ಷಣದ ಬಗ್ಗೆಯೂ ಸಲಹೆಗಳನ್ನು ನೀಡಿತು. ಪ್ರಾಥಮಿಕ ಶಿಕ್ಷಣ ಮತ್ತು ಉನ್ನತ ಶಿಕ್ಷಣ ವನ್ನು ದೇಶದಾದ್ಯಂತ ಹೇಗೆ ವಿಸ್ತರಿಸಬೇಕು ಮತ್ತು ಹರಡಬೇಕೆಂಬುದನ್ನು ಈ ಆಯೋಗವು ತಳಹದಿ ಯನ್ನು ಹಾಕಿ ಕೊಡುವುದರ ಮೂಲಕ, ಸಲಹೆಗಳನ್ನು ನೀಡಿ ಶಿಫಾರಸ್ಸುಗಳನ್ನು ಮಾಡಿತು.

**೩.೩. ಸ್ಯಾಡ್ಲರ್ ಆಯೋಗ, (೧೯೧೭)**

ಬ್ರಿಟಿಷ್ ಭಾರತ ಸರ್ಕಾರದ ಚೆಲ್ಮ್ಸ್ ಫರ್ಡ್‌ನು ಕಲ್ಕತ್ತ ವಿಶ್ವವಿದ್ಯಾಲಯದ ಸ್ಥಿತಿಗತಿಯನ್ನು ತಿಳಿಯಲು ಕ್ರಿ.ಶ. ೧೯೧೭ರಲ್ಲಿ ಸ್ಯಾಡ್ಲರ್ ನೇತೃತ್ವದಲ್ಲಿ ಒಂದು ಆಯೋಗ ನೇಮಿಸಿದನು. ಈ ಆಯೋಗದಲ್ಲಿ ಅಸಂತೋಷ ಮುಖರ್ಜಿ ಮತ್ತು ಡಾ. ಜಿಯಾ ಉದ್ದೀನ್ ಅಹಮದ್ ಎಂಬ ಇಬ್ಬರು ಭಾರತೀಯರು ಇದ್ದರು. ಈ ಆಯೋಗ ವಿಶ್ವವಿದ್ಯಾಲಯದ ಜೊತೆಗೆ ಪ್ರಾಥಮಿಕ, ಸೆಕೆಂಡರಿ ಹಾಗೂ ಕಾಲೇಜು ಶಿಕ್ಷಣಕ್ಕೆ ಸಂಬಂಧಪಟ್ಟ ಅಂಶಗಳ ಬಗ್ಗೆಯೂ ಅಧ್ಯಯನ ನಡೆಸಿ ಹಲವು ಶಿಫಾರಸ್ಸುಗಳನ್ನು ಮಾಡಿತು.

**ಆಯೋಗದ ಶಿಫಾರಸ್ಸುಗಳು**

* ವಿಶ್ವವಿದ್ಯಾಲಯಗಳಿಂದ ಇಂಟರ್ ಮಿಡಿಯಟ್ ಪ್ರತ್ಯೇಕಗೊಳ್ಳಬೇಕು. ಪ್ರಾಥಮಿಕ, ಸೆಕೆಂಡರಿ ಶಿಕ್ಷಣ ಹಾಗೂ ಇಂಟರ್ ಮಿಡಿಯಟ್‌ನ್ನು ನೋಡಿಕೊಳ್ಳಲು ಶಿಕ್ಷಣ ಮಂಡಳಿಯನ್ನು ನೇಮಿಸಬೇಕು. ವಿದ್ಯಾರ್ಥಿಯು ಇಂಟರ್ ಮಿಡಿಯಟ್ ಪರೀಕ್ಷೆಯನ್ನು ಪಾಸಾಗಿದ್ದರೆ ಮಾತ್ರ ವಿಶ್ವವಿದ್ಯಾಲಯಕ್ಕೆ ಪ್ರವೇಶ ಕೊಡಬೇಕು.
* ಪದವಿ ತರಗತಿಗಳ ಶಿಕ್ಷಣವನ್ನು ಮೂರು ವರ್ಷಗಳಿಗೆ ಮಿತಗೊಳಿಸಬೇಕು. ಪ್ರಾಂತೀಯ ಸರ್ಕಾರ ಗಳೇ ವಿಶ್ವವಿದ್ಯಾಲಯಗಳ ಆಡಳಿತವನ್ನು ನಿರ್ವಹಿಸಬೇಕು.
* ಮಹಿಳೆಯರ ವಿದ್ಯಾಭ್ಯಾಸ, ಅಧ್ಯಾಪಕರ ತರಬೇತಿ, ವಿಜ್ಞಾನ ಮತ್ತು ತಂತ್ರಜ್ಞಾನದ ತರಬೇತಿಗೆ ಪ್ರೋತ್ಸಾಹ ಕೊಡಲು ಈ ಆಯೋಗ ಸೂಚಿಸಿತು.

### ೨.೪. ಹಾರ್ಟಗ್ ಆಯೋಗ ವರದಿ (೧೯೨೯)

ಭಾರತದಲ್ಲಿ ರಾಜಕೀಯ ಆಂದೋಲನದ ಪರಿಣಾಮವಾಗಿ ಬ್ರಿಟೀಷ್ ಸರ್ಕಾರವು ಕ್ರಿ.ಶ. ೧೯೨೭ರಲ್ಲಿ 'ಸೈಮನ್' ಕಮೀಷನ್‌ನನ್ನು ನೇಮಕ ಮಾಡಿತು. ಈ ಆಯೋಗವು ಅಂದಿನ ಭಾರತದ ಶಿಕ್ಷಣದ ಪರಿಸ್ಥಿತಿಯನ್ನು ಅಧ್ಯಯನ ಮಾಡಿ, ಒಂದು ವರದಿಯನ್ನು ನೀಡುವಂತೆ ಒಂದು ಸಹಾಯಕ ಸಮಿತಿಯನ್ನು ಸರ್. ಫಿಲೀಪ್ ಹಾರ್ಟಾಗ್‌ರವರ ಅಧ್ಯಕ್ಷತೆಯಲ್ಲಿ ನೇಮಿಸಿತು. ಹಾರ್ಟಾಗ್ ಅವರು ಸ್ಯಾಡ್ಲರ್ ಆಯೋಗದ ಸದಸ್ಯರಾಗಿ ಹಾಗೂ ಕ್ರಿ.ಶ. ೧೯೨೧ರಲ್ಲಿ ಢಾಕಾ ವಿಶ್ವವಿದ್ಯಾಲಯದ ಉಪಕುಲಪತಿಯಾಗಿ ಸೇವೆ ಸಲ್ಲಿಸಿದ್ದರು. ಅವರು ಈ ಸಮಿತಿಗೆ ಅಧ್ಯಕ್ಷರಾಗಿದ್ದುದ್ದರಿಂದ 'ಹಾರ್ಟಾಗ್' ಸಮಿತಿಯು ೧೯೨೯ರ ಸೆಪ್ಟೆಂಬರ್ ಮಾಹೆಯಲ್ಲಿ ಶಿಕ್ಷಣದ ವಿವಿಧ ಅಂಶಗಳ ಬಗ್ಗೆ ವಿವರವಾದ ವರದಿಯನ್ನು ಸೈಮನ್ ಆಯೋಗಕ್ಕೆ ಸಲ್ಲಿಸಿತು.

**ಹಾರ್ಟಗ್ ಆಯೋಗ ವರದಿ ಶಿಫಾರಸ್ಸುಗಳು**

* ಪ್ರಾಥಮಿಕ ಶಿಕ್ಷಣದ ಅವಧಿ ಕನಿಷ್ಠ ನಾಲ್ಕು ವರ್ಷ ಇದ್ದು, ಉನ್ನತ ಶಿಕ್ಷಣಕ್ಕೆ ತಳಪಾಯ ಹಾಕುವಂತಿರಬೇಕೆಂದು ಸಲಹೆ ಶಿಫಾರಸ್ಸು ಮಾಡಿತು.

### ೩.೫. ಸಾರ್ಜೆಂಟ್ ವರದಿ

೧೯೧೩ರಲ್ಲಿ ಎರಡನೇ ಮಹಾಯುದ್ಧದ ನಂತರ ಭಾರತ ಸರ್ಕಾರವು ಶಿಕ್ಷಣವನ್ನು ಅಭಿವೃದ್ಧಿ ಪಡಿಸಬೇಕೆಂದು ಮತ್ತು ಶಿಕ್ಷಣ ಪುನರ್‌ವ್ಯವಸ್ಥೆಗಾಗಿ ಹಲವು ಯೋಜನೆಗಳನ್ನು ಸಿದ್ಧಗೊಳಿಸಲಾಯಿತು. ಆಗ ಕೇಂದ್ರ ಸರ್ಕಾರದ ಶಿಕ್ಷಣ ಸಲಹೆಗಾರರಾಗಿದ್ದ ಸರ್‌ಜಾನ್ ಸಾರ್ಜೆಂಟ್‌ರವರಿಗೆ ಈ ಕಾರ್ಯ ವನ್ನು ವಹಿಸಲಾಯಿತು. ಆದ್ದರಿಂದ ೧೯೪೪ರಲ್ಲಿ ಸಾರ್ಜೆಂಟ್‌ರವರ ನೇತೃತ್ವದಲ್ಲಿ ಶಿಕ್ಷಣ ಅಭಿವೃದ್ಧಿಗೆ ವರದಿಯನ್ನು ಸಲ್ಲಿಸಲಾಯಿತು. ಹಾಗಾಗಿ ಇದನ್ನು ಸಾರ್ಜೆಂಟ್ ವರದಿಯೆಂದು ಕರೆಯಲಾಯಿತು.

ಸಾರ್ಜೆಂಟ್ ವರದಿಯು ಬಹುಮುಖ್ಯವಾಗಿ ರಾಷ್ಟ್ರೀಯ ಶಿಕ್ಷಣದ ಬೆಳವಣಿಗೆಯ ವ್ಯವಸ್ಥೆಗೆ ಸಂಬಂಧಪಟ್ಟಿದ್ದು. ಶೈಕ್ಷಣಿಕ ಸಮಸ್ಯೆಗಳನ್ನು ಪ್ರಾಥಮಿಕ ಶಿಕ್ಷಣದಿಂದ ವಿಶ್ವವಿದ್ಯಾಲಯದವರೆಗೆ ಮನದಟ್ಟು ಮಾಡಲು ಸಂಗ್ರಹಿಸಿರುವುದರಲ್ಲಿ ಇದು ಮೊದಲನೆಯ ವರದಿ ಎಂದು ಹೇಳಬಹುದು. ಈ ವರದಿಯೂ ಹನ್ನೆರಡು ಅಧ್ಯಾಯಗಳನ್ನು ಒಳಗೊಂಡಿದೆ. ಅವುಗಳಲ್ಲಿ ಮುಖ್ಯವಾದ ಶಿಫಾರಸ್ಸುಗಳನ್ನು ಈ ಕೆಳಗಿನಂತೆ ನೋಡಬಹುದು.

**ಸಾರ್ಜೆಂಟ್ ಸಮಿತಿಯ ಶಿಫಾರಸ್ಸುಗಳು**

* ೬ ರಿಂದ ೧೪ ವರ್ಷದವರೆಗೆ ಪೂರ್ವ ಪ್ರಾಥಮಿಕ ಅಥವಾ ಮೂಲ ಶಿಕ್ಷಣವನ್ನು ಸಾರ್ವತ್ರಿಕವಾಗಿ ಕಡ್ಡಾಯಗೊಳಿಸಬೇಕು.

* ದೈಹಿಕ ಶಿಕ್ಷಣ ಮತ್ತು ಆರೋಗ್ಯ ಶಿಕ್ಷಣವನ್ನು ಕಡ್ಡಾಯವಾಗಿ ಅಳವಡಿಸಬೇಕು.

* ಮನರಂಜನೆ ಮತ್ತು ಸಾಮಾಜಿಕ ಚಟುವಟಿಕೆಗಳಿಗೆ ಹೆಚ್ಚಿನ ಅವಕಾಶ ಕೊಡಬೇಕು.

ಸಾರ್ಜೆಂಟ್ ವರದಿಯು ರಾಷ್ಟ್ರದ ಸಮಗ್ರ ಶಿಕ್ಷಣದ ಅಭಿವೃದ್ಧಿಗೆ ಸಲಹೆ ಮಾಡಿತು. ಕೇಂದ್ರ ಸರ್ಕಾರವು ಪ್ರಧಾನ ಅಂಶಗಳ ಶಿಫಾರಸ್ಸುಗಳನ್ನು ಮತ್ತು ಪ್ರತ್ಯೇಕ ಶಿಕ್ಷಣ ಇಲಾಖೆಯನ್ನು ೧೯೪೫ ರಲ್ಲಿ ಪ್ರಾರಂಭಿಸಿತು. ಸಾರ್ಜೆಂಟ್ ವರದಿಯ ಶಿಫಾರಸ್ಸುಗಳನ್ನು ಪಂಚವಾರ್ಷಿಕ ಯೋಜನೆಗಳಲ್ಲಿ ಅಳವಡಿಸಲಾಗುತ್ತದೆ. ಸದರಿ ವರದಿಯನ್ನು ೧೯೪೬ರಲ್ಲಿ ಆಚರಣೆಗೆ ತರಲಾಯಿತು.

ಸ್ವಾತಂತ್ರ್ಯ ಪೂರ್ವದಿಂದಲೂ ಪ್ರಾಥಮಿಕ ಶಿಕ್ಷಣಕ್ಕೆ ಗಮನ ನೀಡಿತು. ಈ ಹಿನ್ನೆಲೆಯಲ್ಲಿ ಆದಂತಹ ಆಯೋಗಗಳೆಂದರೆ ವುಡ್ಸ್, ಹಂಟರ್, ಹರ್ಟಾಗ್, ಸಾರ್ಜೆಂಟ್, ಸಂವಿಧಾನ ರಚನೆ ಸಂದರ್ಭದಲ್ಲಿನ ವಿಚಾರಗಳು, ೧೯೬೮ರ ಶಿಕ್ಷಣ ನೀತಿ ೧೯೮೬ರ, ರಾಷ್ಟ್ರೀಯ ಶಿಕ್ಷಣ ನೀತಿ, ಕ್ರಿಯಾ ಯೋಜನೆ (೧೯೯೨) ಈ ಎಲ್ಲಾ ಆಯೋಗ ಮತ್ತು ನೀತಿಗಳಲ್ಲಿ ಪ್ರಮುಖವಾಗಿ ಶಾಲಾ ಶಿಕ್ಷಣದ ಸಾರ್ವತ್ರೀಕರಣ ಮತ್ತು ಮಹಿಳಾ ಶಿಕ್ಷಣದ ಬಗ್ಗೆ ಚರ್ಚಿಸುತ್ತಾ, ಇವರಿಗೆ ಅವಶ್ಯಕವಾಗಿರುವ ಸೌಲಭ್ಯಗಳನ್ನು ಕಲ್ಪಿಸಲು ಶಿಫಾರಸ್ಸುಗಳನ್ನು ಮಾಡಿದವು ಎಂದು ಹೇಳಬಹುದು.

### ೩.೬. ಸಂವಿಧಾನ ಜಾರಿಗೆ ಬಂದ ನಂತರದ ಪ್ರಯತ್ನಗಳು

ಸ್ವಾತಂತ್ರ್ಯೋತ್ತರ ಭಾರತದಲ್ಲಿ ಶಿಕ್ಷಣ ಕ್ರಮವನ್ನು ಪುನರ್‌ರಚಿಸಲು ಸರ್ಕಾರ ತೀರ್ಮಾನಿಸಿತು. ಶಿಕ್ಷಣ ಸಾಮಾಜಿಕ ಬದಲಾವಣೆಯ ಹಾಗೂ ರಾಷ್ಟ್ರದ ಪ್ರಗತಿಯ ಪ್ರಧಾನ ಸಾಧನವೆಂಬ ಅಂಶವನ್ನು ಮನಗಂಡು, ಶಿಕ್ಷಣ ರಾಷ್ಟ್ರೀಯ ಅಭಿವೃದ್ಧಿಗೆ ಒಂದು ಬಂಡವಾಳ ಎಂಬುದನ್ನು ಅರಿತು, ಶಿಕ್ಷಣದ ಅಭಿವೃದ್ಧಿಗಾಗಿ ರಾಷ್ಟ್ರ ಹಾಗೂ ರಾಜ್ಯ ಮಟ್ಟಗಳೆರಡರಲ್ಲೂ ಶಿಕ್ಷಣ ವ್ಯವಸ್ಥೆ ಕ್ರಮಗಳನ್ನು ರೂಪಿಸಿ, ಸಲಹೆ ನೀಡಲು, ಸರ್ಕಾರ ಶಿಕ್ಷಣ ಆಯೋಗಗಳನ್ನು ನೇಮಿಸಿತು. ಅವುಗಳಲ್ಲಿ ರಾಧಾಕೃಷ್ಣನ್ ಆಯೋಗ, ಪ್ರಾಥಮಿಕ ಹಾಗೂ ಉನ್ನತ ಶಿಕ್ಷಣದ ಭದ್ರಕೊಂಡಿಯಾದ ಸೆಕೆಂಡರಿ ಶಿಕ್ಷಣವನ್ನು ಉತ್ತಮಪಡಿಸಲು ಡಾ. ಎ. ಲಕ್ಷ್ಮಣಸ್ವಾಮಿ ಮೊದಲಿಯಾರ್ ಅವರ ಅಧ್ಯಕ್ಷತೆಯಲ್ಲಿ ಏರ್ಪಟ್ಟು, ಮೊದಲಿಯಾರ್ ಶಿಕ್ಷಣ, ರಾಷ್ಟ್ರೀಯ ಮಾದರಿ ಶಿಕ್ಷಣ ವ್ಯವಸ್ಥೆಗೆ, ಪರಿಶೀಲಿಸಿ, ಶಿಕ್ಷಣದ ಅಭಿವೃದ್ಧಿಗೆ ಸಲಹೆ, ಸೂಚನೆಗಳನ್ನು ನೀಡಲು ಡಾ. ಕೊಠಾರಿಯವರ ಅಧ್ಯಕ್ಷತೆಯಲ್ಲಿ ನೇಮಕಗೊಂಡ ಕೊಠಾರಿ ಆಯೋಗಗಳು ಮುಖ್ಯವಾದುವು.

### ೩.೭. ೧೯೬೮ರ ಶಿಕ್ಷಣ ನೀತಿ

ಶಿಕ್ಷಣ ಸಮಿತಿಯ ವರದಿಯ ಬಗ್ಗೆ ರಾಷ್ಟ್ರದಾದ್ಯಂತ ಚರ್ಚೆ ಹಾಗೂ ಎಚ್ಚರಿಕೆಯ ಪರಿಶೀಲನೆಗಳು ಆದ ನಂತರ ೧೯೬೮ರಲ್ಲಿ ಕೇಂದ್ರ ಸರ್ಕಾರ ರಾಷ್ಟ್ರೀಯ ಶಿಕ್ಷಣ ನೀತಿಯೊಂದನ್ನು ಘೋಷಿಸಿತು. ಇದು ದೇಶದ ಅಭ್ಯುದಯಕ್ಕೆ ಅನೇಕ ಧ್ಯೇಯಗಳನ್ನು ಹೊಂದಿತು.

* ಹದಿನಾಲ್ಕು ವರ್ಷದವರೆಗಿನ ಎಲ್ಲಾ ಮಕ್ಕಳಿಗೂ ಉಚಿತ ಕಡ್ಡಾಯ ಶಿಕ್ಷಣ ನೀಡುವುದು.
* ಸಾಮಾನ್ಯ ಶಾಲೆಗಳಿಗೆ ಪ್ರೋತ್ಸಾಹ ನೀಡಿ, ಪ್ರಾದೇಶಿಕ ಅಸಮಾನತೆಯನ್ನು ದೂರಮಾಡಿ, ಶಿಕ್ಷಣ ಸೌಲಭ್ಯಗಳನ್ನು ನೀಡಿ, ಸಾಮಾಜಿಕ ಬದ್ಧತೆ ಮತ್ತು ರಾಷ್ಟ್ರೀಯ ಐಕ್ಯತೆಗೆ ಪ್ರೋತ್ಸಾಹಿಸುವುದು.

* ವಿವಿಧ ಕ್ಷೇತ್ರಗಳಲ್ಲಿ ಪ್ರತಿಭೆಯನ್ನು ಗುರುತಿಸಿ, ಪ್ರೋತ್ಸಾಹಿಸುವುದು.

* ಶಾಲಾ ಸಮುದಾಯ ಸಂಬಂಧವನ್ನು ವಿವಿಧ ಕಾರ್ಯಕ್ರಮಗಳಿಂದ ಸಂವರ್ಧಿಸುವುದು.

**೩.೮. ರಾಷ್ಟ್ರೀಯ ಶಿಕ್ಷಣ ನೀತಿ (೧೯೮೬)**

ಈ ನೀತಿಯ ಕೆಲವೊಂದು ಮುಖ್ಯಾಂಶಗಳು.

* ಸಾಮಾಜಿಕ ನ್ಯಾಯ ಹಾಗೂ ಮಾನವೀಯ ಮೌಲ್ಯಗಳ ಕಲ್ಪನೆಗೆ ಬದ್ಧರಾಗುವ ಕಲ್ಪನೆಯನ್ನು ಮೂಡಿಸಬೇಕಾಗಿರುವುದರಿಂದ ಎಲ್ಲ ವಿಧದ ಪ್ರಗತಿಗೆ ಶಿಕ್ಷಣ ಒಂದು ಸಾಧನವಾಗಿರುವುದರಿಂದ ನವಶಿಕ್ಷಣ ನೀತಿ ಅನಿವಾರ್ಯವಾಗಿದೆ ಎಂದು ಹೇಳಿದೆ.

* ಶಿಕ್ಷಣದ ಸಾರ ಮತ್ತು ಪಾತ್ರದ ಬಗ್ಗೆ ಉಲ್ಲೇಖಿಸುತ್ತಾ, ಮಾನವನ ಎಲ್ಲ ರೀತಿಯ ಅಭಿವೃದ್ಧಿಗೆ ಶಿಕ್ಷಣವೇ ಬಂಡವಾಳ ಎಂದು ತಿಳಿಸಿದೆ.

* ಮಹಿಳಾ ಶಿಕ್ಷಣದ ಸಮಾನತೆಗಾಗಿ ಅವರ ಶೈಕ್ಷಣಿಕ ಪ್ರವೇಶದಲ್ಲಿನ ಅಡೆತಡೆಗಳನ್ನು ತಪ್ಪಿಸಿ, ಪ್ರಾಥಮಿಕ ಶಿಕ್ಷಣಕ್ಕೆ ಆದ್ಯತೆ ನೀಡಿ, ವೃತ್ತಿಪರ ಹಾಗೂ ತಾಂತ್ರಿಕ ಶಿಕ್ಷಣ ಕ್ಷೇತ್ರಗಳಲ್ಲಿ ಹೆಚ್ಚು ಹೆಚ್ಚು ಮಹಿಳೆಯರು ಭಾಗವಹಿಸುವಂತೆ ಪ್ರೋತ್ಸಾಹಿಸಿ, ಶಿಕ್ಷಣವನ್ನು ಸ್ತ್ರೀಯರ ಮೂಲಭೂತ ಬದಲಾವಣೆಗೆ ಸಾಧನವನ್ನಾಗಿಸುತ್ತದೆ.

* ಹೊಸ ಶಿಕ್ಷಣ ನೀತಿಯು ಶಿಕ್ಷಣದಲ್ಲಿ ಅಸಮಾನತೆಯನ್ನು ತಪ್ಪಿಸಿ, ಇದುವರೆಗೆ ಶಿಕ್ಷಣದ ಸೌಲಭ್ಯದಿಂದ ವಂಚಿತರಾದ ಮಹಿಳೆಯರಿಗೆ, ಪರಿಶಿಷ್ಟ ಜಾತಿಯವರಿಗೆ, ಪರಿಶಿಷ್ಟ ವರ್ಗದವರಿಗೆ, ಅವರವರ ವಿಶೇಷ ಅವಶ್ಯಕತೆಗೆ ಅನುಗುಣವಾಗಿ, ವಿವಿಧ ಸೌಲಭ್ಯಗಳನ್ನು ಕಲ್ಪಿಸಿ, ವಿವಿಧ ರೀತಿಯ ಶಿಕ್ಷಣ ಮಾಧ್ಯಮ ಕಾರ್ಯಕ್ರಮಗಳಿಂದ ಶೈಕ್ಷಣಿಕ ಸಮಾನತೆಗೆ ಅವಕಾಶ ಕಲ್ಪಿಸುತ್ತದೆ.

* ಪರಿಶಿಷ್ಟ ಜಾತಿಯವರ ಪರಿಶಿಷ್ಟೇತರ ಜಾತಿಯವರೊಡನೆ ಸ್ತ್ರೀ-ಪುರುಷರೊಡನೆ ಸಮಾನತೆ ಸಾಧಿಸಲು ೧೪ ವರ್ಷದವರೆಗಿನ ಮಕ್ಕಳನ್ನು ಶಾಲೆಗೆ ಕಳುಹಿಸಲು ಆಕರ್ಷಿಸಿ, ಮೆಟ್ರಿಕ್ ವಿದ್ಯಾರ್ಥಿವೇತನ ನೀಡಿಕೆ, ಬಾಲವಾಡಿ, ವಿದ್ಯಾರ್ಥಿ ನಿಲಯದ ಸ್ಥಾಪನೆ ಹೀಗೆ ಇವರ ಶಿಕ್ಷಣವನ್ನು ಪ್ರೋತ್ಸಾಹಿಸುತ್ತದೆ.

ಒಟ್ಟಾರೆ ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯು ಪ್ರಾಥಮಿಕ ಶಿಕ್ಷಣಕ್ಕೆ ಪ್ರಾಮುಖ್ಯತೆ ಕೊಟ್ಟು, ಮಹಿಳಾ ಶಿಕ್ಷಣ ಮತ್ತು ಸಮಾನತೆಗಾಗಿ ಹೆಚ್ಚು ಒತ್ತು ನೀಡಿದ್ದನ್ನು ಇದರ ಮುಖ್ಯಾಂಶಗಳಲ್ಲಿ ನೋಡಬಹುದು. ಇದಕ್ಕೆ ಪೂರಕವಾಗಿ ಅನೇಕ ಶೈಕ್ಷಣಿಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ರೂಪಿಸುವ ಉದ್ದೇಶದಿಂದ ೧೯೯೨ರಲ್ಲಿ ಕ್ರಿಯಾಯೋಜನೆಯನ್ನು ಮಾಡಲಾಯಿತು. ಈ ಕ್ರಿಯಾಯೋಜನೆಯ ಆಧಾರದ ಮೇಲೆ ಬಹುತೇಕ ಶೈಕ್ಷಣಿಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ರೂಪಿಸಿ ಜಾರಿಗೆ ತರಲಾಯಿತು.

ಸ್ವಾತಂತ್ರ್ಯ ನಂತರ ಪ್ರಜಾಪ್ರಭುತ್ವ ವ್ಯವಸ್ಥೆಯ ಬಲವರ್ಧನೆಗೆ ಶಾಲಾ ಶಿಕ್ಷಣದ ಅವಶ್ಯಕತೆ ಮತ್ತು ಮಹತ್ವವನ್ನು ಮನಗಂಡ ಸಂವಿಧಾನದ ರಚನಾಕಾರರು, ೧೪ವರ್ಷದೊಳಗಿನ ಎಲ್ಲಾ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ನೀಡುವ ಆಶಯ ಹೊಂದಿದ್ದರು. ಸಂವಿಧಾನದ ೪ನೇ ಅಧ್ಯಾಯದ ರಾಜ್ಯ ನಿರ್ದೇಶಕ ತತ್ವ ೪೫ನೇ ಪರಿಚ್ಛೇದದಲ್ಲಿ ಸೇರಿಸಲಾದ ಒಂದೇ ಒಂದು ಕಾಲಮಿತಿಯ ಕಾರ್ಯಕ್ರಮವೆಂದರೆ, ಸಂವಿಧಾನ ಜಾರಿಗೆ ಬಂದ ೧೦ ವರ್ಷದಲ್ಲಿ ಎಲ್ಲಾ ಮಕ್ಕಳಿಗೂ ಉಚಿತ ಕಡ್ಡಾಯ ಶಿಕ್ಷಣ ನೀಡಬೇಕು ಎಂಬುದಾಗಿತ್ತು. ಅದರ ಪ್ರಕಾರ ೧೯೬೦ರ ಮೊದಲು ಭಾರತದಲ್ಲಿ ಇದ್ದಂತಹ ೬ ರಿಂದ ೧೪ರ ವಯೋಮಾನದ ಪ್ರತಿಯೊಂದು ಮಗುವು ಶಿಕ್ಷಣವನ್ನು ಪಡೆಯಬೇಕಾಗಿತ್ತು. ಆಗಿನ ಅಂಕಿ-ಸಂಖ್ಯೆಗಳನ್ನು ತೆಗೆದುಕೊಂಡರೆ ಸುಮಾರು ಶೇಕಡ ೬೦ ರಿಂದ ೭೦ರಷ್ಟು ಮಕ್ಕಳು ಶಾಲೆಯಿಂದ ಹೊರಗುಳಿದಿದ್ದರು.

೧೯೬೦ರ ನಂತರ ಏಕೆ ನಮ್ಮ ಶಿಕ್ಷಣ ವ್ಯವಸ್ಥೆ ಉದ್ದೇಶಿತ ಗುರಿಯನ್ನು ಸಂವಿಧಾನದ ಆಶಯದಂತೆ ಈಡೇರಿಸಲಿಕ್ಕೆ ಆಗಲಿಲ್ಲವೆಂದರೆ, ಮೂಲಭೂತ ವ್ಯವಸ್ಥೆಯಲ್ಲಿ ಏನೋ ದೋಷವಿರಬಹುದು ತಿಳಿಯಲಾಯಿತು. ಇದನ್ನು ಅರ್ಥಮಾಡಿಕೊಳ್ಳುವ ಉದ್ದೇಶದಿಂದ ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿನ ಲೋಪ-ದೋಷಗಳೇನೆಂಬುದನ್ನು ತಿಳಿಯಲು ಶಿಕ್ಷಣ ವ್ಯವಸ್ಥೆಯ ಸಮಗ್ರ ಅಧ್ಯಯನಕ್ಕಾಗಿ ಆಯೋಗವನ್ನು (ಕಮೀಷನ್) ಜುಲೈ ೧೪, ೧೯೬೪ರಲ್ಲಿ ರಚನೆ ಮಾಡಲಾಯಿತು. ಅದನ್ನು ಕೊಠಾರಿ ಶಿಕ್ಷಣ ಆಯೋಗವೆಂದು ಕರೆಯಲಾಯಿತು. ಡಾ. ಕೊಠಾರಿ ಅವರ ಅಧ್ಯಕ್ಷತೆಯಲ್ಲಿ ಈ ಆಯೋಗವು ೧೯೬೪-೬೬ರ ಅವಧಿಯಲ್ಲಿ ನಮ್ಮ ಶೈಕ್ಷಣಿಕ ವ್ಯವಸ್ಥೆಯನ್ನು (ಕಾನೂನು ಮತ್ತು ವೈದ್ಯಕೀಯ ಶಿಕ್ಷಣ ಹೊರತುಪಡಿಸಿ) ಸಮಗ್ರವಾಗಿ ಅಧ್ಯಯನ ಮಾಡಿ, ತನ್ನ ವರದಿಯನ್ನು ನಾಲ್ಕು ಸಂಪುಟಗಳಲ್ಲಿ ಸಲ್ಲಿಸಿತ್ತು. ಇದನ್ನು ಕೊಠಾರಿ ಶಿಕ್ಷಣದ ವರದಿ ಎಂದು ಕರೆಯಲಾಯಿತು. ಇದು ಇಂದಿಗೂ 'ಇಂಡಿಯಾದ ಶೈಕ್ಷಣಿಕ ವ್ಯವಸ್ಥೆಯ ಬೈಬಲ್'. ಇವತ್ತು ನಮ್ಮೆಲ್ಲಾ ಶೈಕ್ಷಣಿಕ ತೀರ್ಮಾನಗಳು ಹಾಗೂ ಎಲ್ಲಾ ಶೈಕ್ಷಣಿಕ ಅಭಿವೃದ್ಧಿ ಕಾರ್ಯಕ್ರಮಗಳು ರೂಪುಗೊಳ್ಳುತ್ತಿರುವುದು ಕೊಠಾರಿ ಆಯೋಗದ ಆಧಾರದ ಮೇಲೆ ಈ ಆಯೋಗವು ಸಂವಿಧಾನದ ಉದ್ದೇಶವನ್ನು ಪರಿಣಾಮಕಾರಿಯಾಗಿ ಈಡೇರಿಸಲಾಗಲಿಲ್ಲ. ಇದನ್ನು ಕನಿಷ್ಠ ೧೯೭೬ರ ಒಳಗೆ ಈಡೇರಿಸಬೇಕೆಂದು ಹೇಳಿತು. ರಾಷ್ಟ್ರೀಯ ಒಟ್ಟು ಉತ್ಪನ್ನದಲ್ಲಿ ಶಿಕ್ಷಣಕ್ಕೆ ಶೇಕಡ ೬ರಷ್ಟು ಹಣವನ್ನು ಮೀಸಲಿಡಲಾಯಿತು. ಒಟ್ಟಾರೆ ದೇಶದ ಶಾಲಾ ಶಿಕ್ಷಣ ವ್ಯವಸ್ಥೆ ಮತ್ತು ತರಗತಿಯೊಳಗೆ ನಡೆಯುವ ಬೋಧನಾ ಮತ್ತು ಕಲಿಕಾ ಚಟುವಟಿಕೆಯ ಆಧಾರದ ಮೇಲೆ ಎಂದು ಒತ್ತಾಯ ಪೂರಕವಾದ ವರದಿ ನೀಡಿತು. ಈ ವರದಿಯ ಆಧಾರದ ಮೇಲೆ ನಮ್ಮಲ್ಲಿ ಮೊದಲ ಶಿಕ್ಷಣ ನೀತಿ ಜಾರಿಗೆ ಬಂದಿದ್ದು ೧೯೬೮ರಲ್ಲಿ ಅದರ ಸ್ವರೂಪ ಸಂಪೂರ್ಣವಾಗಿ ಕೊಠಾರಿ ಆಯೋಗದ ವರದಿಯ ಹಿನ್ನೆಲೆಯಲ್ಲಿ ರೂಪಿತವಾಗಿದೆ. ಅಲ್ಲಿಯವರೆಗೆ (೧೯೫೦-೧೯೬೮) ಅಂದರೆ ಸಂವಿಧಾನ ಜಾರಿಗೆ ಬಂದ ೧೮ ವರ್ಷಗಳ ಕಾಲ ಸಂವಿಧಾನದ ಆಶಯವನ್ನು ಈಡೇರಿಸಲಿಕ್ಕೆ ನಮ್ಮ ದೇಶದಲ್ಲಿ ಒಂದು ಶಿಕ್ಷಣ ನೀತಿ ಇರಲಿಲ್ಲವೆಂಬುದು

ಗಮನಾರ್ಹವೇ ಸರಿ. ಈ ವರದಿಯ ಆಧಾರದ ಮೇಲೆಯೇ ೧೯೬೮ರಲ್ಲಿ ರಾಷ್ಟ್ರೀಯ ಶಿಕ್ಷಣ ನೀತಿಯನ್ನು ರೂಪಿಸಿ ಜಾರಿಗೊಳಿಸಲಾಯಿತು.

ನಂತರ ೧೯೮೬ರಲ್ಲಿ, ೧೯೬೮ರ ಶಿಕ್ಷಣ ನೀತಿಯನ್ನು ಪರಿಷ್ಕರಿಸಿದ ಸರ್ಕಾರ ಕೆಲವು ಹೊಸ ಆಯಾಮಗಳೊಂದಿಗೆ ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯನ್ನು ರೂಪಿಸಿತು. ಇದಕ್ಕೆ ಮೊದಲು ೧೯೭೦-೭೬ ಶಿಕ್ಷಣವನ್ನು ಸಮವರ್ತಿತ ಪಟ್ಟಿಯಲ್ಲಿ ಸೇರಿಸಲಾಯಿತು. ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯನ್ನು ೧೯೯೨ರ ಶ್ರೀ ಆಚಾರ್ಯ ರಾಮಮೂರ್ತಿ ಅವರ ನೇತೃತ್ವದಲ್ಲಿ ಪುನರ್ ಪರಿಷ್ಕರಣೆಗೊಳಿಸಿ, ರಾಷ್ಟ್ರೀಯ ಶಿಕ್ಷಣ ನೀತಿಯ ಕ್ರಿಯಾ ಯೋಜನೆ ೧೯೯೨ರಲ್ಲಿ ಸಂಸತ್ತಿನಲ್ಲಿ ಅಂಗೀಕಾರವನ್ನು ಪಡೆಯಿತು. ಈ ಎಲ್ಲಾ ಬೆಳವಣಿಗೆಗಳ ನಡುವೆಯೂ ೧೯೬೦ಕ್ಕೆ ಪೂರ್ಣಗೊಳ್ಳಬೇಕಿದ್ದ ಸಂವಿಧಾನದ ಆಶಯವು ಅನೇಕ ಬಾರಿ ಮುಂದೂಡಲ್ಪಟ್ಟಿತ್ತು. ಸಂವಿಧಾನ ಜಾರಿಯಾದ ೬೧ ವರ್ಷಗಳ ನಂತರವೂ ಈ ಗುರಿಯನ್ನು ಮುಟ್ಟದಿರುವುದು ಒಂದು ವಿಪರ್ಯಾಸವಾಗಿದೆ.

೧೯೯೦ರ ನಂತರ ನಮ್ಮ ಸರ್ಕಾರಗಳು ಶಾಲಾ ಶಿಕ್ಷಣದ ಸಾರ್ವತ್ರೀಕರಣಕ್ಕೆ ಅಂತರಾಷ್ಟ್ರೀಯ ಮಟ್ಟದ ಒತ್ತಡಗಳನ್ನು ಮತ್ತು ಸಹಯೋಗಗಳನ್ನು ಪಡೆಯಲು ಪ್ರಯತ್ನ ನಡೆಸಿತು. ೧೯೯೦ರ ಮಾರ್ಚ್‌ನಲ್ಲಿ 'ಜಾಮ್‌ಟೈ'ನಲ್ಲಿ ನಡೆದ ವಿಶ್ವ ಶೈಕ್ಷಣಿಕ ಸಮಾವೇಶದಲ್ಲಿ ೨೦೦೦ದ ಒಳಗೆ ಎಲ್ಲರಿಗೂ ಶಿಕ್ಷಣವನ್ನು ನೀಡುತ್ತೇವೆ ಎನ್ನುವ ವಾಗ್ದಾನವನ್ನು ನಮ್ಮ ಸರ್ಕಾರಗಳು ಮಾಡಿದವು. ಈ ಹಿನ್ನೆಲೆಯಲ್ಲಿ ಅಂತರಾಷ್ಟ್ರೀಯ ಹಣಕಾಸು ಸಹಯೋಗವು ನಮ್ಮ ಶೈಕ್ಷಣಿಕ ಅಭಿವೃದ್ಧಿಗೆ ಸಹಾಯಕವಾಯಿತು. ಕೇಂದ್ರ ಸರ್ಕಾರದ ಸಹಯೋಗದೊಂದಿಗೆ ಎರಡು ಪ್ರಮುಖವಾದಂತಹ ಕಾರ್ಯಕ್ರಮಗಳನ್ನು ಜಾರಿಗೆ ತರಲಾಯಿತು. ಒಂದು, ಶಿಕ್ಷಕರಿಗೆ ಪುನರ್‌ಮನನ ಕಾರ್ಯಕ್ರಮಗಳು (ಸೇವಾನಿರತ ತರಬೇತಿಗಳು). ಎರಡು, ಅನೌಪಚಾರಿಕ ಶಿಕ್ಷಣ. ಇದೇ ಸಂದರ್ಭದಲ್ಲಿ ಆಂಧ್ರ ಪ್ರದೇಶದ ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮ (೧೯೮೯); ಬಿಹಾರ್ ಶಿಕ್ಷಣ ಕಾರ್ಯಕ್ರಮ (೧೯೯೧); ಉತ್ತರ ಪ್ರದೇಶ ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮ (೧೯೯೩); ಕಪ್ಪು ಹಲಗೆ ಕಾರ್ಯಕ್ರಮ ಈ ಎಲ್ಲಾ ಕಾರ್ಯಕ್ರಮಕ್ಕೆ ಸ್ವಲ್ಪಮಟ್ಟಿನ ಹಣಕಾಸಿನ ಸಹಯೋಗ ದೊರಕಿತ್ತು. ಆದರೆ ಸಂಪೂರ್ಣವಾಗಿ ಅಂತರಾಷ್ಟ್ರೀಯ ಸಹಯೋಗದೊಂದಿಗೆ ಜಾರಿಗೆ ಬಂದ ಕಾರ್ಯಕ್ರಮವೆಂದರೆ "ಜಿಲ್ಲಾ ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮ" (ಡಿ.ಪಿ.ಇ.ಆರ್.); ಈ ಕಾರ್ಯಕ್ರಮ ಪ್ರಾಥಮಿಕ ಶಾಲಾ ಶಿಕ್ಷಣ ಸಮಸ್ಯೆಗಳನ್ನು ಮತ್ತು ಸವಾಲುಗಳನ್ನು ಪರಿಹರಿಸುವ ದೃಷ್ಟಿಯಿಂದ ನಿರ್ದಿಷ್ಟವಾದಂತಹ ಕೆಲವು ಗುರಿಗಳನ್ನು ಹೊಂದಿತ್ತು. ಜಿಲ್ಲಾ ಪ್ರಾಥಮಿಕ ಕಾರ್ಯಕ್ರಮಕ್ಕೆ ಯುನಿಸೆಫ್, ಯುಎನ್‌ಡಿಪಿ, ಓಡಿಎ, ಎಸ್‌ಐಡಿಎ ಇವುಗಳಿಂದ ಹಣಕಾಸಿನ ಸಹಯೋಗವನ್ನು ಪಡೆದುಕೊಳ್ಳಲಾಯಿತು. ಈ ಕಾರ್ಯಕ್ರಮವನ್ನು ದೇಶದ ೨೭೦ ಜಿಲ್ಲೆ ಹಾಗೂ ೧೮ ರಾಜ್ಯಗಳಲ್ಲಿ ಜಾರಿಗೆ ತರಲಾಯಿತು.

ನಂತರ ೨೦೦೧ರಲ್ಲಿ ಶಾಲಾ ಶಿಕ್ಷಣವನ್ನು ೨೦೧೦ರ ಒಳಗೆ ೧೪ರ ವಯೋಮಾನದ ಎಲ್ಲಾ ಮಕ್ಕಳಿಗೆ ಗುಣಮಟ್ಟದ ಶಿಕ್ಷಣ ನೀಡಬೇಕು ಎನ್ನುವ ಉದ್ದೇಶದಿಂದ ಸರ್ವಶಿಕ್ಷಣ ಅಭಿಯಾನ

ಕಾರ್ಯಕ್ರಮವನ್ನು ಜಿಲ್ಲಾ ಪ್ರಾಥಮಿಕ ಶಿಕ್ಷಣಕ್ಕೆ (ಡಿ.ಪಿ.ಇ.ಆರ್) ಮುಂದುವರಿಕೆಯಾಗಿ ಜಾರಿಗೊಳಿಸಲಾಗಿದೆ. ಸರ್ವಶಿಕ್ಷಣ ಅಭಿಯಾನ ಕೂಡ ಅಂತರಾಷ್ಟ್ರೀಯ ನೆರವಿನಿಂದ ನಡೆಯುತ್ತಿರುವ ಕಾರ್ಯಕ್ರಮವಾಗಿದೆ.

ಹೀಗೆ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಪ್ರಯತ್ನಗಳ ಜೊತೆ-ಜೊತೆಯಾಗಿ ಸಾಗುತ್ತಿದ್ದ ಸಂದರ್ಭದಲ್ಲಿ ಭಾರತದ ಸರ್ವೋಚ್ಚ ನ್ಯಾಯಾಲಯವು ಶಾಲಾ ಶಿಕ್ಷಣವನ್ನು ಮೂಲಭೂತ ಹಕ್ಕು ಎಂದು ಘೋಷಿಸುವ ಮೂಲಕ, ಈ ಎಲ್ಲಾ ಪ್ರಯತ್ನಗಳಿಗೆ ಒಂದು ಹೊಸ ತಿರುವನ್ನು ನೀಡಿತ್ತು. ಇದು ಶಿಕ್ಷಣ ವಂಚಿತ ಮಕ್ಕಳ ಬದುಕಿನಲ್ಲಿ ಒಂದು ಹೊಸ ಆಶಾಭಾವನೆಯನ್ನು ಮೂಡಿಸಿತು. ಆಂಧ್ರಪ್ರದೇಶ ಸರ್ಕಾರ ಮತ್ತು ಉನ್ನಿಕೃಷ್ಣನ್ ಅವರ ಮೊಕದ್ದಮೆಗೆ ಸಂಬಂಧಿದಂತೆ ೧೯೯೩ರ ಶಿಕ್ಷಣ ಮೂಲಭೂತ ಹಕ್ಕು ಎನ್ನುವುದನ್ನು ಸರ್ವೋಚ್ಚ ನ್ಯಾಯಾಲಯ ತೀರ್ಪು ನೀಡಿತು. ಈ ತೀರ್ಪಿನ ಪ್ರಮುಖ ಸಾರಾಂಶ ಸಂವಿಧಾನದ ಪರಿಚ್ಛೇದ ೪೫ ಏನು ಹೇಳುತ್ತದೆಯೆಂದರೆ ಮಗುವನ್ನು ಶಾಲೆಗೆ ಕರೆದುಕೊಂಡು ಬರುವುದು ಒಳ್ಳೆಯ ಉದ್ದೇಶದಿಂದ, ಆದರೆ ಆ ಮಗು ಕಲಿಯದೇ ಮಧ್ಯದಲ್ಲಿ ಶಾಲೆಗೆ ಬರಲಿಲ್ಲವೆಂದರೆ ಏನು ಮಾಡಲಿಕ್ಕೆ ಆಗೋಲ್ಲ ಎಂದು ಆಂಧ್ರ ಪ್ರದೇಶದ ಶಿಕ್ಷಣ ಇಲಾಖೆ ವಾದಿಸಿತ್ತು. ಈ ದೃಷ್ಟಿಕೋನ ಹೊಂದಿದ್ದ ಪರಿಚ್ಛೇದ ೪೫ನ್ನು ಪ್ರಶ್ನೆ ಮಾಡಿ ಸರ್ವೋಚ್ಚ ನ್ಯಾಯಾಲಕ್ಕೆ ಹೋದಾಗ ನ್ಯಾಯಾಲಯ ಏನು ನಿರ್ದೇಶನ ಮಾಡಿತ್ತೆಂದರೆ ಪರಿಚ್ಛೇದದ ೨೧ರ ಪ್ರಕಾರ ಎಲ್ಲರಿಗೂ ಜೀವಿಸುವ ಹಕ್ಕು ಇರುವ ಹಾಗೇ ಶಿಕ್ಷಣವನ್ನು ಪಡೆದುಕೊಳ್ಳುವುದು ನಮ್ಮ ಮೂಲಭೂತ ಹಕ್ಕು ಎಂದು ಹೇಳಿತು. ಪರಿಚ್ಛೇದ ೪೫ನ್ನು ೨೧ರ ಜೊತೆ ಸೇರಿಸಿಕೊಂಡು ಪರಿಚ್ಛೇದ ೨೧(ಎ)ರಲ್ಲಿ ಇದನ್ನು ಸೇರಿಸಲಾಯಿತು. ಯಾವಾಗ ಶಿಕ್ಷಣ ಮೂಲಭೂತ ಹಕ್ಕಾಯಿತೋ ಆಗ ಸರ್ಕಾರಗಳಿಗೆ ಶಾಲಾ ಶಿಕ್ಷಣ ಅಭಿವೃದ್ಧಿಗೆ ಹೆಚ್ಚಿನ ಆಸಕ್ತಿ ಬರಲು ಬೇರೆ ಎಲ್ಲಾ ಕಾರಣಗಳಿಗಿಂತಲೂ ಸುಪ್ರೀಂಕೋರ್ಟ್ ಶಾಲಾ ಶಿಕ್ಷಣ 'ಮೂಲಭೂತ ಹಕ್ಕು' ಎಂದು ಪರಿಗಣಿಸಿದ್ದು ಅತ್ಯಂತ ಪ್ರಮುಖವಾಯಿತು. ಇವತ್ತು ಶಾಲಾ ಶಿಕ್ಷಣ ಮೂಲಭೂತ ಹಕ್ಕನ್ನು ಕಸಿದುಕೊಂಡರೆ ಅದಕ್ಕೆ ಕಾನೂನಿನ ಚೌಕಟ್ಟಿನಲ್ಲಿ ಶಿಕ್ಷೆ ಇದೆ. ಹಾಗಾಗಿ ಶಿಕ್ಷಣಕ್ಕೆ ಹೊಸ ದೃಷ್ಟಿಕೋನ ಬಂದಿದ್ದು ೧೯೯೩ರ ಸರ್ವೋಚ್ಚ ನ್ಯಾಯಾಲಯದ ತೀರ್ಪಿನ ನಂತರ ಕೇಂದ್ರ ಸರ್ಕಾರ ಕಾನೂನಿನ ಮೂಲಕ ಸೂಕ್ತವೆನಿಸಿದ ನಿರ್ಧಾರ ಕೈಗೊಂಡು ೦೬-೧೪ರ ವಯೋಮಾನದ ಎಲ್ಲಾ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣ ನೀಡಬೇಕೆಂಬುದನ್ನು ಸಂವಿಧಾನ ಪರಿಚ್ಛೇದ ೨೧(ಎ) ಕೆಳಗೆ ಇದನ್ನು ಸೇರಿಸಲಾಯಿತು. ಇದಕ್ಕೆ ೮೬ರ ಸಂವಿಧಾನ ಕಾಯ್ದೆ ಹಾಗೂ ೯೩ರ ಕಾಯ್ದೆ ಮತ್ತು ಗೊತ್ತುವಳಿಗಳು ರಾಷ್ಟ್ರಪತಿಗಳ ಅನುಮೋದನೆಯೊಂದಿಗೆ ಕಾಯ್ದೆಯಾಗಿದೆ.

ಈ ಕಾಯ್ದೆ ಆಚರಣೆಗೆ ಬರಬೇಕಾದರೆ ಕೇಂದ್ರ ಸರ್ಕಾರವು ಶಾಸನವನ್ನು ರೂಪಿಸಿ ಜಾರಿಗೊಳಿಸಬೇಕು. ಶಾಸನ ರೂಪಿಸಿದ ಪ್ರಕ್ರಿಯೆಗೆ ೨೦೦೩ರಲ್ಲಿ ಚಾಲನೆ ದೊರೆಯಿತು. ಪ್ರಾರಂಭದಲ್ಲಿ ಮಕ್ಕಳ ಉಚಿತ ಮತ್ತು ಕಡ್ಡಾಯ ಶಿಕ್ಷಣ ಮಸೂದೆ ೨೦೦೪ ಎಂಬ ಹೆಸರಿನಲ್ಲಿ ಕರಡು ಪ್ರತಿ

ತಯಾರಿಸಿ ಚರ್ಚಿಸಲಾಯಿತು. ಈ ಎರಡು ಕರಡು ಮಸೂದೆಗಳಲ್ಲಿ ಇದ್ದ ಲೋಪದೋಷಗಳ ಬಗ್ಗೆ ಶಿಕ್ಷಣ ಆಸಕ್ತರು, ಸಂಶೋಧಕರು ಮತ್ತು ನಾಗರಿಕ ಸಮಾಜ ಹಲವಾರು ಆಕ್ಷೇಪಗಳನ್ನು ಎತ್ತಿದ್ದರಿಂದ ಎರಡು ಮಸೂದೆಗಳು ಸಂಸತ್ತಿನಲ್ಲಿ ಮಂಡನೆಯಾಗಲಿಲ್ಲ.

ನಂತರ ಬದಲಾದ ರಾಜಕೀಯ ಪರಿಸ್ಥಿತಿಯನ್ನು ಎನ್.ಡಿ.ಎ. ಸರ್ಕಾರದ ಬದಲಾಗಿ ಯು.ಪಿ.ಎ. ಸರ್ಕಾರ ಅಧಿಕಾರಕ್ಕೆ ಬಂದಿದ್ದನ್ನು ಬಳಸಿಕೊಂಡ ಹೊರಗಿನ ಮತ್ತು ಒಳಗಿನ ಕೆಲವು ಪಟ್ಟಭದ್ರ ಹಿತಾಸಕ್ತಿಗಳು ಈ ಮಸೂದೆ ೨೦೦೫ರ ತಲೆಬರಹದಲ್ಲಿ, ನಂತರ ಅದನ್ನು ಮಾದರಿ ಶಿಕ್ಷಣ ಹಕ್ಕು ಮಸೂದೆ ೨೦೦೬ ಎಂದು ರೂಪಿಸಲಾಯಿತು. ಅಲ್ಲದೇ ಇದನ್ನು ಮಾದರಿ ಶಿಕ್ಷಣ ಮಸೂದೆ ಜಾರಿಗೆ ತಂದ ರಾಜ್ಯ ಸರ್ಕಾರಗಳಿಗೆ ಸರ್ವಶಿಕ್ಷಣ ಅಭಿಯಾನದ ಮೂಲಕ ಶೇಕಡ ೭೫.೨೫ರ ಅನುಪಾತದ ಹಣವನ್ನು ಶೇಕಡ ೫೦.೫೦ಕ್ಕೆ ಇಳಿಸಲಾಗುತ್ತಿದೆ ಎಂಬ ಹೆದರಿಕೆ ಕೂಡ ರಾಜ್ಯ ಸರ್ಕಾರಕ್ಕೆ ಕೇಂದ್ರ ಸರ್ಕಾರ ನೀಡಿದೆ. ಇದಕ್ಕೆ ಅನೇಕ ಒತ್ತಡಗಳು ಕಾರಣವಾಗಿವೆ. ಇವತ್ತು ಜಾಗತೀಕರಣ, ಖಾಸಗೀಕರಣ ಹಾಗೂ ಉದಾರೀಕರಣದ ಹಿನ್ನೆಲೆಯಲ್ಲಿ ಎಲ್ಲವನ್ನೂ ಒಂದು ಮಾರಾಟ ವಸ್ತುವನ್ನಾಗಿ ಮಾಡುವಂತಹ ಹುನ್ನಾರುಗಳು ಕೂಡ ನಡೆಯುತ್ತಿವೆ.

ಕಳೆದ ೬೧ ವರ್ಷಗಳಲ್ಲಿ ಪ್ರಜಾಪ್ರಭುತ್ವ ಮಾದರಿಯಲ್ಲಿ ಕಟ್ಟಿ ಬೆಳೆಸಿರುವ ನಮ್ಮ ಶಾಲಾ ಶಿಕ್ಷಣ ವ್ಯವಸ್ಥೆಯನ್ನು ಹೇಗೆ ಉಳಿಸಿಕೊಳ್ಳಬೇಕು ಎಂಬುದನ್ನು ಬಹಳ ಗಂಭೀರವಾಗಿ ಪರಿಗಣಿಸಬೇಕಾಗಿದೆ. ನಮ್ಮ ೬೧ ವರ್ಷಗಳ ಶಾಲಾ ಶೈಕ್ಷಣಿಕ ನೀತಿ-ನಿಯಮಗಳು ಹಾಗೂ ಕಾರ್ಯಕ್ರಮಗಳಲ್ಲಿ ನಾವು ಅನೇಕ ತಪ್ಪು ಹೆಜ್ಜೆಗಳನ್ನು ಇಟ್ಟಿರಬಹುದು. ಆದರೆ ಆ ತಪ್ಪು ಹೆಜ್ಜೆಗಳನ್ನು ಸಾರ್ವತ್ರಿಕ ಮನೋಭಾವನೆಯಿಂದ ಪ್ರಜಾಪ್ರಭುತ್ವ ಮಾದರಿಯಲ್ಲಿ ಚರ್ಚಿಸಿ ನಮ್ಮ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳುವ ಪ್ರಯತ್ನವನ್ನು ನಾವು ನಿರಂತರವಾಗಿ ಮಾಡುತ್ತಿದ್ದೇವೆ. ಆದರೆ ಈಗ ಸರ್ಕಾರಿ ಶಾಲೆಗಳಲ್ಲಿ ಗುಣಮಟ್ಟವೇ ಇಲ್ಲ ಎನ್ನುವ ಪ್ರಚಾರವನ್ನು ಉದ್ದೇಶಪೂರಕವಾಗಿ ಮಾಡುತ್ತಿರುವ ದೊಡ್ಡ ದೊಡ್ಡ ಫೌಂಡೇಷನ್‌ಗಳ ಹಿನ್ನೆಲೆಯನ್ನು ಗಮನಿಸಿದರೆ, ಅಲ್ಲಿ ಬಂಡವಾಳಶಾಹಿಗಳ ಹಿತಾಸಕ್ತಿ ಇರುವುದು ಕಂಡುಬರುತ್ತದೆ. ಈಗಾಗಲೇ ನಮ್ಮ ರಾಷ್ಟ್ರದ ಯೋಜನಾ ಆಯೋಗದ ಉಪಾಧ್ಯಕ್ಷರಾದ ಮಾನ್‌ಟೆಕ್‌ಸಿಂಗ್ ಅಹ್ಲುವಾಲಿಯ ಅವರು ೧೧ನೇ ಪಂಚವಾರ್ಷಿಕ ಯೋಜನೆ ಕುರಿತು ಚರ್ಚೆ ನಡೆಸುವ ಸಂದರ್ಭದಲ್ಲಿ ಶಾಲಾ ಶಿಕ್ಷಣದಲ್ಲಿ ನಾವು ಇನ್ನು ಮುಂದೆ ವೋಚರ್ ಸಿಸ್ಟಮ್‌ನ್ನು ತರುತ್ತೇವೆ ಎಂದು ಹೇಳಿದ್ದಾರೆ. ವೋಚರ್ ಸಿಸ್ಟಮ್ ಎಂದರೆ ಒಂದು ಮಗು ಸರ್ಕಾರಿ ಶಾಲೆಯಲ್ಲಿ ಓದಲಿಕ್ಕೆ ಎಷ್ಟು ಹಣ ಖರ್ಚಾಗುತ್ತದೆ ಎಂಬುದನ್ನು ಲೆಕ್ಕಾಚಾರ ಮಾಡಲಾಗುವುದು. ಅದನ್ನು ಕೂಪನ್ ರೀತಿಯಲ್ಲಿ ಮಗುವಿನ ತಂದೆ ತಾಯಿಯವರಿಗೆ ಕೊಡಲಾಗುತ್ತದೆ. ಅದನ್ನು ತೆಗೆದುಕೊಂಡು ಎಲ್ಲಿ ಬೇಕಾದರೂ ಅವರು ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸಬಹುದು ಅಥವಾ ಸರ್ಕಾರಿ ಶಾಲೆಗಳನ್ನು ಬಿಟ್ಟು ಖಾಸಗಿ ಶಾಲೆಗೆ ಬೇಕಾದರೂ ಹೋಗಬಹುದು.

ಅದು ಯಾವ ಬಗೆಯ ಅಪಾಯವನ್ನು ಉಂಟುಮಾಡುತ್ತದೆಯೆಂದರೆ ೬೦೦; ೭೦೦; ೧೦೦೦ ರೂಪಾಯಿಗಳ ವೋಚರ್ ಪಡೆದುಕೊಂಡು ಸರ್ಕಾರಿ ಶಾಲೆಯನ್ನು ಬಿಟ್ಟು ಹೋಗುತ್ತೇವೆ ಎಂದು ಊಹಿಸಿಕೊಳ್ಳಿ, ಎರಡು ಮೂರು ತಿಂಗಳ ನಂತರ ಅಥವಾ ಆರು ತಿಂಗಳ ನಂತರ ಖಾಸಗಿ ಶಾಲೆಗಳು ೧೩೦೦, ೧೫೦೦, ೨೦೦೦ ರೂಪಾಯಿಗಳನ್ನು ಕೇಳಿದಾಗ ಇದನ್ನು ಪೋಷಕರು ಕೊಡಲಿಕ್ಕೂ ಆಗದೇ ಮಗುವನ್ನು ಆ ಕಡೆ ಸರ್ಕಾರಿ ಶಾಲೆಗೂ ಕಳುಹಿಸಲಾಗದೇ, ಇಂಥ ಖಾಸಗಿ ಶಾಲೆಯಲ್ಲಿಯೂ ಮಗುವಿನ ಅವಕಾಶವಿಲ್ಲದೇ ಮಗುವನ್ನು ಬೀದಿಯಲ್ಲಿ ಬಿಸಾಡಬೇಕಾಗುತ್ತದೆ. ಇದು ಈಗಾಗಲೇ ಲ್ಯಾಟಿನ್ ಅಮೇರಿಕಾದ ಬೇರೆ ಬೇರೆ ದೇಶಗಳಲ್ಲಿ ಆಗಿರುವಂತಹ ಬಹುದೊಡ್ಡ ಅನಾಹುತ. ಇನ್ನು ನಮ್ಮ ರಾಷ್ಟ್ರದ ನಗರ ಪ್ರದೇಶದಲ್ಲಿರುವ ಬಹುಸಂಖ್ಯಾತ ಗ್ರಾಮೀಣ ಪ್ರದೇಶದ ಬಡಮಕ್ಕಳಿಗೆ ಪ್ರಜಾಸತ್ತಾತ್ಮಕ ಮಾದರಿಯಲ್ಲಿ ಶಿಕ್ಷಣ ಒದಗಿಸಿಕೊಡಲು ಸಾಧ್ಯವೇ? ಈಗಾಗಲೇ ಇರುವ ಪ್ರಜಾಸತ್ತೆ ಯನ್ನು ಜಾತಿ, ಸ್ವಜನಾತ್ಮಕ ಪಕ್ಷಪಾತ, ಧರ್ಮ ಎಲ್ಲವೂ ಬೇರೂರಿರುವಾಗ ಪ್ರಜಾಪ್ರಭುತ್ವ ಮಾದರಿ ಯಲ್ಲಿ ನಾವು ಈಗಾಗಲೇ ಕಟ್ಟಿ ಬೆಳೆಸಿರುವಂತಹ ಶಾಲಾ ಶಿಕ್ಷಣ ವ್ಯವಸ್ಥೆಯನ್ನು ಪ್ರಜಾಪ್ರಭುತ್ವ ಮಾದರಿಯಲ್ಲಿ ಉಳಿಸಿಕೊಳ್ಳುವುದು ನಮ್ಮೆಲ್ಲರ ಬಹುದೊಡ್ಡ ಕರ್ತವ್ಯವಾಗಿದೆ. ಇಲ್ಲದೇ ಹೋದರೆ ಈ ಜಾಗತೀಕರಣ ಎನ್ನುವ ಒಂದು ಬೃಹತ್ ಅಲೆಯಲ್ಲಿ ನಾವು ಕಣ್ಮರೆಯಾಗಬಹುದು. ಈ ಜಾಗತೀ ಕರಣ ಎಂಬುದೊಂದು ಬಹುದೊಡ್ಡ ಜಾಲ, ಈ ಜಾಲ ಎಲ್ಲವನ್ನೂ ಆಕ್ರಮಿಸುತ್ತಾ ಹೋಗುತ್ತದೆ. ಇಂದು ನೀರನ್ನು ಜಾಗತೀಕರಣ ಮಾಡಿದ್ದೇವೆ. ಸಂಸ್ಕೃತಿಯನ್ನು ಜಾಗತೀಕರಣ ಮಾಡ್ತಾ ಇದ್ದೇವೆ. ನಮ್ಮ ಸ್ವಂತಿಕೆಯನ್ನು ದುಡ್ಡಿಗಾಗಿ ಮಾರಾಟ ಮಾಡ್ತಾ ಇದ್ದೇವೆ. ನಮ್ಮದು ಎನ್ನುವುದು ಏನು ಉಳಿತಾ ಇಲ್ಲ. ಹಾಗಾಗಿ ಜಾಗತೀಕರಣದ ಪರಿಸರ ಮತ್ತು ಪರಿಸ್ಥಿತಿಯಲ್ಲಿ ನಮ್ಮದೇ ಆದಂತಹ ಒಂದು ಶಿಕ್ಷಣ ವ್ಯವಸ್ಥೆಯನ್ನು ಕಟ್ಟಿಬೆಳೆಸುವಂತಹ ಬಹುದೊಡ್ಡ ಜವಾಬ್ದಾರಿ ನಮ್ಮ ಮುಂದಿದೆ.

## ಆಕರಗ್ರಂಥಗಳು

ಅನಿತಾ ಬಿ.ಕೆ., (೨೦೦೦), ವಿಲೇಜ್ ಕ್ಯಾಸ್ಟ್ ಅಂಡ್ ಎಜ್ಯುಕೇಷನ್, ರಾವತ್ ಫಾರ್ ರಾವತ್ ಪಬ್ಲಿಕೇಷನ್, ಜೈಪುರ.

ಅರವಿಂದ ಚೊಕ್ಕಾಡಿ, (೨೦೦೭), ಶಿಕ್ಷಣ ದೃಷ್ಟಿ, ಸುಮುಖ ಪ್ರಕಾಶನ, ೧ನೇ ಮಹಡಿ, ೧ನೇ ಮುಖ್ಯರಸ್ತೆ, ಮಾಗಡಿ ರಸ್ತೆ, ಬೆಂಗಳೂರು.

ಉಮಾಮಹೇಶ್ವರಿ, (೨೦೦೧), ಭಾರತದ ಇತಿಹಾಸ, ಶ್ರೀ ಗೌರಿ ಪ್ರಕಾಶನ, ಚಿತ್ರದುರ್ಗ.

ಕರೂರ ಎನ್.ಜಿ., (೧೯೯೯), ಶಿಕ್ಷಣದ ಪರಮಗುರಿ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ.

ಕುಮಾರ್ ಟಿ.ಎಂ., (೨೦೦೪), ಪ್ರಾಥಮಿಕ ಶಿಕ್ಷಣ ಒಂದು ಚರ್ಚೆ, ಶ್ರೀದೇವಿ ಪ್ರಕಾಶನ, ನಾಗಸಂದ್ರ ಪೋಸ್ಟ್, ಬೆಂಗಳೂರು.

ಗಂಗಾಧರಪ್ಪ ಎನ್.ಆರ್., (೨೦೦೪), ಶಿಕ್ಷಣದ ಮೂಲತತ್ತ್ವಗಳು, ರೇಖಾ ಪ್ರಕಾಶನ, ತರಳೂರು ಬಡಾವಣೆ, ದಾವಣಗೆರೆ.

ಚಂದ್ರಶೇಖರಯ್ಯ ಪಿ., (೨೦೦೭), ಶಿಕ್ಷಣ ದರ್ಶನ, ಸಿಮುಖ ಪ್ರಕಾಶನ, ೧ನೇ ಮಹಡಿ, ೧ನೇ ಮುಖ್ಯರಸ್ತೆ, ಮಾಗಡಿ ರಸ್ತೆ, ಬೆಂಗಳೂರು.

ಜಯಣ್ಣ ಸಿ.ವಿ., (೨೦೦೫), ಉದಯೋನ್ಮುಖ ಭಾರತದಲ್ಲಿ ಶಿಕ್ಷಣ, ಸ್ವಪ್ನ ಬುಕ್‌ಹೌಸ್, ಗಾಂಧಿನಗರ, ಬೆಂಗಳೂರು.

ನಿರಂಜನಾರಾಧ್ಯ ವಿ.ಪಿ., (೨೦೦೬), ಶಾಲಾ ಶಿಕ್ಷಣದ ಸಾರ್ವತ್ರೀಕರಣದಲ್ಲಿ ಸಮುದಾಯದ ಸಹಭಾಗಿತ್ವ, ಗುಣಾತ್ಮಕ ಶಾಲಾ ಶಿಕ್ಷಣಕ್ಕಾಗಿ ಜನಾಂದೋಲನ, ಬಿಡದಿ, ರಾಮನಗರ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ.

ನಾಯಕ್ ಜೆ.ಪಿ., (೧೯೯೦), ಭಾರತದಲ್ಲಿ ಶಿಕ್ಷಣ ಮತ್ತು ಸಮಾಜ, ಚೇತನ ಬುಕ್‌ಹೌಸ್, ಬೆಂಗಳೂರು.

ಪ್ರಶಾಂತ್ ಎಚ್.ಡಿ., (೨೦೦೬), ಶಾಲಾ ಶಿಕ್ಷಣದ ಸಾರ್ವತ್ರೀಕರಣಕ್ಕೆ ನಡೆದ ಪ್ರಯತ್ನಗಳು, ಅಭಿವೃದ್ಧಿ ಅಧ್ಯಯನ ಪತ್ರಿಕೆ, ಸಂಪುಟ ೫, ಸಂಚಿಕೆ ೨, ಜುಲೈ-ಡಿಸೆಂಬರ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ರೇಣುಕಾ ಪ್ರಸನ್ನ ಮ.ಗಂ., (೧೯೭೯), ಪ್ರಚಲಿತ ಶಿಕ್ಷಣ : ಒಂದು ಚಿಂತನೆ, ವಿಶ್ವನಾಥ ಪ್ರಕಾಶನ, ಸರಸ್ವತಿಪುರಂ, ಮೈಸೂರು.

• • •

# ಅಧ್ಯಾಯ ನಾಲ್ಕು

# ಮಹಿಳಾ ಶಿಕ್ಷಣ : ನಡೆದು ಬಂದ ದಾರಿ

**ಪೀಠಿಕೆ**

ಶಿಕ್ಷಣ ರಾಷ್ಟ್ರದ ಸರ್ವತೋಮುಖ ಅಭಿವೃದ್ಧಿಗೆ ಆಧಾರ ಸ್ತಂಭವಾಗಿದೆ. ಪ್ರತಿಯೊಂದು ರಾಷ್ಟ್ರದ ಮಾನವ ಸಂಪನ್ಮೂಲದಲ್ಲಿ ಮಹಿಳೆಯ ಪಾತ್ರವು ಅತ್ಯಮೂಲ್ಯವಾದುದು. ಪ್ರಾಚೀನ ಕಾಲದಲ್ಲಿ ಮಹಿಳಾ ಶಿಕ್ಷಣದ ಬಗ್ಗೆ ಶಾಸನಗಳಲ್ಲಿ ಉಲ್ಲೇಖಗಳಿರುವುದಿಲ್ಲ. ೩ನೇ ಶತಮಾನದಲ್ಲಿ ಬನವಾಸಿ ಶಾಸನದ ಪ್ರಕಾರ ಬೌದ್ಧ ವಿದ್ಯಾಸಂಸ್ಥೆಗಳಿದ್ದವೆಂದು, ವಿಹಾರಗಳಲ್ಲಿ ಶಿಕ್ಷಣ ನಡೆಯುತ್ತಿತ್ತು ಎಂದು ಹೇಳಲಾಗಿದೆ. ಇನ್ನೂ ೧೨ನೇ ಶತಮಾನದಲ್ಲಿ ಶಿಕ್ಷಣಕ್ಕೆ ಪ್ರೋತ್ಸಾಹ ಸಿಕ್ಕಿ ಅಕ್ಕಮಹಾದೇವಿ, ಸತ್ಯಕ್ಕ ಮುಂತಾದ ಶಿವಶರಣೆಯರು ಇದ್ದರು.

**೪.೧. ೧೮ನೇ ಶತಮಾನದ ನಂತರ ಮಹಿಳಾ ಶಿಕ್ಷಣ**

ರಾಜರು ಆಳ್ವಿಕೆಯಲ್ಲಿದ್ದ ಮೈಸೂರು ಸಂಸ್ಥಾನದಲ್ಲಿ ೧೮ನೇ ಶತಮಾನದಿಂದೀಚೆಗೆ ಮಹಿಳಾ ಶಿಕ್ಷಣ ಪ್ರಾರಂಭವಾಯಿತು. ಕ್ರಿ.ಶ. ೧೮೩೩ರಲ್ಲಿ ಲಂಡನ್ ಮಿಷನ್ ಸಂಸ್ಥೆ ಬಳ್ಳಾರಿಯಲ್ಲಿ ಪ್ರಥಮವಾಗಿ ಒಂದು ಹೆಣ್ಣುಮಕ್ಕಳ ಶಾಲೆಯನ್ನು ಆರಂಭಿಸಿತು. ೧೮೮೨-೮೩ರಲ್ಲಿ ರೋಮನ್ ಕ್ಯಾಥೋಲಿಕ್ ಕಾನ್ವೆಂಟ್ ಹೆಣ್ಣುಮಕ್ಕಳ ಪ್ರೌಢಶಾಲೆ ಪ್ರಾರಂಭವಾಯಿತು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅಂದು ಮಹಿಳಾ ಶಿಕ್ಷಣ ಸಾಕಷ್ಟು ಜನಪ್ರಿಯಗೊಂಡಿತ್ತು. ೧೮೮೧-೮೨ರಲ್ಲಿಯೇ ೭ ಹೆಣ್ಣುಮಕ್ಕಳ ಶಾಲೆಗಳಿದ್ದವು. ಇವುಗಳಲ್ಲಿ ೪೬೦ ಹೆಣ್ಣುಮಕ್ಕಳು ಮತ್ತು ಪ್ರಥಮ ದರ್ಜೆ ಕಾಲೇಜಿನಲ್ಲಿ ೬೨ ವಿದ್ಯಾರ್ಥಿನಿಯರು ಓದುತ್ತಿದ್ದರು. ಕ್ರಿ.ಶ. ೧೮೪೦ರಲ್ಲಿ ಲಂಡನ್ ಮಿಷನ್ ಅವರು ಬೆಂಗಳೂರಿನಲ್ಲಿ ಕನ್ನಡ ಶಾಲೆಯನ್ನು ಪ್ರಾರಂಭಿಸಿದ ನಂತರವೇ ಮಹಿಳಾ ಶಿಕ್ಷಣ ಪ್ರಥಮವಾಗಿ ಕಾಣಿಸಿಕೊಂಡಿದ್ದು. ಕ್ರಿ.ಶ. ೧೮೬೭ರಲ್ಲಿ ೩ ಸರ್ಕಾರಿ ಶಾಲೆಗಳಲ್ಲದೆ ಕೆಲವು ಅನುದಾನ ಪಡೆಯುತ್ತಿದ್ದ ಖಾಸಗಿ ಹೆಣ್ಣುಮಕ್ಕಳ ಶಾಲೆಗಳಿದ್ದವು. ಕೊಡಗಿನಲ್ಲಿ ಬಹಳ ಕಾಲದವರೆಗೆ ಹೆಣ್ಣುಮಕ್ಕಳಿಗೆ ಪ್ರತ್ಯೆಕ ಶಾಲೆಗಳಿರಲಿಲ್ಲ. ಹೆಣ್ಣುಮಕ್ಕಳಿಗೆ ಪ್ರತ್ಯೇಕ ಶಾಲೆಗಳನ್ನು ತೆರೆಯುವ ಪ್ರಯತ್ನಗಳೆಲ್ಲಾ ವಿಫಲಗೊಂಡವು. ಆದರೂ ಮಿಷನರಿಗಳು ಶಾಲೆಗಳನ್ನು ತೆರೆದರು. ಅವುಗಳಲ್ಲಿ ಕೆಲವು ಶಾಖೆಗಳು ಮಕ್ಕಳು ಬರದಿದ್ದರಿಂದ ಮುಚ್ಚಿದವು. ೧೮೮೪-೮೫ರಲ್ಲಿ ಬಾಲಕರ ಶಾಲೆಯಲ್ಲಿ೫೧ ಬಾಲಕಿಯರು ಓದುತ್ತಿದ್ದು, ಅವರ ಹಾಜರಾತಿ ಉತ್ತಮವಾಗಿತ್ತು. ಕ್ರಿ.ಶ. ೧೮೭೯ರಷ್ಟೊತ್ತಿಗೆ ಇವುಗಳ ಸಂಖ್ಯೆ ೧೨ಕ್ಕೆ ಏರಿತು. ಈ

ಸಂದರ್ಭದಲ್ಲಿ ಮತ್ತೇ, ಮೈಸೂರು ಸಂಸ್ಥಾನದ ರಾಜ್ಯಾಡಳಿತ ರಾಜಮನೆತನದ ವಶಕ್ಕೆ ಬಂದ ನಂತರ ಮಹಿಳಾ ಶಿಕ್ಷಣ ಉತ್ತಮಗೊಂಡಿತು (ಗೋವಿಂದರಾಜು, ೨೦೦೪).

ಬಳ್ಳಾರಿಯಲ್ಲಿ ಲಂಡನ್ ಮಿಷನ್ ಸಂಸ್ಥೆಯು ೧೮೩೩ರಲ್ಲಿ ಮೊತ್ತಮೊದಲು ಹೆಣ್ಣುಮಕ್ಕಳ ಶಾಲೆಯನ್ನು ಪ್ರಾರಂಭಿಸಿತು. ೧೮೮೨-೮೩ರಲ್ಲಿ ರೋಮನ್ ಕ್ಯಾಥೋಲಿಕ್ ಕಾನ್ವೆಂಟ್, ಹೆಣ್ಣುಮಕ್ಕಳ ಶಾಲೆಯು ಒಂದು ಪ್ರೌಢಶಾಲೆಯಾಗಿ ಪರಿವರ್ತಿತವಾಯಿತು. ಬಳ್ಳಾರಿ ನಗರ ಸಭೆಯು ನಡೆಸುತ್ತಿದ್ದ ಪ್ರಾಥಮಿಕ ಶಾಲೆಯನ್ನು ೧೯೦೩ರಲ್ಲಿ ಮಿಡ್ಲ್ ಸ್ಕೂಲ್ ಆಗಿಯೂ ೧೯೩೧ರಲ್ಲಿ ಪ್ರೌಢಶಾಲೆಯಾಗಿಯೂ ಪರಿವರ್ತಿತವಾಯಿತು. ಮುಸ್ಲಿಂ ಮಹಿಳೆಯರಿಗಾಗಿ ಬಳ್ಳಾರಿಯಲ್ಲಿದ್ದ ಸರ್ಕಾರಿ ಶಿಕ್ಷಕಿಯರ ತರಬೇತಿ ಶಾಲೆಗೆ ಸೇರಿದಂತೆ ಒಂದು ಮಿಡ್ಲ್ ಸ್ಕೂಲ್ ಇತ್ತು. ಇದು ೧೯೪೨ರಲ್ಲಿ ಸೆಕೆಂಡರಿ ಸ್ಕೂಲ್ ಆಯಿತು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಹಿಳಾ ಶಿಕ್ಷಣವು ಸಾಕಷ್ಟು ಜನಪ್ರಿಯವಾಗಿತ್ತು. ಸರ್ಕಾರವು ೧೯೧೨ರಲ್ಲಿ ಮಂಗಳೂರಿನಲ್ಲಿ ಒಂದು ಹೆಣ್ಣುಮಕ್ಕಳ ಪ್ರಾಥಮಿಕ ಶಾಲೆಯನ್ನು ಆರಂಭಿಸಿತು (ಅದೇ ಇಂದಿನ ಸರ್ಕಾರಿ ಹೆಣ್ಣುಮಕ್ಕಳ ಸೆಕೆಂಡರಿ ಶಾಲೆ).

ಮುಂದಿನ ವರ್ಷ, ಪ್ರಾಥಮಿಕ ಶಿಕ್ಷಕಿಯರ ತರಬೇತಿ ತರಗತಿಗಳನ್ನು ಇದಕ್ಕೆ ಸೇರಿಸಲಾಯಿತು. ೧೯೧೯ರಲ್ಲಿ ಇದು ಪ್ರೌಢಶಾಲೆಯಾಯಿತು. ಈ ಕಾಲದಲ್ಲಿದ್ದ ಇತರ ಪ್ರೌಢಶಾಲೆಗಳೆಂದರೆ ಮಂಗಳೂರಿನ ಸೇಂಟ್ ಆಗ್ನೆಸ್ ಪ್ರೌಢಶಾಲೆ ಮತ್ತು ಉಡುಪಿಯ ಸೇಂಟ್ ಸಿಸಿಲಿಯ ಹೆಣ್ಣುಮಕ್ಕಳ ಪ್ರೌಢಶಾಲೆ. ನಂತರ ೧೯೦೪ರಲ್ಲಿ ಭಾರತ ಸರ್ಕಾರದ ಸ್ತ್ರೀಶಿಕ್ಷಣ ಪ್ರೋತ್ಸಾಹ ಯೋಜನೆಯಿಂದ ೧೯೦೮-೧೦ರ ಅವಧಿಗೆ ವಿರಾಜಪೇಟೆ, ಅಮ್ಮತ್ತಿ, ಎಳಕೇರಿ, ಕುಂದ ಮತ್ತು ಪಾರಾಣೆಗಳಲ್ಲಿ ಬಾಲಕಿ ಯರಿಗೆ ಪ್ರಾಥಮಿಕ ಶಾಲೆಗಳನ್ನು ತೆರೆದರು. ೧೯೦೯ರಲ್ಲಿ ಮಡಿಕೇರಿಯಲ್ಲಿ ಅನುದಾನ ಪಡೆಯುವ ಒಂದು ಶಾಲೆ ಆರಂಭವಾಯಿತು. ಅದೇ ವರ್ಷ ಅನೇಕ ಕಡೆಗಳಲ್ಲಿ ಹೆಣ್ಣುಮಕ್ಕಳ ಶಾಲೆಗಳು ಪ್ರಾರಂಭವಾದವು. ಕ್ರಿ.ಶ. ೧೯೧೮ರ ವೇಳೆಗೆ ಕರ್ನಾಟಕ ರಾಜ್ಯದಲ್ಲಿ ಸುಮಾರು ೨೪,೦೦೦ ಹೆಣ್ಣು ಮಕ್ಕಳು ಶಾಲೆಗಳಲ್ಲಿ ಅಭ್ಯಾಸ ಮಾಡುತ್ತಿದ್ದರು. ಕ್ರಿ.ಶ. ೧೯೨೨ರಲ್ಲಿ ಮಿಡ್ಲ್ ಸ್ಕೂಲ್ ಮತ್ತು ಹೈಸ್ಕೂಲ್‌ಗಳ ಪಠ್ಯವಸ್ತುವಿನಲ್ಲಿ ಸುಧಾರಣೆ ಮಾಡಿ ಗೃಹವಿಜ್ಞಾನ, ಚಿತ್ರಕಲೆ, ಸಂಗೀತ, ಹೊಲಿಗೆ, ಕಸೂತಿ, ರೋಗಿಗಳ ಶುಶ್ರೂಷೆ ಮುಂತಾದವುಗಳನ್ನು ಹೆಣ್ಣುಮಕ್ಕಳಿಗೆ ಆಸಕ್ತಿ ಇರುವ ವಿಷಯಗಳನ್ನು ಪಠ್ಯವಿಷಯಗಳಲ್ಲಿ ಅಳವಡಿಸಲಾಯಿತು. ಮುಂದೆ ೧೯೩೭ರಲ್ಲಿ ಎಸ್.ಎಸ್.ಎಲ್.ಸಿ. ಯೋಜನೆಯು ಸುಧಾರಿತವಾಯಿತು. ಆಗ ಪಾಕಶಾಸ್ತ್ರ, ಬಟ್ಟೆಯನ್ನು, ಒಗೆಯುವ ಕಲೆ, ಗೃಹಿಣಿಯಾದವಳು ಮನೆ ಯನ್ನು ಚೆನ್ನಾಗಿ ನೋಡಿಕೊಳ್ಳುವ ಕಲೆ, ಸಂಗೀತ ಮತ್ತು ಚಿತ್ರಕಲೆಗಳನ್ನು ಗೃಹ ಕಲೆಯ ವಿಷಯ ಗಳನ್ನಾಗಿ ಮಾಡಲಾಯಿತು. ಪದವೀಧರ ಉಪಾಧ್ಯಾಯನಿಯರನ್ನು ಹೊಸ ದಿಲ್ಲಿಯ ಲೇಡಿ ಇರ್ವಿನ್ ಕಾಲೇಜಿಗೆ ತರಬೇತಿಗಾಗಿ ಕಳುಹಿಸುವ ವ್ಯವಸ್ಥೆಯನ್ನು ಮಾಡಲಾಯಿತು. ೧೯೩೧-೩೨ರಲ್ಲಿ ಜಿಲ್ಲೆಯಲ್ಲಿ ೭ ಹೆಣ್ಣುಮಕ್ಕಳ ಪ್ರೌಢಶಾಲೆಗಳಿದ್ದು, ಅವುಗಳಲ್ಲಿ ೨೪೭೪ ಮತ್ತು ೧೩೪ ಪ್ರಾಥಮಿಕ ಶಾಲೆಗಳಿದ್ದು,

೧೦೫೪೯ ಹಾಗೂ ಬಾಲಕರ ಶಾಲೆಯಲ್ಲಿ ೧೯೦೭೮ ಹೆಣ್ಣುಮಕ್ಕಳು ಓದುತ್ತಿದ್ದರು. ೧೯೩೧ರಲ್ಲಿ ಬೀದರನಲ್ಲಿದ್ದ ಹೆಣ್ಣುಮಕ್ಕಳ ಶಾಲೆಯು ಮಿಡ್ಲ್ ಸ್ಕೂಲ್ ಆಯಿತು. ಕಲ್ಬುರ್ಗಿಯಲ್ಲಿ ಮಹಿಳೆಯರಿಗಾಗಿ ಒಂದು ಶಿಕ್ಷಕಿಯರ ತರಬೇತಿ ಶಾಲೆಯಿತ್ತು. ಈ ಪ್ರದೇಶದ ಹೆಣ್ಣುಮಕ್ಕಳ ಶಿಕ್ಷಣವು ಮಿಷನರಿ ಸಂಸ್ಥೆಗಳಿಂದ ಪ್ರಗತಿ ಹೊಂದಿತು. ೧೯೪೬-೪೭ರಲ್ಲಿ ಹೆಣ್ಣುಮಕ್ಕಳ ಪ್ರೌಢಶಾಲೆಗಳ ಸಂಖ್ಯೆ ೧೬ಕ್ಕೆ ಏರಿತು. ಅವುಗಳಲ್ಲಿ ೪೭೦೩ ವಿದ್ಯಾರ್ಥಿನಿಯರಿದ್ದರು. ೧೮೮೭ರಲ್ಲಿ ಸೆಂಟ್‌ಮೇರಿ ಕಾನ್ವೆಂಟ್ ಆರಂಭ ವಾಗಿ ಅದು ೧೯೫೭ರಲ್ಲಿ ಇದು ಬಾಲಕ-ಬಾಲಕಿಯರು ಇಬ್ಬರಿಗೂ ಪ್ರೌಢಶಾಲೆಯಾಯಿತು.

ಬಾಲಕ-ಬಾಲಕಿಯರಿಬ್ಬರಿಗೂ ೧೯೦೪ರವರೆಗೆ ಮಿಡ್ಲ್ ಸ್ಕೂಲ್ ಪಬ್ಲಿಕ್ ಪರೀಕ್ಷೆಯು ಒಂದೇ ಆಗಿತ್ತು. ನಂತರ ಹೆಣ್ಣುಮಕ್ಕಳಿಗೆ ತಮ್ಮದೇ ಪರೀಕ್ಷೆಯನ್ನು ಮಿಡ್ಲ್ ಸ್ಕೂಲ್‌ನಲ್ಲಿ ಅಂತ್ಯದಲ್ಲಿ ನಡೆಸಲು ಶಾಲೆಗಳಿಗೆ ಅನುಮತಿಯನ್ನು ಕೊಡಲಾಯಿತು. ಹೆಣ್ಣುಮಕ್ಕಳಿಗೆ ಪಬ್ಲಿಕ್ ಪರೀಕ್ಷೆ ಅಥವಾ ಶಾಲಾ ಪರೀಕ್ಷೆಗಳಲ್ಲಿ ಒಂದನ್ನು ಆರಿಸಿಕೊಳ್ಳುವ ಸ್ವಾತಂತ್ರ್ಯವನ್ನು ಕೊಡಲಾಯಿತು. ೧೯೪೮-೪೯ರಲ್ಲಿ ಒಟ್ಟು ೧,೯೦,೮೪೧ ಹೆಣ್ಣುಮಕ್ಕಳು ಶಾಲೆಗಳಲ್ಲಿ ಕಲಿಯುತ್ತಿದ್ದರು. ನಂತರ ೧೯೫೧-೫೨ರಲ್ಲಿ ೨,೭೧,೧೭೨ ರಷ್ಟು ಹೆಚ್ಚಾಯಿತು. ಈ ಅವಧಿಯಲ್ಲಿ ಹೆಣ್ಣುಮಕ್ಕಳಿಗಾಗಿ ಪ್ರತ್ಯೇಕವಾಗಿ ೩೬ ಪ್ರೌಢಶಾಲೆಗಳಿದ್ದವು. ಪ್ರಮುಖವಾಗಿ ಮೂರು ಶಿಕ್ಷಕಿಯರ ತರಬೆತಿ ಸಂಸ್ಥೆಗಳಿದ್ದವು. ಅವು ಯಾವುವೆಂದರೆ ಮೈಸೂರಿನ ಶಿಕ್ಷಕಿಯರ ಕಾಲೇಜು ೧೮೮೮, ಜೆನಾನಾ ನಾರ್ಮಲ್ ಶಾಲೆ ೧೯೧೬ ಮತ್ತು ಬೆಂಗಳೂರಿನ ಸೇಕ್ರೆಡ್ ಹಾರ್ಟ್ಸ್ ಹೆಣ್ಣುಮಕ್ಕಳ ತರಬೇತಿ ಶಾಲೆ ೧೯೪೭. ಜೆನಾನಾ ನಾರ್ಮಲ್ ಶಾಲೆಯಲ್ಲಿ ಉರ್ದು ಶಿಕ್ಷಕಿಯರಿಗೆ ತರಬೇತಿ ಕೊಡಲಾಗುತ್ತಿತ್ತು. ಇದು ೧೯೪೬-೪೭ರಲ್ಲಿ ಆರಂಭವಾಯಿತು. ಆದರೆ ೧೯೫೩ರಲ್ಲಿ ಇದನ್ನು ಮುಚ್ಚಲಾಯಿತು. ೧೯೫೧-೫೨ರಲ್ಲಿ ಮಹಿಳೆಯರಿಗೆ ವೃತ್ತಿ ಶಿಕ್ಷಣವನ್ನು ಕೊಡುತ್ತಿದ್ದ ಮೂರು ಕೈಗಾರಿಕಾ ಶಾಲೆಗಳಿದ್ದವು. ಅವುಗಳಲ್ಲಿ ಮೈಸೂರಿನ ಮಹಿಳಾ ವೃತ್ತಿ ಶಿಕ್ಷಣ ಶಾಲೆ (ವೊಕೇಶನಲ್ ಇನ್‌ಸ್ಟಿಟ್ಯೂಟ್ ಫಾರ್ ವಿಮೆನ್) ಹಾಸನದ ಮೆಥಡಿಸ್ಟ್ ಮಿಷನ್ ಅನಾಥಾಲಯ ಮತ್ತು ಚನ್ನಪಟ್ಟಣದ ಕೈಗಾರಿಕಾ ಶಾಲೆ. ಇದೇ ಸಂದರ್ಭದಲ್ಲಿ ಹೆಚ್ಚು ವಯಸ್ಸಾದಂತಹ ಮಹಿಳೆಯರಿಗೆ ಅವರ ಮನೆಯಲ್ಲೇ ಶಿಕ್ಷಣವನ್ನು ಕೊಡಲು ಒಂದು ಯೋಜನೆಯನ್ನು ತಯಾರಿಸಲಾಯಿತು. ಈ ತರಗತಿಗಳನ್ನು ನಡೆಸುತ್ತಿದ್ದ ಬೋಧಕರಿಗೆ ಉದಾರವಾದ ಅನುದಾನವನ್ನು ನೀಡಲಾಗುತ್ತಿತ್ತು.

ಮೈಸೂರಿನಲ್ಲಿ ಮಹಿಳಾ ಸಮ್ಮೇಳನವು ೧೯೨೫ರಲ್ಲಿ ನಡೆಯಿತು. ಇದು ಸ್ತ್ರೀ ಶಿಕ್ಷಣ ಮತ್ತು ಅಭಿವೃದ್ಧಿಗೆ ಸಹಾಯವಾಯಿತು. ನಂತರ ಬೆಂಗಳೂರಿನ ಮಹಿಳಾ ಸೇವಾ ಸಮಾಜ, ಮೈಸೂರಿನ ವನಿತಾ ಸಮಾಜ ಮುಂತಾದವು ಮಹಿಳಾ ಶಿಕ್ಷಣಕ್ಕೆ ಉತ್ತಮ ಸಲಹೆ ಸಹಕಾರವನ್ನು ನೀಡಿದವು. ಮಹಿಳೆಯರಿಗಾಗಿ ಮೈಸೂರು ವಯಸ್ಕರ ಶಿಕ್ಷಣ ಸಮಿತಿಯು ನಂಜನಗೂಡು ಮತ್ತು ಕೆಂಗೇರಿಗಳಲ್ಲಿ ಎರಡು ವಿದ್ಯಾಪೀಠಗಳನ್ನು ನಡೆಸುತ್ತಿತ್ತು. ಇದಾದ ಮೇಲೆ ಬೆಳಗಾವಿ ವಲಯದಲ್ಲಿ ೧೮೫೫ಕ್ಕೆ ಹಿಂದೆ ಲಂಡನ್ ಮಿಷನ್ ಸಂಸ್ಥೆಯವರು ನಡೆಸುತ್ತಿದ್ದ ಕೆಲವು ಬಾಲಕಿಯರ ಶಾಲೆಗಳಿದ್ದವು.

೪.೨. ಮಹಿಳಾ ಶಿಕ್ಷಣಕ್ಕೆ ಸರ್ಕಾರಗಳ ಬೆಂಬಲ

೧೮೪೮-೧೮೫೬ರ ಅವಧಿಯಲ್ಲಿ ಭಾರತದ ಗವರ್ನರ್ ಜನರಲ್ ಆಗಿದ್ದ ಲಾರ್ಡ್‌ಡೌಲ್ ಹೌಸಿಯು ಮಹಿಳಾ ಶಿಕ್ಷಣದಲ್ಲಿ ಬದಲಾವಣೆಗಳಾಗದ ಹೊರತು, ಇನ್ನಾವುದೇ ರೀತಿಯ ಪ್ರತ್ಯೇಕ ಬದಲಾವಣೆಯನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ಸಾಧ್ಯವಿಲ್ಲ ಎಂದು ಘೋಷಿಸಿದರು. ಈವರೆಗೆ ಶ್ರೀಮಂತರಿಗೆ ಉನ್ನತ ಶಿಕ್ಷಣ ದೊರೆಯಲು ಬೇಕಾದ ಬೆಂಬಲವನ್ನು ನೀಡುತ್ತಿದ್ದ ಸರ್ಕಾರದ ಶಿಕ್ಷಣ ನೀತಿಯಲ್ಲಿ ಬದಲಾವಣೆಯನ್ನು ಸೂಚಿಸಿ, ಇನ್ನು ಮುಂದೆ ಈ ಗಮನವನ್ನು ಸರ್ಕಾರವು ದೇಶೀ ಭಾಷೆಗಳಲ್ಲಿ ಸಮೂಹ ಶಿಕ್ಷಣವನ್ನು ಬೆಂಬಲಿಸುತ್ತ ಬರಬೇಕೆಂದು, ೧೮೫೩ರಿಂದ ೧೮೫೫ರವರೆಗೆ ಬೋರ್ಡ್ ಆಫ್ ಕಂಟ್ರೋಲ್‌ನ ಅಧ್ಯಕ್ಷರಾಗಿದ್ದ ಸರ್ ಚಾರ್ಲ್ಸ್‌ವುಡ್‌ರವರು ೧೮೫೪ರಲ್ಲಿ ಆದೇಶ ಹೊರಡಿಸಿದರು. ಇದರಲ್ಲಿ ಹೊಸ ನೀತಿಯು ಹೇಗೆ ಜಾರಿಗೊಳ್ಳಬೇಕೆಂಬ ವಿವರ ಗಳನ್ನು ಹೇಳಲಾಗಿತ್ತು. ಇಡೀ ಶಿಕ್ಷಣ ವ್ಯವಸ್ಥೆಯನ್ನು ಸಮಗ್ರವಾಗಿ ಗಮನಿಸಿದ್ದ ಈ ಆದೇಶವು ಸ್ತ್ರೀ-ಪುರುಷರಿಬ್ಬರಿಗೂ ಅನ್ವಯಗೊಳ್ಳುವಂತೆಯೂ ಇತ್ತು. ಈ ಆದೇಶದ ಒಕ್ಕಣೆಯಲ್ಲಿ, 'ಭಾರತದಲ್ಲಿ ಮಹಿಳಾ ಶಿಕ್ಷಣದ ಪ್ರಾಮುಖ್ಯವನ್ನು ಹೆಚ್ಚು ವಿಸ್ತರಿಸಿ ಹೇಳುವ ಅಗತ್ಯವಿಲ್ಲ; ಇತ್ತೀಚೆಗೆ ದೇಶೀ ಯರು ತಮ್ಮ ಹೆಣ್ಣುಮಕ್ಕಳಿಗೆ ವಿದ್ಯಾಭ್ಯಾಸ ಕೊಡಿಸುವ ಬಗ್ಗೆ ಹೆಚ್ಚು ಆಸಕ್ತಿಯನ್ನು ತೋರುತ್ತಿದ್ದಾರೆ ಎಂಬುದು ತುಂಬಾ ಸಂತೋಷದಾಯಕ ಸಂಗತಿಯಾಗಿದೆ. ಪುರುಷರ ಶಿಕ್ಷಣಕ್ಕೆ ಒತ್ತು ಕೊಡುತ್ತಿದ್ದ ನೀತಿಗಿಂತ ದೇಶೀ ಭಾಷೆಗಳಲ್ಲಿ ಸಮೂಹ ಶಿಕ್ಷಣದತ್ತ ಗಮನಹರಿಸಬೇಕೆಂಬ ನೀತಿ ಜನರಲ್ಲಿ ಶೈಕ್ಷಣಿಕ ಹಾಗೂ ನೈತಿಕ ಚಿಂತನೆಗಳನ್ನು ಸಮಗ್ರಗೊಳಿಸುವಲ್ಲಿ ನೆರವಾಗಿದೆ' ಎಂದು ಹೇಳಬಹುದು.

ವಸಾಹತು ಪ್ರಭುಗಳ ಆರ್ಥಿಕ ಮತ್ತು ನೈತಿಕ ಬೆಂಬಲವು ಮಹಿಳಾ ಶಿಕ್ಷಣ ವ್ಯಾಪಕವಾಗಲು ಅಗತ್ಯವಾಗಿತ್ತು. ಬಾಲಕಿಯರ ಶಾಲೆಗಳಿಗೆ ಜನಬೆಂಬಲ ಅಷ್ಟಾಗಿ ಇರಲಿಲ್ಲ. ಗಂಡುಮಕ್ಕಳಿಗೆ ಶಿಕ್ಷಣ ದೊರೆತರೆ ಆ ಸಂಗತಿಯಿಂದ ಕುಟುಂಬದ ಆರ್ಥಿಕತೆಗೂ, ಪ್ರತಿಷ್ಠೆಗೂ ಇದ್ದಕ್ಕಿದ್ದಂತೆ ಬೆಲೆ ಬಂದು ಬಿಡುತ್ತಿತ್ತು. ಆದರೆ ಅದೇ ಹೆಣ್ಣುಮಕ್ಕಳಿಗೆ ಶಿಕ್ಷಣ ದೊರೆತರೆ, ಅದರಿಂದ ಲಾಭವಿದ್ದರೂ ಇದಕ್ಕೆ ವಿರುದ್ಧದ ಅಂಶಗಳನ್ನು ಕುಟುಂಬಗಳು ಎದುರಿಸಬೇಕಾಗುತ್ತಿತ್ತು.

ಇಂಡಿಯಾದ ಜನರ ರೀತಿ ನೀತಿಗಳಿಗೆ ಹಾಗೂ ಇಲ್ಲಿನ ಸಾಮಾಜಿಕ ಪದ್ಧತಿಗಳಿಗೆ ಬ್ರಿಟಿಷ್ ಶಾಲೆಗಳ ಮಾದರಿ ಹೊಂದಿಕೆಯಾಗುವುದೇ ಕಷ್ಟಸಾಧ್ಯವೆನಿಸುತ್ತಿತ್ತು. ಸ್ತ್ರೀಪುರುಷರು ಪರಸ್ಪರ ಬೆರೆತು ನಡೆಯುವ ಬಗೆಗೆ ಇಲ್ಲಿ ಅತಿಸೂಕ್ಷ್ಮವಾದ ಅಭಿಪ್ರಾಯಗಳಿದ್ದದ್ದರಿಂದ, ಬಾಲಕಿಯರಿಗೆ ಪ್ರತ್ಯೇಕ ಶಾಲೆಗಳೂ, ಅಧ್ಯಾಪಕಿಯರೂ ಇರಬೇಕಾದ್ದೂ ಅನಿವಾರ್ಯವೇ ಆಗುತ್ತಿತ್ತು. ಚಿಕ್ಕ ವಯಸ್ಸಿನಲ್ಲಿ ಮದುವೆಗಳಾಗುವುದೇ ಸೂಕ್ತವೆಂಬ ಅಭಿಪ್ರಾಯ ಪ್ರಚಲಿತವಿದ್ದದ್ದರಿಂದ ಬಾಲಕಿಯರು ಶಾಲೆಗಳಿಗೆ ಹೋಗಬಹುದಾದ ಲಕ್ಷಣಗಳೇ ಬಹಳ ಕಡಿಮೆಯಾಗುತ್ತಿದ್ದವು. ಜೊತೆಗೆ ಮಹಿಳೆಯರು ಅಡಿಗೆ, ಮನೆಗೆಲಸ, ಮಕ್ಕಳ ಲಾಲನೆ-ಪಾಲನೆಗಳಿಗೆ ಮೀಸಲಾದವರೆಂದೇ ಇಲ್ಲಿ ಪರಿಗಣಿತವಾಗುವುದರಿಂದ ಈ

ಎಲ್ಲವನ್ನೂ ಪೂರೈಸಿ ಕಲಿಕೆಯ ಕಡೆಗೆ ಹೋಗಲು ಅವರಿಗೆ ವಿಶ್ರಾಂತಿ ದೊರೆಯುವುದೂ ಕಷ್ಟದಾಯಕವಾದ ಸಂಗತಿಯಾಗಿತ್ತು.

ಮಹಿಳಾ ಶಿಕ್ಷಣಕ್ಕೆ ಶಾಲೆಗಳನ್ನು ಪ್ರಾರಂಭಿಸುವುದಕ್ಕೆ ಇನ್ನೊಂದು ಸಮಸ್ಯೆಯೂ ಇತ್ತು. ಶಿಕ್ಷಣ ಕಲಿಯಲು ಮಹಿಳೆಯರು ಶಾಲೆಗಳಿಗೆ ಹೋಗಬೇಕಾಗಿತ್ತು. ಆದರೆ ಸಾಂಪ್ರದಾಯಿಕ ಭಾರತೀಯ ಕುಟುಂಬಗಳಿಗೆ ಹೆಣ್ಣುಮಕ್ಕಳನ್ನು ಮನೆಯಿಂದ ಹೊರಗೆ ಕಳಿಸುವ ಆಲೋಚನೆಯೇ ಇರಲಿಲ್ಲ. ಮನೆಯೊಳಗೇ ಅಂತಃಪುರ ಶಿಕ್ಷಣವನ್ನೇ ಕೊಡುವುದೆಂದರೆ ಅದು ಸಾಮಾನ್ಯರಿಗೆ ಎಟಕುವಂತಿರಲಿಲ್ಲ. ಈ ಎಲ್ಲದಕ್ಕೂ ಶಾಲೆಗಳು ಮಾತ್ರವೇ ಉತ್ತರಗಳಾಗಬಲ್ಲವು. ಆದರೆ ಶಾಲೆಗಳು ಹೇಗಿರಬೇಕು? ಪಾಠ ಮಾಡುವವರು ಯಾರು? ಏನನ್ನು ಪಾಠ ಮಾಡಬೇಕು? ತಮ್ಮ ಹೆಣ್ಣುಮಕ್ಕಳನ್ನು ಶಾಲೆಗೆ ಕಳುಹಿಸಲು ಮುಂದೆ ಬರುವ ಕುಟುಂಬಗಳಾದರೂ ಯಾವುವು? ಕಳಿಸಿದರೂ ಎಷ್ಟು ದಿನ ಕಳಿಸುತ್ತವೆ? ಋತುಮತಿಯರಾಗುವ ಮುನ್ನವೇ ಹೆಣ್ಣು ಮಗುವಿಗೆ ವಿವಾಹವಾದರೆ, ಆ ಮಗು ವಿವಾಹಿತಳೆನಿಸಿದ ಮೇಲೂ ಶಾಲೆಗೆ ಬರುತ್ತಾಳೆಯೇ? ಭಾರತ ಸಮಾಜದ ಶೈಕ್ಷಣಿಕ ಅಭಿವೃದ್ಧಿಯ ಮುಂದಾಳುಗಳು ಈ ಎಲ್ಲ ಪ್ರಶ್ನೆಗಳನ್ನು ಉತ್ತರಿಸಬೇಕಿತ್ತು. ಆರ್ಥಿಕ ಮತ್ತು ನೈತಿಕ ಬೆಂಬಲಗಳನ್ನು ನೀಡುವುದಕ್ಕಿಂತಲೂ ಕಷ್ಟಕರವೆನಿಸಿಬಿಡುತ್ತಿದ್ದ ಕೆಲಸ ಇದೇ ಆಗಿತ್ತು.

**೪.೩. ಸುಧಾರಣಾ ಕಾಲ**

ಸರ್ಕಾರಿ ಶಾಲೆಗಳ ಸ್ಥಾಪನೆಯೊಂದಿಗೆ ಒಂದು ಕ್ರಾಂತಿದಾಯಕ ಹಂತವೇ ಒದಗಿದಂತಾಯ್ತು. ಈ ಹಂತದಲ್ಲಿ ಆರಂಭವಾದ ಬೆಥೂನರ ಸರ್ಕಾರಿ ಶಾಲೆಯಂತೆಯೇ, ಸುಧಾರಣಾವಾದಿ ಸಂಸ್ಥೆಗಳು ಹಾಗೂ ಧಾರ್ಮಿಕ ಸಂಸ್ಥೆಗಳ ಪೋಷಣೆಗಳಲ್ಲಿ ಹಲವು ಶಾಲೆಗಳೂ ಆರಂಭಗೊಂಡವು. ಮೊದಲಿಗೆ ಬ್ರಹ್ಮಸಮಾಜ, ನಂತರದಲ್ಲಿ ಪ್ರಾರ್ಥನಾ ಸಮಾಜ, ಆರ್ಯಸಮಾಜ ಹಾಗೂ ಥಿಯೋಸಾಫಿಕಲ್ ಸೊಸೈಟಿಗಳು ಸ್ತ್ರೀ ಶಿಕ್ಷಣಕ್ಕೆ ಬೆಂಬಲವಾಗಿ ನಿಲ್ಲ ತೊಡಗಿದವು.

೧೮೫೪ರ ವೇಳೆಗೆ ಸುಮಾರು ೬೨೬ ಬಾಲಕಿಯರ ಶಾಲೆಗಳಿದ್ದವು ಈ ಶಾಲೆಗಳಲ್ಲಿ ಒಟ್ಟು ೨೧,೭೫೫ ವಿದ್ಯಾರ್ಥಿನಿಯರಿದ್ದರು. ಈ ಶಾಲೆಗಳು ತುಂಬಾ ಚಿಕ್ಕವು ಹಾಗೂ ಇಡೀ ಜನಸಂಖ್ಯೆಗೆ ಹೋಲಿಸಿದರೆ ಇಲ್ಲಿ ಕಲಿಯಲು ಬರುತ್ತಿದ್ದ ಬಾಲಕಿಯರ ಒಟ್ಟು ಸಂಖ್ಯೆ ನಗಣ್ಯವೆನಿಸುವಂಥದು ಎಂಬುದು ಸ್ಪಷ್ಟ. ಆದರೂ ಮಹಿಳಾ ಶಿಕ್ಷಣದ ಬಗೆಗೆ ಇದ್ದ ನಿಲುವಿನಲ್ಲೊಂದು ಸ್ಪಷ್ಟ ಬದಲಾವಣೆಯಂತೂ ಮೊದಲಾಗಿತ್ತು (ಎಚ್.ಎಸ್. ಶ್ರೀಮತಿ, ೨೦೦೪).

ಮಹಿಳಾ ಶಿಕ್ಷಣದಿಂದ ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣೆಗಳಿಗೆ ಅನುಕೂಲವಾಗುತ್ತದೆಂದು ಅಥವಾ ಸಾಮಾಜಿಕ ಮತ್ತು ಆರ್ಥಿಕ ಸಂಚಲನೆಗಳು ಸಾಧ್ಯವಾಗಬಹುದೆಂದು ಅಥವಾ ಇವೆರಡೂ ಒಟ್ಟಿಗೆ ಸಾಧಿತವಾಗಬಹುದೆಂದು ನಿರೀಕ್ಷಿಸಿ ಭಾರತೀಯರು ಇದನ್ನು ಬೆಂಬಲಿಸಿರಬಹುದು. ಮೊದ ಮೊದಲಿಗೆ ಬಾಲಕರಿಗಾಗಿ ಸ್ಥಾಪಿತವಾದ ಹಿಂದೂ ಕಾಲೇಜಿನಂತಹ ಹಲವು ಶಾಲೆಗಳು ತಮ್ಮ ವರ್ಗದ

ಹುಡುಗರ ಪ್ರಗತಿಯ ಅವಕಾಶಗಳನ್ನು ಹೆಚ್ಚು ಹೆಚ್ಚಾಗಿಸುವ ಅಭಿಪ್ರಾಯವನ್ನಷ್ಟೇ ಹೊಂದಿದ್ದವು. ಬಾಲಕರ ಪ್ರಗತಿ ಸಾಧ್ಯವಾಗುತ್ತಿದ್ದಂತೆಯೇ ವಿದ್ಯಾವಂತ ವಧುಗಳಿಗಾಗಿ ಬೇಡಿಕೆಯೂ ಹೆಚ್ಚಿತ್ತು. ಸುಧಾರಣೆಯ ಬೆಂಬಲಿಗರು ಈ ಸಂಗತಿಯನ್ನು ಸಾಮಾಜಿಕ ಪ್ರಗತಿಯನ್ನು ಸಾಧಿಸುವ ಒಂದು ಸದಾವಕಾಶವೆಂದೇ ಮನಗಂಡರು. ಸಮಾಜ ಸುಧಾರಣೆಯ ಆಶಯವೇ ಪ್ರಧಾನವಾಗಿದ್ದ ಈ ಬೆಂಬಲಿಗರಿಗೆ ಮಹಿಳಾ ಪುರುಷರಿಬ್ಬರೂ ವಿದ್ಯಾವಂತರಾದರೆ ಮಾತ್ರವೇ ಇದು ಸಾಧಿತವಾಗುತ್ತದೆಂಬ ಅಭಿಪ್ರಾಯ ಬಲವಾಯಿತು. ಪಾಶ್ಚಾತ್ಯ ಶಿಕ್ಷಣ ಪಡೆದ ಹಲವು ಬಂಗಾಲಿ ತರುಣರು ತಮ್ಮ ಹೆಂಡತಿಯರನ್ನೂ, ಹೆಣ್ಣು ಮಕ್ಕಳನ್ನೂ ಕಠಿಣವಾದ ಪಾರಂಪರಿಕ ಕೌಟುಂಬಿಕ ನಿರ್ಬಂಧಗಳಿಂದ ಬಿಡುಗಡೆಗೊಳಿಸಿದರು. ಮಹಿಳೆಯರ ಪ್ರವೇಶ ಇಂಥಲ್ಲಿ ಅಸಂಸ್ಕೃತವೆಂದೂ, ಅಸಭ್ಯವೆಂದೂ ಈವರೆಗೆ ಉನ್ನತ ಕುಟುಂಬಗಳಲ್ಲಿ ಪರಿಗಣಿತವಾಗಿದ್ದ ಅನೇಕ ಜನಪ್ರಿಯ ಸಂಸ್ಕೃತಿ ಪ್ರಸಂಗಗಳಲ್ಲಿ ಪ್ರವೇಶ ಪಡೆಯುವುದೂ ಮಹಿಳೆಯರಿಗೆ ಸಾಧ್ಯವಾಗ ತೊಡಗಿತು. ಇದರಿಂದ ಕಲಿತ ಮಹಿಳೆಯರು ಮತ್ತು ಕಲಿಯದೇ ಇರುವ ಮಹಿಳೆಯರ ನಡುವೆ ಒಂದು ಸಾಮಾಜಿಕ ಅಂತರವೇ ನಿರ್ಮಾಣವಾಗ ತೊಡಗಿತು. ಕಲಿತ ಮಹಿಳೆಯ ಜನಪದರು ತಮ್ಮ ಆಚರಣೆಗೆ ಮತ್ತು ಕತೆ ಹಾಡುಗಳಂತಹ ಕಲೆಗಳ ಮೂಲಕ ತೋರುತ್ತಿದ್ದ ಪ್ರತಿಭಟನೆಯ ದಾರಿಗಳಿಗೆ ಹೊರತಾಗಿ ಉಳಿಯುವುದೊಂದು ಲಕ್ಷಣವೇ ಆಯಿತು. ಕಲಿತ ಮಹಿಳೆಗೆ ಪ್ರತ್ಯೇಕ ಅಸ್ತಿತ್ವವೆಂಬುದೇ ಸಾಧ್ಯವಾಗದೆ ಹೋಯಿತು. ಅವರ ಅಭಿವೃದ್ಧಿ ಎಂದರೆ ಪುರುಷರಿಗೆ ಸೂಕ್ತ ಸಂಗಾತಿಗಳೆನಿಸುವುದು ಎಂಬ ನಿರ್ವಚನವೇ ಆಗಿ ಬಿಟ್ಟಿತು. ನಾಗರಿಕ ಸಮಾಜದ ಹೊಸ ಸದಸ್ಯೆಯರು ವೈಜ್ಞಾನಿಕ ಪೋಷಕರಾಗಿ ಪರಿವರ್ತಿತರಾದರು.

ಬಂಗಾಲದ ಸಮಾಜ ಸುಧಾರಣಾ ಸಂಸ್ಥೆಯಾದ ಬ್ರಹ್ಮಸಮಾಜದ ಸದಸ್ಯರು ಮಹಿಳಾ ಶಿಕ್ಷಣ ಚಳುವಳಿಯ ನೇತಾರರಾದರು. ಸ್ತ್ರೀಪುರುಷರ ಸಮಾನತೆಯ ಮಾತನಾಡಿದರು. ೧೮೬೧ರಲ್ಲಿ ಬ್ರಹ್ಮಸಮಾಜದ ನೇತಾರ ರಾಜಾರಾಮ ಮೋಹನರಾಯರು ಮಹಿಳಾ ಶಿಕ್ಷಣದ ಪ್ರಾಮುಖ್ಯತೆ ಕುರಿತು ಭಾಷಣ ಮಾಡಿದರು. ಮುಂದಿನ ವರ್ಷದಲ್ಲಿ ಮಹಿಳೆಯರ ಸುಧಾರಣೆಯನ್ನು ಪ್ರಮುಖ ಉದ್ದೇಶವಾಗಿ ಪರಿಗಣಿಸಿ ಮಹಿಳೆಯರಿಗಾಗಿ ಸಂಸ್ಥೆಯೊಂದನ್ನೂ ಸ್ಥಾಪಿಸಿದರು. ೧೮೬೫ರಲ್ಲಿ ಬ್ರಹ್ಮಸಮಾಜವು ಮಹಿಳೆಯರಿಗಾಗಿ ಧಾರ್ಮಿಕ ಉಪದೇಶಗಳು, ಹೊಲಿಗೆ ಪಾಠಗಳು ಮತ್ತು ಹಲವು ಸಾಮಾಜಿಕ ವಿಷಯಗಳನ್ನು ಕುರಿತ ಚರ್ಚೆಗಳ್ನು ನಡೆಸುವ ಸಂಘ-ಸಂಸ್ಥೆಗಳಿಗೆ ನೇರವಾಗಿಯೂ ಈ ಸಂಸ್ಥೆ ನಿಂತಿತು.

ಮಹಿಳಾ ಶಿಕ್ಷಣದ ಚರ್ಚೆ ಬ್ರಹ್ಮಸಮಾಜವು ೧೮೬೬ರಲ್ಲಿ ಇಬ್ಭಾಗವಾಗಲು ಕಾರಣವಾಯಿತು. ಕೇಶವ ಸೇನರ ಪ್ರತ್ಯೇಕ ಗುಂಪು 'ನವ ವಿಧಾನ' ಎಂದು ತನ್ನನ್ನು ಕರೆದುಕೊಂಡಿತು. ಮಿಸ್ ಮೇರಿ ಕಾರ್ಪೆಂಟರ್ ಅವರನ್ನು ಕಲ್ಕತ್ತಾಗೆ ಕರೆಸಿತು. ಕಾರ್ಪೆಂಟರ್ ಅವರ ಮುಖ್ಯಧ್ಯೇಯ ಮಹಿಳಾ ಶಿಕ್ಷಣವೇ ಆಗಿತ್ತು. ಆಕೆ ಬಂದವರೇ ಸೂಕ್ತ ಅಧ್ಯಾಪಕರು ಸಾಕಷ್ಟಿಲ್ಲ ಎಂಬ ಸಂಗತಿಯನ್ನು

ಗಮನಿಸಿದರು. ಸಾರ್ವಜನಿಕ ವೇದಿಕೆಯಲ್ಲಿ ಸಮಸ್ಯೆಯ ಸ್ವರೂಪವನ್ನು ಕುರಿತು ಮಾತನಾಡಿದರಲ್ಲದೆ, ಸಮಸ್ಯೆಯ ಪರಿಹಾರಕ್ಕೆ ಸೂಕ್ತ ಚೌಕಟ್ಟೊಂದನ್ನು ರೂಪಿಸಿ ಗವರ್ನರ್ ಜನರಲ್‌ರವರಿಗೆ ಸಲ್ಲಿಸಿದರು. ಇದರ ಪರಿಣಾಮವಾಗಿ ಭಾರತೀಯ ಹಾಗೂ ಇಂಗ್ಲಿಷ್ ಜನರ ನಡುವೆ ಪರಸ್ಪರ ತಿಳಿವಳಿಕೆ ಮೂಡಲು ನೆರವಾಗುವ ನ್ಯಾಷನಲ್ ಇಂಡಿಯನ್ ಅಸೋಸಿಯೇಷನ್ ಎಂಬ ಸಂಸ್ಥೆಯೊಂದು ಸ್ಥಾಪನೆ ಗೊಂಡಿತು. ೧೮೭೨ರಲ್ಲಿ ಕಾರ್ಪೆಂಟರ್; ಕೇಶವ ಸೇನ್ ಮತ್ತು ಇನ್ನೊಬ್ಬ ಇಂಗ್ಲಿಷ್ ಮಹಿಳೆ ಆನೆಟ್ ಅಕ್ರಾಯ್ಡ್ ಕೂಡಿ ಸಾಮಾನ್ಯ ಶಾಲೆಯೊಂದನ್ನು ತೆರೆದರು. ನಂತರದಲ್ಲಿ ಆನೆಟ್ ಅಕ್ರಾಯ್ಡ್‌ರವರು ಕೇಶವ ಸೇನ್ ಮತ್ತು ಬ್ರಹ್ಮಸಮಾಜದ ಇನ್ನು ಕೆಲವರು ನೆರವಿನಲ್ಲಿ ಹಿಂದೂ ಮಹಿಳಾ ವಿದ್ಯಾಲಯ ವನ್ನು ಸ್ಥಾಪಿಸಿದರು. ೧೮೭೮ರ ವೇಳೆಗೆ ಅದಾಗಲೇ ಅಸ್ತಿತ್ವದಲ್ಲಿದ್ದ ಬೆಥೂನ್ ಸ್ಕೂಲ್‌ನಲ್ಲಿ ಈ ವಿದ್ಯಾಲಯವು ವಿಲೀನಗೊಂಡು ಬೆಥೂನ್ ಕಾಲೇಜ್ ಎಂದಾಗಿ ಕಲ್ಕತ್ತಾ ವಿಶ್ವವಿದ್ಯಾಲಯದ ವ್ಯಾಪ್ತಿಗೆ ಒಳಪಟ್ಟಿತು. ೧೮೮೩ರಲ್ಲಿ ಕಾದಂಬಿನಿ ಬಸು ಮತ್ತು ಚಂದ್ರಮುಖಿ ಬಸು ಎಂಬ ಇಬ್ಬರು ವಿದ್ಯಾರ್ಥಿನಿಯರು ಬಿ.ಎ. ಪದವಿಯನ್ನು ಪಡೆಯುವುದರೊಂದಿಗೆ ಬ್ರಿಟಿಷ್ ಸಾಮ್ರಾಜ್ಯದಲ್ಲಿ ಪದವಿ ಧರೆಯರೆನಿಸಿದ ಮೊತ್ತಮೊದಲ ಭಾರತದ ಮಹಿಳೆಯರಾದರು.

ದಕ್ಷಿಣ ಭಾರತದ ಮದ್ರಾಸಿನಲ್ಲಿ ಹೀಗೆ ಮಹಿಳಾ ಶಿಕ್ಷಣವನ್ನು ಪ್ರಚುರಪಡಿಸಿದ ಸಂಸ್ಥೆ ಥಿಯಾಸಾಫಿಕಲ್ ಸೊಸೈಟಿ. ಸೊಸೈಟಿಯ ಮುಂದಾಳಾಗಿದ್ದ ಅನಿಬೆಸೆಂಟ್‌ರು ಪ್ರಾಚೀನ ಕಾಲದಲ್ಲಿ ಹಿಂದೂ ಮಹಿಳೆಯರಿಗೆ ಶಿಕ್ಷಣದ ಅವಕಾಶವಿತ್ತೆಂದೂ ಆ ಮಹಿಳೆಯರು ಸಮಾಜದಲ್ಲಿ ಮುಕ್ತವಾಗಿ ಓಡಾಡಿಕೊಂಡಿದ್ದರೆಂದೂ ಸಮರ್ಥಿಸಿದರು. ಆ ಸ್ವರ್ಣಯುಗಕ್ಕೆ ಮರಳುವ ಅಗತ್ಯವನ್ನು ಮನಗಾಣಿಸಲು ಒತ್ತಿ ಹೇಳಲು ಪ್ರಯತ್ನಿಸಿದರು. ೧೮೭೪ರಲ್ಲಿ ಮಹಿಳಾ ಪ್ರಗತಿಯನ್ನು ಕುರಿತು ಆಕೆ ಮಾಡಿದ ಭಾಷಣದಿಂದಾಗಿ ಇಂಗ್ಲೆಂಡಿನಲ್ಲಿ ಬೆಸೆಂಟ್‌ರನ್ನು ಮಹಿಳಾವಾದಿ ಎಂದೇ ಗುರುತಿಸಲಾಗುತ್ತಿತ್ತು. ಮೇಡಂ ಬ್ರವಾಟ್‌ಸ್ಕಿಯವರು ಬರೆದ 'ಸೀಕ್ರೆಟ್ ಡಾಕ್ಟ್ರೀನ್' ಕೃತಿಯನ್ನು ಓದುವ ವೇಳೆಗಾಗಲೇ ಇಂಗ್ಲೆಂಡ್‌ನ ಹಲವು ಚಳುವಳಿಗಳಲ್ಲಿ ಬೆಸೆಂಟ್ ತಮ್ಮನ್ನು ತಾವು ಗುರುತಿಸಿಕೊಂಡಿದ್ದರು. ಕೃತಿಯನ್ನು ಓದಿದ ಮೇಲಂತೂ ಆಕೆ ಥಿಯೋಸಫಿಸ್ಟರೊಂದಿಗೆ ಬೆರೆತು ಕೆಲಸ ಮಾಡಬೇಕೆಂದೂ, ಇನ್ನು ಮುಂದೆ ಭಾರತವೇ ತನ್ನ ಮನೆ ಎಂದೂ ನಿರ್ಧರಿಸಿಬಿಟ್ಟರು. ಮೇಡಂ ಬ್ಲವಾಟ್‌ಸ್ಕಿಯವರು ಥಿಯೋಸಾಫಿಕಲ್ ಸೊಸೈಟಿಯನ್ನು ಹುಟ್ಟು ಹಾಕಿದವರಲ್ಲಿ ಒಬ್ಬರು. ಆಕೆ ಬಾಲ್ಯವಿವಾಹ, ಬಾಲವಿಧವಾ ತನ, ಸತಿಯಂತಹ ದುಷ್ಟಪದ್ಧತಿಗಳನ್ನು, ಮೂಲ ಹಿಂದೂಧರ್ಮವನ್ನು ಅಪಾರ್ಥಗೊಳಿಸಿ ತಿರುಚಿದ ಸಂದರ್ಭಗಳು ಎಂದೇ ಪರಿಗಣಿಸಿದರು.

೧೮೯೩ರಲ್ಲಿ ಪ್ರಥಮ ಬಾರಿಗೆ ಬೆಸೆಂಟ್‌ರವರು ಭಾರತದಲ್ಲಿ ಭಾಷಣ ಮಾಡುತ್ತಾ ಇಲ್ಲಿನ ಪ್ರಾಚೀನ ಪರಂಪರೆಯ ಮಹತ್ವವನ್ನು ಹೊಗಳಿ, ಆ ದಿನಗಳು ಮತ್ತೆ ಮರಳಬೇಕಾಗಿದೆ ಎಂದು ಸಾರಿದರು. ನಂತರದಲ್ಲಿ ಮಹಿಳಾ ಶಿಕ್ಷಣಕ್ಕೆ ಇರುವ ಸಮಸ್ಯೆಗಳತ್ತ ಗಮನಹರಿಸಿ ೧೯೦೧ರಲ್ಲಿ

ಇಂಡಿಯನ್ ಲೇಡಿಸ್ ಮ್ಯಾಗಜೇನ್ ಎಂಬ ಪತ್ರಿಕೆಗೆ ಮಹಿಳೆಯರ ಶಿಕ್ಷಣ ಎಂಬ ಲೇಖನವೊಂದನ್ನು ಬರೆದರು. ಮಹಿಳೆಯರಿಗೆ ಶಿಕ್ಷಣ ದೊರೆಯಬೇಕೆಂಬುದನ್ನು ನಿರ್ಲಕ್ಷಿಸಿದರೆ ಭಾರತದ ಅಭಿವೃದ್ಧಿ ದುರ್ಗತಿಗೆ ಇಳಿಯುತ್ತದೆ ಎಂದು ಎಚ್ಚರಿಸಿದರು. ಆದರೆ ಈ ದಿಸೆಯಲ್ಲಿ ಪಾಶ್ಚಾತ್ಯ ಶಿಕ್ಷಣ ದೊರೆತರೆ ಅದೇನೂ ಉಪಯುಕ್ತವಾಗಲಾರದು. ಅದು ಮಹಿಳಾ ವಿಶಿಷ್ಟ ಚಿಂತನೆಗಳನ್ನು ಮತ್ತೆ ಶೋಧಿಸಬೇಕು. ಇದು ಒಂದು ರೀತಿ ದುರ್ಗೆಯ ಪರಿಕಲ್ಪನೆಯಂಥದು ಎಂದರು. ಬೆಸೆಂಟರ್ ಸ್ವತಃ ಈ ಬಗೆಯ ಸುಧಾರಣೆಗಳಿಗಾಗಿ ಪ್ರಯತ್ನಿಸಿದರು. ಈ ತತ್ತ್ವಗಳಿಗನುಸಾರವಾಗಿ ಮಹಿಳಾ ಕಾಲೇಜೊಂದನ್ನು ಸಹ ತೆರೆದರು.

ಉತ್ತರ ಭಾರತದಲ್ಲಿ ಸ್ವಾಮಿ ದಯಾನಂದ ಸರಸ್ವತಿಯವರ ಬೋಧನೆಗಳನ್ನು ಅನುಸರಿಸುತ್ತಿದ್ದ ಸುಧಾರಣಾವಾದಿ ಹಿಂದೂಪಂಗಡವಾದ ಆರ್ಯಸಮಾಜವು ಮಹಿಳಾ ಶಿಕ್ಷಣಕ್ಕೆ ಬೆಂಬಲವನ್ನೊದಗಿಸಿತು. ೧೯ನೆಯ ಶತಮಾನದ ಕೊನೆಯ ವೇಳೆಗೆ ಆರ್ಯಸಮಾಜದ ಪ್ರಗತಿಶೀಲರು ತಮ್ಮ ಸುಧಾರಣಾ ಚಟುವಟಿಕೆಗಳಲ್ಲಿ ಮಹಿಳೆಯರು ಭಾಗವಹಿಸುವಂತೆ ಮಾಡುವುದರ ಮಹತ್ವವನ್ನು ಮನಗಾಣ ತೊಡಗಿದರು. ೧೮೯೦ರಲ್ಲಿ ಜಲಂಧರ್ ಸಮಾಜವು ಆರ್ಯಕನ್ಯಾ ಪಾಠಶಾಲೆಯನ್ನು ತೆರೆದು ಅದಕ್ಕೆ ಪ್ರಿನ್ಸಿಪಾಲರಾಗಿ ಮಹಿಳೆಯೊಬ್ಬರನ್ನು ನೇಮಿಸಿತು.

ಇದಾದ ಸ್ವಲ್ಪ ಸಮಯದಲ್ಲಿ ಜಲಂಧರ್‌ನಲ್ಲಿ ಕನ್ಯಾ ಮಹಾವಿದ್ಯಾಲಯ ಎಂಬ ಹೈಸ್ಕೂಲ್ ಅನ್ನೂ ತೆರೆಯಲಾಯಿತು. ಮೊದಲಿನ ಪ್ರಾಥಮಿಕ ಶಾಲೆ ಹಾಗೂ ಈ ಪ್ರೌಢಶಾಲೆಗಳೆರಡೂ ೧೮೯೨ರ ವೇಳೆಗೆ ಒಂದು ಸ್ಥಿರತೆಯನ್ನು ಪಡೆದು ಅಭಿವೃದ್ಧಿ ಹೊಂದುವ ಹಿನ್ನೆಲೆಯಲ್ಲಿ ಶ್ರಮವಹಿಸಿದರು ಲಾಲಾ ದೇವರಾಜರು. ಇವರು ಮೊದಲಿಗೆ ತಮ್ಮ ಕುಟುಂಬದ ಬೆಂಬಲದಲ್ಲೇ ಚಿಕ್ಕದಾಗಿ ಶಾಲೆ ಯನ್ನು ಆರಂಭಿಸಿದರು. ಹಳೇ ಪೇಪರ್ ಮಾರಿದ ಹಣವನ್ನೂ ಬಿಡದೆ ಇದರಲ್ಲೇ ಹಾಕಿ ನಿರ್ವಹಿಸಲು ಯತ್ನಿಸಿದರು. ಅಲ್ಲಿನ ಸಿಬ್ಬಂದಿಯವರಿಗೆ ಅವರ ತಾಯಿಯ ಅಡುಗೆ ಮನೆಯೇ ಅಲ್ಪಸ್ವಲ್ಪವಾದರೂ ನೆರವಾಗಿ ನಿಲ್ಲುತ್ತಿತ್ತು. ಕಾಲಕ್ರಮೇಣ ಹುಡುಗಿಯರಿಗೆ ಶಿಕ್ಷಣ ನೀಡುವ ಬಗ್ಗೆ ಸಾರ್ವಜನಿಕರಲ್ಲಿ ಸದಭಿಪ್ರಾಯ ಬೆಳೆಯುತ್ತಾ, ಶಾಲೆಯಲ್ಲಿ ವಿದ್ಯಾರ್ಥಿನಿಯರ ಸಂಖ್ಯೆಯೂ ಏರಿತು. ಈ ವೇಳೆಗೆ ಅನುಭವಸ್ಥರಾದ ಮಹಿಳಾ ಅಧ್ಯಾಪಕಿಯರೂ, ಶಾಲೆಯ ಆಡಳಿತ ವರ್ಗದವರೂ ರೂಢಿ ಪಠ್ಯಕ್ರಮಗಳ ಬಗ್ಗೆ ವಿಶೇಷ ಆಸಕ್ತಿಯಿಂದ ನಕಾಶೆಯನ್ನು ರೂಪಿಸಿದ್ದರು. ಈ ಸಂಸ್ಥೆ ಒಟ್ಟು ಸಮುದಾಯದಲ್ಲೊಂದು ವಿಶೇಷ ಸ್ಥಾನವನ್ನು ಗಳಿಸಿತ್ತಲ್ಲದೆ, ಮುಂದೆ ಪಂಜಾಬಿನಲ್ಲಿ ಮಹಿಳೆಯರಿಗೆ ಸಂಬಂಧಿಸಿದಂತೆ ಬಂದ ಎಷ್ಟೋ ಬದಲಾವಣೆಗಳಿಗೆ ಪ್ರೇರಣೆಯನ್ನೂ ಒದಗಿಸಿತು.

### ೪.೪. ಮಹಿಳಾ ಶಿಕ್ಷಣದ ಪ್ರಗತಿದಾಯಕ ಹೆಜ್ಜೆಗಳು

೧೮೪೯ರಲ್ಲಿ ಬೆಥೂನ್ ಶಾಲೆ ಆರಂಭವಾದದ್ದಕ್ಕೂ, ೧೮೮೨ರಲ್ಲಿ ಹಂಟರ್ ರವರ ಇಂಡಿಯನ್ ಎಜ್ಯುಕೇಷನ್ ಕಮಿಷನ್ನು ಭಾರತದಲ್ಲಿ ಶಿಕ್ಷಣದ ಪ್ರಗತಿಯನ್ನು ಕುರಿತು ಪರಿಶೀಲನೆ

ನಡೆಸಿದ್ದಕ್ಕೂ ನಡುವಣ ವರ್ಷಗಳಲ್ಲಿ ಬಾಲಕಿಯರಿಗಾಗಿ ಪ್ರಾಥಮಿಕ ಶಾಲೆಗಳನ್ನೂ, ಶಿಕ್ಷಣ ತರಬೇತಿ ಸಂಸ್ಥೆಗಳನ್ನೂ ಅಭಿವೃದ್ಧಿಪಡಿಸಲು ಹಲವಾರು ಗಂಭೀರ ಪ್ರಯತ್ನಗಳೇನೋ ನಡೆದವು. ಮಹಿಳೆಯರ ಉನ್ನತ ಶಿಕ್ಷಣ ಅಥವಾ ಸ್ತ್ರೀಪುರುಷರ ಸಹ ಶಿಕ್ಷಣದ ಮಾತು ಮಾತ್ರ ವಿರೋಧಗಳನ್ನೆದುರಿಸುತ್ತಲೇ ಇದ್ದವು. ಶಾಲೆಗೆ ಹೋಗದ ಹೋಗಲರ್ಹ ವಯಸ್ಸಿನ ಪ್ರತಿಶತ ೯೮ಕ್ಕಿಂತಲೂ ಹೆಚ್ಚಿನ ಹುಡುಗಿಯರು ಶಾಲೆಗಳಿಗೆ ದಾಖಲಾಗಿರಲಿಲ್ಲ ಎಂಬ ಸಂಗತಿಯನ್ನು ಗಂಭೀರವಾಗಿ ಪರಿಗಣಿಸಿದ ಹಂಟರ್ ಕಮಿಷನ್ ವರದಿಯು ಬಾಲಕಿಯರ ಶಾಲೆಗಳಿಗೆ ಹೆಚ್ಚು ಧಾರಾಳವಾಗಿ ಅನುದಾನಗಳನ್ನು ನೀಡಬೇಕೆಂದು, ಹೆಚ್ಚು ವಿದ್ಯಾರ್ಥಿ ವೇತನ ಹಾಗೂ ಬಹುಮಾನಗಳನ್ನು ನೀಡುವ ಮೂಲಕ ಬಾಲಕಿಯರಿಗೆ ಶೈಕ್ಷಣಿಕ ಅವಕಾಶಗಳನ್ನು ಹೆಚ್ಚಿಸಬೇಕೆಂದೂ ಹೇಳಿತು. ಮುಂದಿನ ಎರಡು ದಶಕಗಳಲ್ಲಿ ಉನ್ನತ ಶಿಕ್ಷಣವು ತೀವ್ರವಾಗಿ ವಿಸ್ತರಿಸಿತು. ೧೮೮೧-೮೨ರಲ್ಲಿ ಭಾರತೀಯ ವಿಶ್ವವಿದ್ಯಾಲಯಗಳಲ್ಲಿ ಒಟ್ಟು ಆರು ಮಂದಿ ಮಹಿಳೆಯರಷ್ಟೇ ಇದ್ದರಾದರು ಶತಮಾನದ ಕೊನೆಯ ವೇಳೆಗೆ ಈ ಸಂಖ್ಯೆ ೨೬೪ರಷ್ಟಾಯಿತು. ಇದೇ ವೇಳೆಗೆ ಪ್ರಾಥಮಿಕ ಶಾಲೆಗಳಲ್ಲಿ ಬಾಲಕಿಯರ ದಾಖಲಾತಿ ಸಂಖ್ಯೆ ೨೯೫೪ ರಿಂದ ೪೧೫೮೨ಕ್ಕೆ ಏರಿತೆಂಬುದೂ ಗಮನಾರ್ಹ.

ಹಂಟರ್ ಕಮಿಷನ್ ವರದಿಯಿಂದ ಮೊದಲಗೊಂಡು ಶತಮಾನದ ಅಂತ್ಯದ ವೇಳೆಗೆ ಪಸರಿಸಿದ ಮಹಿಳಾ ಶಿಕ್ಷಣದಲ್ಲಿ ಪ್ರಮುಖವಾದ ಘಟನೆಗಳನ್ನು ಗುರುತಿಸಬಹುದು. ಮುಂಬೈ ಮತ್ತು ಪೂನಾಗಳಲ್ಲಿ ೧೮೮೯ರಲ್ಲಿ ಶಾರದಾ ಸದನವನ್ನು ಸ್ಥಾಪಿಸಿದ ಪಂಡಿತಾ ರಮಾಬಾಯಿ, ೧೮೯೩ರಲ್ಲಿ ಕಲ್ಕತ್ತಾದಲ್ಲಿ ಮಹಾಕಾಳಿ ಪಾಠಶಾಲಾವನ್ನು ಆರಂಭಿಸಿದ ಮಾತಾಜಿ ತಪಸ್ವಿನಿ ಹಾಗೂ ೧೮೯೬ರಲ್ಲಿ ವಿಧವೆಯರಿಗಾಗಿ ಪೂನಾದಲ್ಲಿ ಶಾಲೆಯೊಂದನ್ನು ತೆರೆದ ಡಿ.ಕೆ. ಕರ್ವೆ ಈ ಮೂವರ ಪ್ರಯತ್ನಗಳ ಮಹತ್ವವನ್ನು ತುಂಬಾ ವಿಶೇಷವಾಗಿಯೇ ಪರಿಗಣಿಸಬೇಕಾಗುತ್ತದೆ. ಏಕೆಂದರೆ ಅಲ್ಲಿಯವರೆಗೂ ಧಾರ್ಮಿಕ ಸುಧಾರಣಾ ಸಂಸ್ಥೆಗಳು ಮಹಿಳೆಯರಿಗಾಗಿ ನಡೆಸುತ್ತಿದ್ದ ಶಾಲೆಗಳಿಗಿಂತ ವಿಭಿನ್ನ ರೀತಿಯ ಪ್ರಯತ್ನಗಳನ್ನು ಇವರ ಶಾಲೆಗಳು ನಡೆಸಿದವು. ಈಗ ನಾವು ಗ್ರಹಿಸುವ ಅರ್ಥದಲ್ಲೇನೂ ಇವುಗಳನ್ನು ಜಾತ್ಯತೀತ ಎಂದು ಹೇಳಲಾಗದು. ಹಾಗೆ ನೋಡಿದರೆ ಜಾತಿ, ವರ್ಗ, ಸಮುದಾಯಗಳ ಸಂಕುಚಿತ ವಿಂಗಡಣೆಯನ್ನು ಪಾಲಿಸುತ್ತಿದ್ದವು. ಆದರೂ ಆ ಕಾಲಕ್ಕೆ ಈ ಮೂವರು ನಡೆಸಿದ ಪ್ರಯತ್ನಗಳನ್ನು ವಿಶೇಷಗಳೆಂದೇ ಪರಿಗಣಿಸಬೇಕಾಗುತ್ತದೆ. ಏಕೆಂದರೆ ಮಹಿಳಾ ಶಿಕ್ಷಣದ ರೂಪಿಕೆ ಹಾಗೂ ನಿರ್ವಚನಗಳ ಸಂದರ್ಭಗಳಲ್ಲಿ ಸ್ವತಃ ಮಹಿಳೆಯರು ಪಾಲ್ಗೊಳ್ಳಲು ಇಲ್ಲಿ ಹೆಚ್ಚಿನ ಅವಕಾಶಗಳನ್ನು ಕಲ್ಪಿಸಲಾಯಿತು. ಇದರ ನಂತರ ಪಂಡಿತಾ ರಮಾಬಾಯಿ, ಮಹಾರಾಣಿ ತಪಸ್ವಿನಿ, ಕೇಶವ ಕರ್ವೆ ಅವರ ಪ್ರಯತ್ನದಿಂದ ಮಹಿಳೆಯರ ಶಿಕ್ಷಣಕ್ಕೆ ವಿಶೇಷ ಆದ್ಯತೆ ನೀಡಲು ಅನೇಕ ಸಂಸ್ಥೆಗಳನ್ನು ಪ್ರಾರಂಭಿಸಿತು.

**೪.೫. ಇಪ್ಪತ್ತನೆಯ ಶತಮಾನದ ಆದಿಭಾಗ**

ಶತಮಾನದ ಅಂತ್ಯದ ವೇಳೆಗೆ ಬಾಲಕಿಯರ ಶಾಲೆಗಳ ಸಂಖ್ಯೆ ಹಾಗೂ ಶಾಲೆಗಳಲ್ಲಿ ಬಾಲಕಿಯರ ಸಂಖ್ಯೆಯಲ್ಲಿ ಏರಿಕೆಯಾಯಿತು. ಮೊದಲನೆಯ ಮಹಾಯುದ್ಧ ಕೊನೆಯಾಗುವ ಸಂದರ್ಭದಲ್ಲಿ

ದೇಶದಾದ್ಯಂತ ಬಾಲಕಿಯರ ಶಾಲೆಗಳು ದ್ವಿಗುಣಗೊಂಡವು. ಶಾಲಾ ಹಂತದಲ್ಲಿ ಬಾಲಕಿಯರ ಸಂಖ್ಯೆ ಮೂರುಪಟ್ಟು ಹೆಚ್ಚಾದರೆ ವಿಶ್ವವಿದ್ಯಾಲಯಗಳಲ್ಲೂ ಅವರು ಸಾಕಷ್ಟು ಹೆಚ್ಚಿನ ಸಂಖ್ಯೆಯಲ್ಲಿ ಕಾಣತೊಡಗಿದ್ದರು. ತಂದೆ-ತಾಯಿಯರಿಗೆ ಆಯ್ಕೆಗಳೂ ಹೆಚ್ಚು ಇದ್ದವು. ತಮ್ಮ ಹೆಣ್ಣುಮಕ್ಕಳಿಗೆ ಎಂತಹ ಶಾಲೆಗಳಾದರೆ ಉತ್ತಮ?, ಅಲ್ಲಿನ ಪಠ್ಯಕ್ರಮ ಹೇಗಿದ್ದರೆ ಸೂಕ್ತ?, ಕಲಿಕೆಯ ಮಾಧ್ಯಮದ ಭಾಷೆ ಯಾವುದಿರಬೇಕು? ಎಂಬ ತಮ್ಮ ಅನಿಸಿಕೆಗಳಿಗೆ ಅವಕಾಶಗಳಿದ್ದುದರಿಂದ ಅವರ ಎಷ್ಟೋ ಹಿಂಜರಿಕೆಗಳು ಇಲ್ಲವಾದವು. ಸಂಪ್ರದಾಯಸ್ಥರಿರಲಿ, ಉದಾರವಾದಿಗಳಿರಲಿ, ಧರ್ಮನಿಷ್ಠರಿರಲಿ, ಧರ್ಮಾತೀತರಿರಲಿ, ಆಂಗ್ಲ ವ್ಯಾಮೋಹಿಗಳಿರಲಿ, ಆಂಗ್ಲ ವಿರೋಧಿಗಳಿರಲಿ ಎಲ್ಲರಿಗೂ ಆಯ್ಕೆಯ ಅವಕಾಶಗಳಿದ್ದವು. ಪರಂಪರಾಗತ ಸಮಾಜವು ಆಧುನಿಕವಾಗಿ ಪರಿವರ್ತಿತವಾಗುವ ಹಂತವು ಸುಗಮವಾಗಿ ಸಾಗಬೇಕೆಂದರೆ ಸಮಾಜದ ಮಹಿಳೆಯರಿಗೆ ಸೂಕ್ತಶಿಕ್ಷಣ ದೊರೆಯಬೇಕೆಂಬ ಮಾರ್ಗವೊಂದೇ ಆದರ್ಶಪ್ರಾಯವಾದ ದಾರಿ ಎಂಬ ಗಟ್ಟಿಯಾದ ಅಭಿಪ್ರಾಯವನ್ನು ಡಿ.ಕೆ. ಕರ್ವೆಯವರಂತಹ ಸಮಾಜಿಕ ಶಿಕ್ಷಣತಜ್ಞರು ಶಿಕ್ಷಣವೇತ್ತರೂ, ಶಿಕ್ಷಣ ಸಂಸ್ಥೆಗಳ ಸಂಸ್ಥಾಪಕರೂ ವಿಸ್ತರಿಸಿದರು.

ಮಹಾರಾಣಿ ತಪಸ್ವಿನಿ ಹಾಗೂ ಡಿ.ಕೆ. ಕರ್ವೆಯಂಥವರು ಸಂಪ್ರದಾಯಸ್ಥ ಮನೆಗಳ ತರುಣಿಯರಿಗೆ ಶಿಕ್ಷಣದ ಅವಕಾಶವನ್ನೇನೋ ಕಲ್ಪಿಸಿದರಾದರೂ ಶಿಕ್ಷಣ ಅವರನ್ನು ಆಧುನಿಕ ಜಗತ್ತಿನಲ್ಲಿ ಚೆನ್ನಾಗಿ ಹೊಂದಿಕೊಂಡು ಇನ್ನಷ್ಟು ಉತ್ತಮ ಪರಿಣತಿಯ ಮಹಿಳೆಯರನ್ನಾಗಿ ತಯಾರು ಮಾಡಲು ನೆರವಾಗುವಂಥದಾಗಿರಬೇಕೆಂಬುದೇ ಈ ಶೈಕ್ಷಣಿಕ ತಜ್ಞರ ಆಶಯ. ಸಂಪ್ರದಾಯವಾದಿ ಸಮುದಾಯಗಳ ಬೆಂಬಲವನ್ನು ಗಳಿಸುವ ಉದ್ದೇಶದಿಂದ ಶಿಕ್ಷಣ ಸಂಸ್ಥೆಗಳು ತಮ್ಮ ಪಠ್ಯಕ್ರಮಗಳಲ್ಲಿ ಗೃಹವಿಜ್ಞಾನ, ಧಾರ್ಮಿಕ ಸಾಹಿತ್ಯಗಳಂತಹ ವಿಷಯಗಳನ್ನು ಪ್ರಧಾನಗೊಳಿಸಿ ಸೇರಿಸಿದರು. ಡಿ.ಕೆ. ಕರ್ವೆಯವರು ಬಾಲ್ಯ ವಿಧವೆಯರು ಸ್ವಾವಲಂಬಿಗಳಾಗಿ ಬಾಳಲು ಸಾಧ್ಯವಾಗಬೇಕೆಂಬ ಕಾರಣಕ್ಕೆ ಅವರಿಗೆ ಶಿಕ್ಷಣವನ್ನು ನೀಡಿದರೆಂಬುದು ನಿಜವಾದರೂ, ಉಳಿದಂತೆ ಅವಿವಾಹಿತ ತರುಣಿಯರಿಗೆ ದೊರೆಯಬೇಕಾದ ಶಿಕ್ಷಣವು ಅವರನ್ನು ಉತ್ತಮ ಮಹಿಳೆಯರನ್ನಾಗಿ, ಒಳ್ಳೆಯ ತಾಯಂದಿರನ್ನಾಗಿ ರೂಪಿಸಲು ನೆರವಾಗುವಂತಿರಬೇಕು ಎಂಬ ನಿಚ್ಚಳ ಅಭಿಪ್ರಾಯವನ್ನೇ ಹೊಂದಿದ್ದರು.

ಇಬ್ಬರೂ ಶಿಕ್ಷಣತಜ್ಞರಿಗಿಂತ ತೀರಾ ಭಿನ್ನವಾಗಿ ಪಂಡಿತಾ ರಮಾಬಾಯಿ ಕಾಣಿಸುತ್ತಾರೆ. ತನ್ನ ಸ್ವಂತ ಸಮಾಜದ ಬಗೆಗೆ ಆಕೆಗೆ ಸ್ವತಃ ಬಹಳ ವಿರೋಧಗಳಿದ್ದವು. ಹಿಂದೂ ಸಮಾಜವು ಕ್ರಿಶ್ಚಿಯನ್‌ಗೆ ಪರಿವರ್ತಿತವಾಗಿ ಬಿಡಬೇಕು ಎಂದು ಆಕೆಗೆ ತೋರಿತ್ತು. ಹಲವಾರು ಯಶಸ್ವೀ ಶಾಲೆಗಳನ್ನೇನೋ ಆಕೆ ಸ್ಥಾಪಿಸಿ ಮುನ್ನೆಡಿಸಿದರು. ಆರ್ಥಿಕ, ಮಾನಸಿಕ, ನೈತಿಕ ಬೆಂಬಲಗಳಿಗಾಗಿ ಆಕೆ ವಿದೇಶೀ ಮಿಷನರಿಗಳತ್ತಲೇ ಕೈ ಚಾಚಿದ್ದು ಪ್ರಮುಖವಾಗಿ ಕಂಡುಬರುತ್ತವೆ. ಇತ್ತ ಅವರ ಸ್ಥಳೀಯ ಸಮಾಜವು ಅವಳನ್ನು ಟೀಕಿಸುತ್ತಿತ್ತು ಹಾಗೂ ಬೇರೆ ದೃಷ್ಟಿಯಿಂದ ನೋಡುತ್ತಿದ್ದರು. ರಮಾಬಾಯಿಯವರ ಮುಖ್ಯ ಆಶಯ ಮಹಿಳೆಯರು ಸ್ವಾವಲಂಬಿಗಳಾಗಬೇಕು ಎಂಬುದಾಗಿತ್ತು. ಕೆಳವರ್ಗದ ಹೆಂಗಸರ ಬಗೆಗೆ ಆಕೆಯ ಗಮನ ಕೇಂದ್ರೀಕೃತವಾಗಿದ್ದಾಗ ಇದೊಂದು ಅಪ್ಯಾಯಮಾನವಾದ

ಆದರ್ಶವೆನಿಸುತ್ತಿತ್ತು. ಆದರೆ ಅದೇ ಈ ಗಮನ ಉತ್ತಮ ಜಾತಿ ವರ್ಗಗಳ ಕುಟುಂಬಗಳಿಗೆ ಹರಿದಾಗ ಅಲ್ಲಿನ ಪುರುಷರು ತಮ್ಮ ಹೆಂಡತಿಯರೂ, ಹೆಣ್ಣುಮಕ್ಕಳೂ ಆರ್ಥಿಕವಾಗಿ ಸ್ವತಂತ್ರರಾಗುವ ವಿಚಾರವನ್ನು ಒಪ್ಪುತ್ತಲೇ ಇರಲಿಲ್ಲ.

೧೯೦೦-೧೯೨೦ರ ನಡುವಿನ ಅವಧಿಯಲ್ಲಿ ೧೯ನೆಯ ಶತಮಾನದ ಸಮಾಜದ ಸುಧಾರಣೆಗಳು ಹಾಗೂ ಶಿಕ್ಷಣ ಪ್ರಯತ್ನಗಳ ಲಾಭವನ್ನು ಪಡೆದಿದ್ದ ಮಹಿಳೆಯರು ತಮ್ಮದೇ ಸ್ವಂತ ಶಾಲೆಗಳನ್ನು ತೆರೆಯಲು ಮುಂದಾಗ ತೊಡಗಿದರು. ಮಹಿಳಾ ಶಿಕ್ಷಣವನ್ನು ಕುರಿತು ಸಂಪ್ರದಾಯವಾದಿಗಳ ವರ್ತನೆ ಹೇಗಿರುತ್ತದೆಂಬ ಕಲ್ಪನೆ ಹೊಸ ತಲೆಮಾರಿನ ಮಹಿಳೆಯರಿಗೂ ಚೆನ್ನಾಗಿಯೇ ಗೊತ್ತಿತ್ತು. ಆದರೂ ಹಿಂದಿನ ಚಿತ್ರದಲ್ಲೀಗ ಸಾಕಷ್ಟು ಬದಲಾವಣೆಯೂ ಬರತೊಡಗಿತ್ತು. ಹೆಣ್ಣುಮಕ್ಕಳಿಗೆ ಶಿಕ್ಷಣ ಸಿಗಬೇಕೆಂಬ ಆಶಯ ಕ್ರಮೇಣ ವಿಸ್ತರಿಸತೊಡಗಿತ್ತು. ಆದರೆ ಈಗ ತಂದೆ ತಾಯಿಯರಿಗೆ ಈ ಹೊಸ ಶಾಲೆಗಳು ಪರಂಪರಾಗತ ಪದ್ಧತಿಗಳನ್ನೇ ಅನುಸರಿಸಲಾಗುತ್ತದೆ ಎಂಬ ಆಶ್ವಾಸನೆಯನ್ನೂ ಕೊಟ್ಟು ಅವರ ವಿಶ್ವಾಸವನ್ನು ಗಳಿಸಲೇಬೇಕಾಗಿತ್ತು. ಈ ಹಿನ್ನೆಲೆಯಲ್ಲಿ ಶಿಕ್ಷಣದಲ್ಲಿನ ಬದಲಾವಣೆಗಳನ್ನು ಗುರುತಿಸಲು ಇಬ್ಬರು ಮಹಿಳೆಯರು ನಡೆಸಿದ ಶೈಕ್ಷಣಿಕ ಪ್ರಯತ್ನಗಳನ್ನು ನಿದರ್ಶನಗಳಾಗಿ ನೋಡಬಹುದು. ಬೇಗಂ ರೊಕೆಯಾ ಹಾಗೂ ಸಿಸ್ಟರ್ ಸುಬ್ಬಲಕ್ಷ್ಮಿಯವರು ತಮ್ಮ ಸಂದರ್ಭಗಳಲ್ಲಿ ಈ ಸಾಮಾಜಿಕ ಸಮನ್ವಯವನ್ನು ಸಾಧಿಸಲು ಶ್ರಮಿಸಿದರು.

ಮೇಲಿನ ನಿದರ್ಶನಗಳು ಭಾರತದಲ್ಲಿ ಮಹಿಳಾ ಶಿಕ್ಷಣದ ಬಗೆಗೆ ನಡೆದ ಬಹುಮಟ್ಟಿನ ಯಶಸ್ವೀ ಪ್ರಯೋಗಗಳ ಹಿಂದೆಯೂ ವಿದ್ಯಾವಂತರಾದ ಭಾರತೀಯ ಮಹಿಳೆಯರ ಕಠಿಣ ಪರಿಶ್ರಮವೇ ಇತ್ತೆಂಬುದನ್ನು ಸಾದರಪಡಿಸುತ್ತವೆ. ಎಷ್ಟೋ ಶಾಲೆಗಳಿಗೆ ಪ್ರಾದೇಶಿಕ ಮಿತಿಗಳಿದ್ದವು. ಹಲವು ಧರ್ಮ, ಜಾತಿ ಬಂಧನಗಳಿದ್ದವು. ಮತ್ತೆ ಕೆಲವು ಸಾಮುದಾಯಿಕ ಸೂಕ್ಷ್ಮ ಪ್ರಶ್ನೆಗಳೂ ಇದ್ದವು. ಈ ಶಾಲೆಗಳು ಹೆಣ್ಣುಮಕ್ಕಳಿಗೆಂದೇ ವಿಶೇಷವಾಗಿ ಆರಂಭಗೊಂಡವು. ಅಧ್ಯಾಪಕಿಯರೂ ಕೇವಲ ಮಹಿಳೆಯರು ಮಾತ್ರವೇ. ಇನ್ನು ಪಠ್ಯಕ್ರಮಗಳು ಕೂಡ ಈ ಲಿಂಗ ವ್ಯವಸ್ಥೆಯ ತಾರತಮ್ಯ ಸಾಮಾಜೀಕರಣದ ಸೂತ್ರಕ್ಕೆ ಕಟ್ಟು ಬಿದ್ದೇ ರೂಪುಗೊಳ್ಳುವ ಅನಿವಾರ್ಯತೆಯೂ ಇತ್ತು.

ಬ್ರಿಟಿಷ್ ಪ್ರಭುಗಳು, ಭಾರತೀಯ ಪುರುಷ ಸುಧಾರಕರು ಹಾಗೂ ವಿದ್ಯಾವಂತ ಭಾರತೀಯ ಮಹಿಳೆಯರು ಹೀಗೆ ಮೂರು ಮುಖ್ಯ ಗುಂಪುಗಳು ಈ ದೇಶದ ಮಹಿಳಾ ಶಿಕ್ಷಣದ ಬಗೆಗೆ ಕೆಲಸ ಮಾಡಿದವು. ಒಟ್ಟಾರೆಯಾಗಿ ಮಹಿಳಾ ಶಿಕ್ಷಣದಿಂದ ದೊರೆಯಲಿರುವ ಫಲಿತಾಂಶಗಳ ಬಗೆಗೂ ಇವರೆಲ್ಲರೂ ಆಸೆಯ ಕನಸುಗಳನ್ನು ಕಂಡಿದ್ದರು. ಈ ಕನಸುಗಳು ಅದೆಷ್ಟರ ಮಟ್ಟಿಗೆ ಸಫಲಗೊಂಡವು ಎಂಬ ಪ್ರಶ್ನೆಗೆ ಉತ್ತರವನ್ನು ಕಾಣಲು ನಾವು ಇಪ್ಪತ್ತನೆಯ ಶತಮಾನದ ಮೊದಲ ಎರಡು ದಶಕಗಳಲ್ಲಿ ಮಹಿಳಾ ಶಿಕ್ಷಣದ ಪ್ರಕ್ರಿಯೆ ಮತ್ತು ಪರಿಣಾಮಗಳು ಹೇಗಿದ್ದವು ಎಂಬುದರತ್ತ ಗಮನ ಹರಿಸಬೇಕಾಗುತ್ತದೆ.

ಬ್ರಿಟಿಷರ ಮುಖ್ಯಉದ್ದೇಶ ತಮ್ಮ ಸರ್ಕಾರಿ ನೌಕರರ ಪತ್ನಿಯರು ವಿದ್ಯಾವಂತರಾದರೆ ಆ ನೌಕರರು ಇನ್ನಷ್ಟು ವಿಧೇಯತೆಯಿಂದ ಸರ್ಕಾರದ ಸೇವೆಗೈಯುತ್ತಾರೆ. ಏಕೆಂದರೆ ಕೇವಲ ದೇಶೀ ಶೈಲಿಯಲ್ಲಿ ಪರಂಪರಾಗತ ವಿಷಯಗಳಲ್ಲಷ್ಟೇ ತರಬೇತಿ ಹೊಂದಿದ ಅವಿದ್ಯಾವಂತ ಪತ್ನಿಯರಿದ್ದರೆ ಮನೆ ಕೆಲಸಗಳಲ್ಲಿ ಸ್ಪಷ್ಟವಾಗಿ ಮಹಿಳೆಯರು ಮತ್ತು ಪುರುಷರದು ಎಂಬ ಎರಡು ಭಾಗಗಳಾಗುತ್ತವೆ. ಭಾರತೀಯ ಮಹಿಳೆಗೆ ಇಂಗ್ಲಿಷ್ ಶಿಕ್ಷಣ ತರಬೇತಿ ಸಿಕ್ಕಾಗ ಆಕೆ ತನ್ನ ಮಕ್ಕಳನ್ನು ಇಂಗ್ಲಿಷ್ ಪ್ರೇಮಿಗಳಾಗುವಂತೆ ಬೆಳೆಸುತ್ತಾಳೆ ಎಂಬ ನಂಬಿಕೆಯೂ ಅವರದಾಗಿತ್ತು. ಆದರೆ ಅವರ ಕನಸು ಅಷ್ಟೇನೂ ಫಲಪ್ರದವಾಗಲಿಲ್ಲ. ಶಿಕ್ಷಣ ಪಡೆದ ಹೆಂಗಸರು ಅವರಿಗೆ ವಿಧೇಯರಾಗಿಬಿಟ್ಟರೆಂದೇನಲ್ಲ. ಸರ್ಕಾರಿ ನೌಕರರ ಪತ್ನಿಯರಲ್ಲಿ ತಾವು ತಮ್ಮ ಗಂಡಂದಿರಿಗೆ ನಿಷ್ಠ ಸಹಾಯಕಿಯರಾಗಿ ಇರಬೇಕೆಂಬ ಭಾವದಿಂದಾಗಿಯಷ್ಟೇ ಸ್ವಲ್ಪಮಟ್ಟಿನ ಇಂಗ್ಲಿಷ್ ನಿಷ್ಠೆ ಇತ್ತು. ಅವರಲ್ಲೂ ಕೆಲವರು ಈ ನಿಷ್ಠೆ ತಮಗೆ ಅನಿವಾರ್ಯವೇ ಎಂಬ ಪ್ರಶ್ನೆಯನ್ನು ಹಾಕಿಕೊಂಡದ್ದೂ ಉಂಟು. ಒಟ್ಟಾರೆ ಹೇಳುವುದಾದರೆ ಭಾರತ ದಲ್ಲಿ ಇಂಗ್ಲಿಷ್‌ರ ವರ್ತನೆಯನ್ನು ಕುರಿತು ಮಹಿಳೆಯರು ಟೀಕಿಸುತ್ತಿದ್ದುದೇ ಹೆಚ್ಚು.

ಸುಧಾರಣಾವಾದಿ ಭಾರತೀಯ ಪುರುಷರಿಗೆ ಮಹಿಳಾ ಶಿಕ್ಷಣವು ಪ್ರಗತಿಶೀಲ ಸಮಾಜ ನಿರ್ಮಾಣಕ್ಕೆ ಸಾಧನವಾಗಿ ಕಂಡಿತು. ಮಹಿಳೆಯರು ವಿದ್ಯಾವತಿಯರಾದರೆ, ಇನ್ನು ಮುಂದೆ ಯಾರೂ ವಿನಾಶದತ್ತ ಜಾರುತ್ತಿರುವ ಹಿಂದುಳಿದ ಸಮಾಜವೆಂದು ಭಾರತೀಯ ಸಮಾಜವನ್ನು ಕರೆಯಲು ಸಾಧ್ಯವಿಲ್ಲ. ಇನ್ನು ವೈಯಕ್ತಿಕ ಮಾಹಿತಿ ಬಂದರೆ ಸ್ವತಃ ವಿದ್ಯಾವಂತರಾದ ಆ ಪುರುಷರಿಗೆ ವಿದ್ಯಾವತಿ ಯರಾದ ಮಹಿಳೆಯರನ್ನು ಸಂಗಾತಿಗಳನ್ನಾಗಿ ಹೊಂದುವ ಮಹದಾಸೆ ತುಂಬಿತ್ತು. ತಮ್ಮ ಹೊಸ ವೃತ್ತಿಗಳಲ್ಲಿ ತಾವು ಮುಂದುವರೆಯಬೇಕಾದರೆ ವಿದ್ಯಾವತಿಯಾದ ಮಹಿಳೆಯಾದರೆ ತಮಗೆ ಸೂಕ್ತ ಬೆಂಬಲವಾಗಿ ನಿಲ್ಲುತ್ತಾಳೆ ಎಂಬ ಮುಂದಾಲೋಚನೆ ಅವರದಾಗಿತ್ತು. ತಮ್ಮ ಜಾತಿ ಸಮುದಾಯಗಳ ಇತರ ನತದೃಷ್ಟ ಮಹಿಳೆಯರ ಹೊಣೆಯನ್ನೂ ಈ ವಿದ್ಯಾವಂತರು ನಿರ್ವಹಿಸಬೇಕೆಂಬುದು ಅವರ ಉದ್ದೇಶವಾಗಿತ್ತು. ಇನ್ನು ರಾಷ್ಟ್ರಮಟ್ಟದಲ್ಲಿಯಾದರೋ ಪುರುಷರಾದ ತಾವು ರಾಷ್ಟ್ರ ರಾಜಕಾರಣದಲ್ಲಿರ ಬೇಕಾದ ಸಂದರ್ಭದಲ್ಲಿ ತಾವು ಹಿಂದೆ ಉಳಿಸಿ ಹೋಗುವ ಸಮಾಜ ಸುಧಾರಣೆಯ ಕೆಲಸಗಳನ್ನು ಮುಂದುವರಿಸಿಕೊಂಡು ಹೋಗುವ ಭಾರವನ್ನು ಕೂಡ ಈ ವಿದ್ಯಾವಂತರು ಹೊರಲು ಸಮರ್ಥರಾಗು ತ್ತಾರೆಂಬ ಆಶಯ ಕೂಡ ಅವರದಾಗಿತ್ತು.

ವಿದ್ಯಾವಂತ ಮಹಿಳೆಯರು ಸರ್ಕಾರಿ ನೌಕರಿಗಳಿಗೆ ಸೇರಿ ಊರಿನ ಮೂಲ ಕುಟುಂಬದಿಂದ ಹೊರಬಿದ್ದು ತಮ್ಮ ನೌಕರಿಯ ಸ್ಥಳಗಳಿಗೆ ಹೋಗುತ್ತಿದ್ದ ಪತಿಯರನ್ನು ಹಿಂಬಾಲಿಸುತ್ತಿದ್ದರು. ಸುಮ್ಮನೆ ಕೂರುವ ಬದಲು ಶಾಲೆಗಳನ್ನು ತೆರೆಯುತ್ತಿದ್ದರು. ಜಿಲ್ಲಾ ನ್ಯಾಯಾಧೀಶರ ಎದುರೂ ಕೂತು ಮಾತನಾಡಬಲ್ಲವರಾಗಿದ್ದರು. ಲಕ್ಷ್ಯವಹಿಸಿ ಅಲಂಕಾರ ಮಾಡಿಕೊಂಡು ಇಂಗ್ಲಿಷಿನಲ್ಲಿ ನಿರ್ಗಳವಾಗಿ ಮಾತನಾಡುತ್ತಾ ಮನೆಯ ಒಳಗೂ ಹೊರಗೂ ಕಾರ್ಯನಿರ್ವಹಿಸಬಲ್ಲ ಮಹಿಳೆಯರಿಂದ ಗಂಡಂದಿರಿಗೆ

ವೃತ್ತಿಗಳಲ್ಲೂ ನೆರವು ದೊರೆಯುತ್ತಿತ್ತು. ಕ್ರಮೇಣ ಪುರುಷರು ರಾಜಕೀಯ ಕ್ಷೇತ್ರದಲ್ಲಿ ಹೆಚ್ಚು ಹೆಚ್ಚು ಕ್ರಿಯಾಶೀಲರಾಗುತ್ತಾ ಹೋಗುವುದು ಅಭ್ಯಾಸವಾದಂತೆ, ತೆರವಾದ ಸಮಾಜ ಸುಧಾರಣೆಯ ಕೆಲಸಗಳನ್ನು ಮಹಿಳೆಯರು ಕೈಗೆತ್ತಿಕೊಂಡರು. ಏಕೆಂದರೆ ರಾಜಕೀಯದಲ್ಲಿಳಿದು ಜನತೆಯನ್ನು ಜಾಗೃತಗೊಳಿಸುವ ಕ್ರಿಯೆ ಹಾಗೂ ಸಮಾಜ ಸುಧಾರಣೆಯ ಕೆಲಸಗಳನ್ನು ಒಂದರೊಳಗೊಂದು ಹೊಂದಿಸಿ ದುಡಿಯುವುದು ಪುರುಷರಿಗೆ ಸಾಧ್ಯವಾಗುವ ಕೆಲಸವಾಗಿರಲಿಲ್ಲ.

ಶಿಕ್ಷಣ ಪಡೆದ ಮೊದಲ ತಲೆಮಾರಿನ ಮಹಿಳೆಯರು ತಮಗೂ ಧ್ವನಿಗಳಿವೆ ಎಂಬುದನ್ನು ಕಂಡುಕೊಂಡರು. ತಮ್ಮ ಬದುಕಿನ ಬಗೆಗೆ ಬರೆದರು. ತಮ್ಮಂತೆಯೇ ಇರುವ ಇತರ ಮಹಿಳೆಯರ ಪರಿಸ್ಥಿತಿಗಳನ್ನು ವಿವರಿಸಿದರು. ಮುಂದಿನ ತಲೆಮಾರಿನವರು ಈ ಬಗ್ಗೆ ಕ್ರಿಯಾಶೀಲರಾದರು. ಮಹಿಳೆಯರ ಅಗತ್ಯಗಳೇನು ಎಂಬುದನ್ನು ಅಭಿವ್ಯಕ್ತಿಸತೊಡಗಿದರು. ಮಹಿಳೆಯ ಅವಕಾಶಗಳನ್ನು ಮುಚ್ಚಿ ಹಾಕಿರುವ ಸಮಾಜದ ರೀತಿ ನೀತಿಗಳನ್ನು ಪ್ರಶ್ನಿಸಿದರು. ವಿದೇಶಿ ಸರ್ಕಾರದ ಅನ್ಯಾಯಗಳನ್ನು ಖಂಡಿಸಿದರು. ತಮ್ಮದೇ ಆದ ಸಂಘ ಸಂಸ್ಥೆಗಳನ್ನು ಕಟ್ಟಿಕೊಂಡರು. ಆರಂಭದಲ್ಲಿ ಈ ಸಂಸ್ಥೆಗಳೂ ಕೂಡ ಹಿಂದಿನ ಪುರುಷ ಸ್ಥಾಪಿತ ಸಂಸ್ಥೆಗಳ ರೀತಿಯದೇ ಆದ ಸಂಪ್ರದಾಯನಿಷ್ಠ ರೀತಿ ರಿವಾಜುಗಳ ಚೌಕಟ್ಟಿನಲ್ಲೇ ಕೆಲಸ ಮಾಡುತ್ತಿದ್ದವೆಂಬುದು ನಿಜವೇ ಆದರೂ ಹೀಗೆ ಮಾಡುವುದು ಆಗ ಅವರಿಗೆ ಅನಿವಾರ್ಯವಾಗಿತ್ತೆಂಬುದನ್ನು ಅರ್ಥಮಾಡಿಕೊಳ್ಳಬೇಕು. ಅವರೇನೂ ಸಂಪೂರ್ಣ ಸಮ್ಮತಿಯಿಂದ ಹಿಂದಿನ ಸ್ಥಿತಿಗತಿಗಳಲ್ಲೇ ಬದುಕೋಣ ಎಂಬ ವ್ರತವನ್ನು ಹಿಡಿದಿರಲಿಲ್ಲ. ವಾಸ್ತವದಲ್ಲಿ ತಮ್ಮ ಬದುಕು ಹೀಗಿದೆ ಎಂಬುದು ಅವರಿಗೆ ಅರ್ಥವಾಗಿತ್ತು. ಈ ಅಧೀನ ಸ್ಥಿತಿಯಿಂದ ಪಾರಾಗುವ ದಿನಗಳಿಗಾಗಿ ಅವರು ಕಾಯಬೇಕಾಗಿತ್ತು.

ಮಹಿಳಾ ಶಿಕ್ಷಣದ ಅಭಿವೃದ್ಧಿಗಾಗಿ ಸಂಸ್ಥೆಗಳನ್ನು ಹುಟ್ಟುಹಾಕಿ ಬೆಳೆಸುವ ತಮ್ಮ ಪ್ರಯತ್ನಗಳಲ್ಲಿ ತೊಡಗಿದ ಮಹಿಳೆಯರಿಗೆ ತಮ್ಮ ಇತಿಮಿತಿಗಳ ಅರಿವು ಕೂಡ ಮೂಢತೊಡಗಿತು. ತಮ್ಮ ಪ್ರತ್ಯೇಕತೆಯನ್ನು ಮೆರೆಯಲು ಹೊರಟರೆ ಶಿಕ್ಷೆ ಕಾದಿಟ್ಟದ್ದು ಎಂಬುದು ತಿಳಿದಿತ್ತು. ಓದಿ ಬರೆಯಲು ಹೊರಡುತ್ತೇನೆಂದ ಮಹಿಳೆಗೆ ಮನೆಯೊಳಗೇ ಸಾಕಷ್ಟು ತೊಂದರೆಯಾಗುತ್ತಿತ್ತು. ಅವಳು ಸಮಸ್ಯೆಗೆ ಸಿಲುಕಿ ಅಲ್ಲೇ ಮುದುಡಿ ಹೋಗುವ ಪರಿಸ್ಥಿತಿಯಲ್ಲಿತ್ತು. ಶಾಲೆಗೆ ಹೊರಟಳೆಂದರಂತೂ ಮುಗಿದೇ ಹೋಯಿತು. ರಸ್ತೆಯಲ್ಲಿ ನಡೆದ ಮಹಿಳೆಯರು ತಮ್ಮ ಇತಿಮಿತಿಗಳನ್ನು ಗಮನಿಸುತ್ತಲೇ ಸಾಧ್ಯವಾದಷ್ಟು ಮಾತ್ರವೇ ಮುಂದುವರೆಯಬಹುದಿತ್ತು. ಆದರೆ ಅವರು ಈ ಸಂಕೀರ್ಣ ಪ್ರಕ್ರಿಯೆಯಲ್ಲಿ ಹೆಜ್ಜೆ ಹಾಕಿದ್ದಾಗಿತ್ತು. ವಿದ್ಯಾವಂತರಾಗಲು ಹೊರಟ ಮಹಿಳೆಯರು ಮುಂದೆ ಅಧ್ಯಾಪಕಿಯರೂ ಆಗ ತೊಡಗಿದ್ದರು. ೧೯ನೆಯ ಶತಮಾನದಲ್ಲಿ ಕಾಣುತ್ತಿದ್ದ ಗಡಿರೇಖೆಗಳು ಇಪ್ಪತ್ತನೆಯ ಶತಮಾನದ ಆರಂಭದ ವೇಳೆಗೆ ಗಮನಾರ್ಹವಾಗಿ ವಿಸ್ತರಿಸತೊಡಗಿದ್ದವು. ಒಂದು ತಲೆಮಾರಿನವರ ವರ್ತನೆ ಪ್ರತ್ಯೇಕವೆಂದು ತೋರುತ್ತಿದ್ದದ್ದು ಮುಂದಿನ ತಲೆಮಾರಿನ ವೇಳೆಗೆ ಸಹಜವರ್ತನೆ ಎಂದು ಒಪ್ಪಿತವಾಗತೊಡಗಿತ್ತು.

ಇವೆಲ್ಲಕ್ಕೂ ಮುಖ್ಯವಾದ ವಿಷಯವೆಂದರೆ ಇಪ್ಪತ್ತನೆಯ ಶತಮಾನದ ಆರಂಭದ ವೇಳೆಗಾಗಲೇ ಭಾರತೀಯ ಮಹಿಳೆಯರು ತಮ್ಮ ಭವಿಷ್ಯವನ್ನು ತಾವೇ ಸ್ವತಃ ಹೊಸದಾಗಿ ನಿರ್ವಚಿಸಲು ಸಮರ್ಥರಾಗತೊಡಗಿದ್ದರು.

**ಆಕರಗ್ರಂಥಗಳು**

ಗೋವಿಂದರಾಜು, (೨೦೦೪), ಕರ್ನಾಟಕದಲ್ಲಿ ಮಹಿಳಾ ಶಿಕ್ಷಣದ ಪ್ರಗತಿ : ಒಂದು ಅವಲೋಕನ, ಮಹಿಳಾ ಅಧ್ಯಯನ ಪತ್ರಿಕೆ, ಸಂಪುಟ ೬, ಸಂಚಿಕೆ ೧-೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ನಿರಂಜನಾರಾಧ್ಯ ವಿ.ಪಿ. (೨೦೦೮), ಸಾರ್ವಜನಿಕ ಶಿಕ್ಷಣ ವ್ಯವಸ್ಥೆಗೆ ಎಳ್ಳುನೀರು, ಸಾಲುಹೆಜ್ಜೆ ಪತ್ರಿಕೆ, ಸಂಪುಟ ೪, ಸಂಚಿಕೆ ೩, ಮೇ ತಿಂಗಳು.

ಮೀನಾಕ್ಷಿ ಬಾಳೆ, (೨೦೦೮), ಮಹಿಳೆ, ಶಿಕ್ಷಣ - ಅಭಿವೃದ್ಧಿ, ಸಾಲುಹೆಜ್ಜೆ ಮಾಸಪತ್ರಿಕೆ, ಮೇ ತಿಂಗಳು.

ಮಾಲಿನಿ ಭಟ್ಟಾಚಾರ್ಯ, (೨೦೦೩), ಭಾರತದಲ್ಲಿ ಶಿಕ್ಷಣ ಮತ್ತು ಮಹಿಳೆ, ಅಚಲ ತಿಂಗಳ ಪತ್ರಿಕೆ, ಜುಲೈ.

ರತ್ನಮ್ಮ ಎನ್., (೨೦೦೪), ಮಹಿಳೆ ಮತ್ತು ಸಾಕ್ಷರತೆ, ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು.

ಶ್ರೀಮತಿ ಎಚ್.ಎಸ್., (೨೦೦೧), ಆಧುನಿಕ ಭಾರತದಲ್ಲಿ ಮಹಿಳೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸೂರ್ಯನಾಥ ಯು. ಕಾಮತ್ (ಸಂ.), (೧೯೮೬), ಕರ್ನಾಟಕ ರಾಜ್ಯ ಗ್ಯಾಜಿಟಿಯರ್ ಭಾಗ-೩, ಕರ್ನಾಟಕ ರಾಜ್ಯ ಸರ್ಕಾರ, ಕರ್ನಾಟಕ ಗ್ಯಾಜಿಟಿಯರ್ ಇಲಾಖೆ, ಕಾವೇರಿ ಭವನ, ಬೆಂಗಳೂರು.

• • •

## ಅಧ್ಯಾಯ ಐದು

# ಮಹಿಳಾ ಶಿಕ್ಷಣ : ಸ್ವಾತಂತ್ರ್ಯ ನಂತರ

೫.೧. ಸಾಕ್ಷರತಾ ಪ್ರಗತಿ

೫.೨. ಶಾಲಾ ದಾಖಲಾತಿ

೫.೩. ಹೆಣ್ಣುಮಕ್ಕಳ ಶಾಲಾ ಭಾಗವಹಿಸುವಿಕೆಯಲ್ಲಿನ ಪ್ರಗತಿ

೫.೪. ಪ್ರಾದೇಶಿಕ ವೈವಿಧ್ಯತೆ

೫.೫. ಮಧ್ಯದಲ್ಲಿ ಶಾಲೆ ಬಿಡುವವರ ಪ್ರಮಾಣ

ಸ್ವಾತಂತ್ರ್ಯನಂತರ ಭಾರತದಲ್ಲಿ ಮಹಿಳಾ ಶಿಕ್ಷಣಕ್ಕೆ ವಿಶೇಷವಾದ ಮಹತ್ವವನ್ನು ನೀಡಲಾಗಿದೆ. ಅಲ್ಲದೇ, ಇದನ್ನು ರಾಷ್ಟ್ರೀಯ ಕಾರ್ಯಸೂಚಿ ಎಂದು ಪರಿಗಣಿಸಲಾಗಿದೆ. ಶಿಕ್ಷಣದಲ್ಲಿ ಹೆಣ್ಣು ಮಕ್ಕಳ ಪಾಲ್ಗೊಳ್ಳುವಿಕೆಯನ್ನು ಹೆಚ್ಚಿಸುವ ದೃಷ್ಟಿಯಿಂದ, ಅವರ ಶೈಕ್ಷಣಿಕ ಪ್ರಗತಿಯ ಮೌಲ್ಯಮಾಪನಕ್ಕೆ ಆಗಿಂದಾಗ್ಗೆ ಆಯೋಗಗಳು ಮತ್ತು ಅಧ್ಯಯನ ಸಮಿತಿಗಳನ್ನು ನೇಮಿಸಲಾಗುತ್ತಿದೆ. ಆ ಮೂಲಕ, ಸೂಕ್ತ ಸಲಹೆಗಳನ್ನು ಪಡೆದು ಹೆಣ್ಣು ಮಕ್ಕಳ ಶಾಲಾ ಭಾಗವಹಿಸುವಿಕೆಯನ್ನು ಅಭಿವೃದ್ಧಿಪಡಿಸಲು ಸಮಾಲೋಚಿಸಲಾಗುತ್ತಿದೆ. ಹಾಗೆಯೇ ಹೆಣ್ಣುಮಕ್ಕಳ ಒಟ್ಟಾರೆ ಶೈಕ್ಷಣಿಕ ಪ್ರಗತಿಗೆ ಪ್ರಯತ್ನಿಸಲಾಗುತ್ತಿದೆ. ಹೆಣ್ಣು ಮಕ್ಕಳು ಹಾಗೂ ಮಹಿಳಾ ಶಿಕ್ಷಣವನ್ನು ನೋಡುವ ದೃಷ್ಟಿಕೋನಕ್ಕೆ ಸಂಬಂಧಿಸಿದಂತೆ ಹಿಂದಿನ ದಶಕದಲ್ಲಿ ಉಂಟಾಗಿರುವ ಪರಿಕಲ್ಪನಾತ್ಮಕ ಬದಲಾವಣೆಯನ್ನು ನಾವು ಗುರುತಿಸಬಹುದು. ಅದೇನೆಂದರೆ ಹೆಣ್ಣುಮಕ್ಕಳ ಶಿಕ್ಷಣವನ್ನು ಮೂಲಭೂತ ಮಾನವ ಹಕ್ಕು ಹಾಗೂ ರಾಷ್ಟ್ರೀಯ ಮಾನವ ಅಭಿವೃದ್ಧಿಗೆ ಬೇಕಾಗಿರುವ ಪ್ರಮುಖ ಇನ್‌ಪುಟ್ ಎಂದು ಪರಿಗಣಿಸಿರುವುದು. ಇಷ್ಟೆಲ್ಲ ಬದಲಾವಣೆಗಳಾಗಿದ್ದರೂ, ಶೈಕ್ಷಣಿಕ ವಲಯದಲ್ಲಿ ಲಿಂಗತಾರತಮ್ಯ ಎದ್ದುಕಾಣುತ್ತಿದೆ. ಲಿಂಗಾಧಾರಿತ ತಾರತಮ್ಯದಿಂದ ಹೊರಬರುವ ಪ್ರಯತ್ನವನ್ನು ಕಳೆದ ಐದು ದಶಕಗಳಲ್ಲಿ ಹೆಣ್ಣುಮಕ್ಕಳ ಶಿಕ್ಷಣದಲ್ಲಾದ ಪ್ರಗತಿಯನ್ನು ವಿಶ್ಲೇಷಣೆ ಮಾಡುವುದು ಈ ಪ್ರಬಂಧದ ಮೂಲ ಆಶಯವಾಗಿ ಅದರಲ್ಲಿಯೂ ವಿಶೇಷವಾಗಿ ೧೯೯೦-೨೦೦೦ರ ದಶಕದ ಅವಧಿಯಲ್ಲಿ ಎಲ್ಲರಿಗೂ ಶಿಕ್ಷಣ (Education For All) ಎನ್ನುವ ಕಾರ್ಯಸೂಚಿಯ ಚೌಕಟ್ಟಿನೊಳಗೆ ವಿಶ್ಲೇಷಣೆ ಮಾಡಲು ಇಲ್ಲಿ ಪ್ರಯತ್ನಿಸಲಾಗಿದೆ.

ಭಾರತದಲ್ಲಿ ಪ್ರಜಾಪ್ರಭುತ್ವ ತತ್ವಗಳು ಅಸ್ತಿತ್ವಕ್ಕೆ ಬಂದು ಸ್ವಾತಂತ್ರ್ಯ, ಸಮಾನತೆ, ಸಮಾಜಿಕ ನ್ಯಾಯಗಳು, ಜಾತ್ಯಾತೀತ ಧ್ಯೇಯಗಳು ಇತ್ಯಾದಿಗಳು ಅಸ್ಥಿತ್ವಕ್ಕೆ ಬಂದವು. ಸಂವಿಧಾನವು ೪೫ನೆಯ ವಿಧಿ ಪ್ರಕಾರ ೧೪ ವರ್ಷದ ಒಳಗಿನ ಎಲ್ಲ ಗಂಡು-ಹೆಣ್ಣುಮಕ್ಕಳಿಗೂ ಉಚಿತ ಕಡ್ಡಾಯ ಶಿಕ್ಷಣ ಜಾರಿಗೆ ಬಂತು. ಅದರ ಪ್ರಕಾರ ಶಿಕ್ಷಣದಲ್ಲಿ ಸಮಾನ ಅವಕಾಶ ಮಹಿಳೆಗೆ ಲಭಿಸಿತು. ೧೯೮೬ರ ರಾಷ್ಟ್ರೀಯ ಶಿಕ್ಷಣದ ಪ್ರಮುಖ ಸಲಹೆಗಳಲ್ಲಿ ಮಹಿಳೆಯರ ಅಧಿಕಾರ ಹೌಗೂ ಬೌದ್ಧಿಕತೆ ಹೆಚ್ಚಿಸುವುದೂ ಒಂದು. ಮಹಿಳೆಯರು ಇಂದು ಸಮಾನಾವಕಾಶ ಪಡೆದಿದ್ದಾರೆ. ಅವರಿಗೆ ಬರುವ ಅಡೆತಡೆಗಳನ್ನು ತಪ್ಪಿಸಿ, ವಿಶೇಷ ಸೌಲಭ್ಯ ಸಂಪತ್ತನ್ನು ಕಲ್ಪಿಸಿ ಪುರುಷರಿಗೆ ಸರಿಸಮವಾಗಿ ಕೆಲಸ ಮಾಡುವ ಹಂತಕ್ಕೆ ತಂದು ರಾಷ್ಟ್ರದ ಪ್ರಗತಿಗೆ ಉತ್ತಮ ಕೊಡುಗೆ ಸಲ್ಲಿಸುವ ಅವಕಾಶ ಕಲ್ಪಿಸಬೇಕು.

ಪುರುಷರು ಪೂರ್ಣ ಅಧಿಕಾರ ಪಡೆದಿದ್ದ ರಾಜಕೀಯ ರಂಗವನ್ನು ಮಹಿಳೆ ಪ್ರವೇಶಿಸಿದ್ದಾರೆ. ವಿಜ್ಞಾನ, ತಂತ್ರಜ್ಞಾನ, ಪತ್ರಿಕೋದ್ಯಮ, ಬೋಧನೆ, ಸಮಾಜ ಸೇವೆ, ಆಡಳಿತ ಮೇಲ್ವಿಚಾರಣೆ ಮುಂತಾದ ವಿವಿಧ ಕ್ಷೇತ್ರಗಳಲ್ಲಿ ಹಲವು ಸಂದರ್ಭದಲ್ಲಿ ಪುರುಷರಿಗಿಂತ ಮಹಿಳೆಯರು ಉತ್ತಮರು ಎಂದು ತೋರಿಸಿಕೊಟ್ಟಿದ್ದಾರೆ. ಕೇಂದ್ರ ಸಚಿವಾಲಯವು ರಾಷ್ಟ್ರೀಯ ಮಹಿಳಾ ಶಿಕ್ಷಣ ಸಮಿತಿಯನ್ನು ೧೯೫೯ರಲ್ಲಿ ಸ್ಥಾಪಿಸಿ ೧೯೬೨ರಲ್ಲಿ ಪುನರ್ ರಚಿಸಿದ ನಂತರ ಅನೇಕ ರಾಜ್ಯಗಳಲ್ಲಿ ರಾಜ್ಯ ಮಹಿಳಾ ಶಿಕ್ಷಣ ಸಮಿತಿಗಳು ರಾಷ್ಟ್ರೀಯ ಮಹಿಳಾ ಶಿಕ್ಷಣ ಸಮಿತಿಯ ಆಶ್ರಯದಲ್ಲಿ ಸ್ಥಾಪಿತವಾಗಿವೆ. ಮಹಿಳೆಯರ ಅಭಿವೃದ್ಧಿ ಕಾರ್ಯಗಳಿಗೆ ನೀಡಿರುವ ಉತ್ತೇಜನ ಹಾಗೂ ಪ್ರಗತಿಯ ಬಗ್ಗೆ ಪರಿಶೀಲಿಸಲು ಕನ್ಯಾ ಶಿಕ್ಷಣದ ವಿವಿಧ ಸಮಸ್ಯೆಗಳನ್ನು ಪರಿಶೀಲಿಸಲು ೧೯೬೨ರಲ್ಲಿ ಹಂಸ ಮೆಹ್ತಾ ಸಮಿತಿ, ೧೯೬೩ರಲ್ಲಿ ಭಕ್ತವಸ್ತಲಂ ಸಮಿತಿ ನೇಮಿಸಲಾಯಿತು. ೧೯೬೪-೬೬ರ ಕೊಠಾರಿ ಶಿಕ್ಷಣ ಆಯೋಗ ಈ ಸಮಿತಿಗಳ ಸಲಹೆಗಳನ್ನು ಸಂಪೂರ್ಣವಾಗಿ ಒಪ್ಪಿ, ಕನ್ಯಾ ಶಿಕ್ಷಣದ ಸಮಸ್ಯೆಗಳ ಪರಿಹಾರಕ್ಕೆ ಸರ್ಕಾರದ ಹಾಗೂ ಸಾರ್ವಜನಿಕ ಸಹಕಾರವನ್ನು ಕೋರಿತು. ನಂತರ ೧೯೬೮ರಲ್ಲಿ ರಾಷ್ಟ್ರೀಯ ಶಿಕ್ಷಣ ನೀತಿಯು ಸಾಮಾಜಿಕ ನ್ಯಾಯದೃಷ್ಟಿ ಮಾತ್ರದಿಂದಲ್ಲದೇ ಸಾಮಾಜಿಕ ಪರಿವರ್ತನೆ ಬದಲಾವಣೆ ದೃಷ್ಟಿ ಯಿಂದಲೂ ಕನ್ಯಾ ಶಿಕ್ಷಣಕ್ಕೆ ಆದ್ಯತೆ ನೀಡಬೇಕು ಎಂದು ಹೇಳಿಕೆ ನೀಡಿದೆ. ಹೆಣ್ಣುಮಕ್ಕಳನ್ನು ಶಿಕ್ಷಣಕ್ಕೆ ಆಕರ್ಷಿಸಲು ಆರ್ಥಿಕ ಸೌಲಭ್ಯಗಳು ನೀಡಲ್ಪಟ್ಟವು. ಸ್ವಾತಂತ್ರ್ಯದ ನಂತರ ಸಂವಿಧಾನ ವಿಧಿಗಳ ಪ್ರಕಾರ ಮಹಿಳೆಯರ ಸ್ಥಾನಮಾನಗಳಲ್ಲಿ ಆಗಿರುವ ಬದಲಾವಣೆ, ಅವರ ಸೌಲಭ್ಯಗಳಿಗೆ ಸಂಬಂಧಿಸಿದಂತೆ ನಡೆದ ಕೆಲಸ, ಪ್ರಗತಿ, ವಿವಿಧ ವರ್ಗದ ಮಹಿಳೆಯರ ಸಾಮಾಜಿಕ ಬದಲಾವಣೆಯಲ್ಲಿ ಸಂಕೀರ್ಣತೆ, ಪ್ರಭಾವಗಳ ಬಗ್ಗೆ ಪರಿಶೀಲಿಸಲು ೧೯೭೧ರಲ್ಲಿ ಸಮಿತಿ ಏರ್ಪಟ್ಟಿದೆ.

೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯು ಮಹಿಳೆಯರ ಸ್ಥಾನಮಾನಗಳ ಮೂಲಭೂತ ಬದಲಾವಣೆಗೆ ಶಿಕ್ಷಣವನ್ನು ಪ್ರಧಾನ ನಿಯೋಗಿಯಾಗಿ, ಸಶಕ್ತ ಸಾಧನವಾಗಿ ಉಪಯೋಗಿಸಿಕೊಳ್ಳಲ್ಪಡುತ್ತದೆ ಎಂದು ಹೇಳಿಕೆ ನೀಡಿದೆ. ಮಹಿಳೆಯರ ಶಿಕ್ಷಣದಲ್ಲಿ ಬರುವ ಅಡ್ಡಿ ಆತಂಕಗಳನ್ನು ತಪ್ಪಿಸಿ, ಅವರ ಅನುಕೂಲಕ್ಕನುಗುಣವಾಗಿ ಶಾಲಾ ವೇಳಾಪಟ್ಟಿ ರೂಪಿಸಿ, ವಿವಿಧ ಸೌಲಭ್ಯಗಳನ್ನು ಕಲ್ಪಿಸಿ, ಶಾಲೆಗೆ ತಪ್ಪದೇ ಬರುವಂತೆ ಮಾಡಿ ಪೂರ್ಣಾವಧಿ ಶಾಲೆಯಲ್ಲಿ ಉಳಿಯುವಂತೆ ಮಾಡುವ ಮೂಲಕ ಶಿಕ್ಷಣದ ವಿವಿಧ ಹಂತದಲ್ಲಿ ವೃತ್ತಿ ಶಿಕ್ಷಣ, ತಾಂತ್ರಿ ಶಿಕ್ಷಣ, ಔದ್ಯೋಗಿಕ ಶಿಕ್ಷಣದಲ್ಲಿ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಲು ಉತ್ತೇಜನ ನೀಡಿ ಮತ್ತು ತರಬೇತಿ, ವಿಶೇಷ ಸಹಾಯ ಸವಲತ್ತುಗಳಿಂದ ಪ್ರೋತ್ಸಾಹಿಸಿ, ಶಿಕ್ಷಣಕ್ಕೆ ಅವಕಾಶ ಕಲ್ಪಿಸುವುದು ಮುಖ್ಯ ಗುರಿಯಾಗಿತ್ತು ಹಾಗೂ ಪರಿಹಾರ ಶಿಕ್ಷಣ ವೆಂದರೆ ಸಾಮಾಜಿಕ ಸೌಲಭ್ಯಗಳಿಂದ ವಂಚಿತರಾದವರ ಮಕ್ಕಳು, ಬೌದ್ಧಿಕ ಹಾಗೂ ಸಾಂಸ್ಕೃತಿಕ ಕೊರತೆಗಳನ್ನು, ನ್ಯೂನತೆಗಳನ್ನು, ಪರಿಹಾರ ಕಾರ್ಯಗಳಿಂದ, ವಿದ್ಯಾರ್ಥಿವೇತನ, ವಿಶೇಷ ಬೋಧನೆ, ಹಲವು ಸೌಕರ್ಯ ಮೂಲಕ ಶಿಕ್ಷಣಕ್ಕೆ ಅವಕಾಶ ಕಲ್ಪಿಸುವುದು.

೧೯೮೭-೮೮ರ ಆಪರೇಷನ್ ಬ್ಲಾಕ್ ಬೋರ್ಡ್ ಕಾರ್ಯಕ್ರಮದಿಂದ ಪ್ರಾಥಮಿಕ ಶಾಲೆಗಳಿಗೆ ಎರಡನೆಯ ಕೊಠಡಿ ಏರ್ಪಾಟು ಮತ್ತೊಬ್ಬಳು ಅಧ್ಯಾಪನ ಮಾಡುವವರು ಸೀಮಿತವಾಗಿ ಮಹಿಳೆಯರಿಗೆ ಆದ್ಯತೆ ಕೊಡಲ್ಪಟ್ಟಿದೆ. (ಎ.ಎಲ್. ನರಸಿಂಹಾಚಾರ್, ೨೦೦೬).

ಕಳೆದ ದಶಕದಲ್ಲಿ ಮಹಿಳಾ ಶಿಕ್ಷಣವನ್ನು ನೋಡುವ ದೃಷ್ಟಿಕೋನದಲ್ಲಿ ಅಗಮ್ಯ ಬದಲಾವಣೆಯಾಗಿರುವುದು ಕಂಡುಬರುತ್ತದೆ. ಹೆಣ್ಣುಮಕ್ಕಳ ಶಿಕ್ಷಣವು ಮಾನವ ಮೂಲಭೂತ ಹಕ್ಕು ಹಾಗೂ ರಾಷ್ಟ್ರೀಯ ಮಾನವ ಅಭಿವೃದ್ಧಿಯ ನಿರ್ಣಾಯಕ ಚಲಕವಾಗಿದೆ. ಇತ್ತೀಚಿನ ವರ್ಷದಲ್ಲಿ ಹೆಣ್ಣುಮಕ್ಕಳ ಶಿಕ್ಷಣದ ಮೇಲೆ ವಿನಿಯೋಗಿಸುತ್ತಿರುವ ಬಂಡವಾಳವನ್ನು ನೈತಿಕತೆಗಿಂತಲೂ ರಾಷ್ಟ್ರೀಯ ಅಭಿವೃದ್ಧಿಯನ್ನು ಸೂಚಿಸುವ ಅಂಶವನ್ನಾಗಿ ಪರಿಗಣಿಸಲಾಗಿದೆ. ಇಲ್ಲಿ ನೈತಿಕತೆಗಿಂತಲೂ ರಾಷ್ಟ್ರದ ಆರ್ಥಿಕ ಬೆಳವಣಿಗೆಗೆ ಹೆಚ್ಚಿನ ಮಹತ್ವ ಇಂದು ಕೊಡಲಾಗುತ್ತಿದೆ. ಹೆಣ್ಣು ಮಕ್ಕಳ ಶೈಕ್ಷಣಿಕ ಸಮಸ್ಯೆಗಳು, ಕೇವಲ ಶಿಕ್ಷಣಕ್ಕೆ ಸಂಬಂಧಪಟ್ಟ ಸಮಸ್ಯೆ ಎಂದು ಪರಿಗಣಿಸಲು ಸಾಧ್ಯವಿಲ್ಲ. ಇದು ಮಹಿಳೆಯರ ಸ್ಥಾನಮಾನ ಮತ್ತು ಗ್ರಾಮೀಣ ಪ್ರದೇಶದ ಅಭಿವೃದ್ಧಿಯನ್ನು ಸೂಚಿಸುವ ಸೂಚಕವಾಗಿದೆ. ಹೀಗಾಗಿ ರಾಷ್ಟ್ರೀಯ ಶೈಕ್ಷಣಿಕ ಅಭಿವೃದ್ಧಿ ನೀತಿಗಳನ್ನು, ಗ್ರಾಮೀಣ ಪ್ರದೇಶದಲ್ಲಿರುವ ಹೆಣ್ಣುಮಕ್ಕಳು ಮತ್ತು ಸಮಾಜದಲ್ಲಿ ಇರುವ ಇತರ ಅವಕಾಶ ವಂಚಿತ ಅಂಚಿನ ಗುಂಪುಗಳಿಗೆ ತಲುಪಿಸುವ ನಿಟ್ಟಿನಲ್ಲಿ ಪ್ರಯತ್ನಿಸಲಾಗುತ್ತಿದೆ. ಜೊತೆಗೆ ಅವಕಾಶ ವಂಚಿತ ಗುಂಪುಗಳನ್ನು ರಾಷ್ಟ್ರೀಯ ಅಭಿವೃದ್ಧಿ ನೀತಿಯ ವ್ಯಾಪ್ತಿಗೆ ಒಳಪಡಿಸುವ ಪ್ರಯತ್ನ ನಡೆಯುತ್ತಿದೆ.

ರಾಷ್ಟ್ರೀಯ ಶಿಕ್ಷಣ ನೀತಿ ೧೯೮೬ ಮತ್ತು ಅದರ ಕಾರ್ಯಯೋಜನೆಯನ್ನು ೧೯೯೨ ಪರಿಷ್ಕರಿಸುವ (Revesed) ಮೂಲಕ, ಶಿಕ್ಷಣ ಪಡೆದ ಎಲ್ಲರಿಗೂ ಸಮಾನ ದುಡಿಮೆಗೆ ಸಮಾನ ವೇತನ, ಸಮಾನ ಅವಕಾಶದ ಜೊತೆ ಜೊತೆಗೆ ಮಹಿಳೆಯರ ಸಬಲೀಕರಣ ಎಂದು ಹೇಳಿತ್ತು. ಈಗ ಹೆಣ್ಣು ಮಕ್ಕಳಿಗೆ ಸಮಾನ ಶೈಕ್ಷಣಿಕ ಅವಕಾಶಗಳನ್ನು ಮಾತ್ರ ಕಲ್ಪಿಸಲಾಗಿದೆ. ಒಟ್ಟಾರೆ ಶೈಕ್ಷಣಿಕ ಪಠ್ಯಕ್ರಮ ಮತ್ತು ಅದರ ಪ್ರಕ್ರಿಯೆಯು ಲಿಂಗಸಮಾನತೆ ಹಾಗೂ ಲಿಂಗಸಂಬಂಧಿ ಪಾತ್ರದ ಪ್ರತಿಬಿಂಬವನ್ನು ಮರುಚಿಂತನೆ ಮಾಡಿ, ಸಮಾನತೆ ಮತ್ತು ಸಾಮರಸ್ಯದ ಬೆಳವಣಿಗೆಗೆ ಆದ್ಯತೆ ನೀಡಿದೆ.

ಭಾರತದ ಸಂವಿಧಾನದಲ್ಲಿ ಮಹಿಳೆಯರಿಗೆ ಸಮಾನತೆಯನ್ನು ಒದಗಿಸಿ, ಧರ್ಮ, ಜಾತಿ, ಜನಾಂಗ, ಲಿಂಗ ಅಥವಾ ಹುಟ್ಟಿದ ಸ್ಥಳದ ಆಧಾರದಲ್ಲಿ ಅಸಮಾನತೆಯನ್ನು ನಿಷೇಧಿಸಿದೆ. ಆದರೆ ರಕ್ಷಣಾತ್ಮಕವಾದ ತಾರತಮ್ಯತೆಯನ್ನು ಮಹಿಳೆಯರಿಗೆ ನೀಡಿದೆ. ಪ್ರೊಟೆಕ್ಟೀವ್ ಡಿಸ್‌ಕ್ರಿಮಿನೇಷನ್ (Protective Discrimination) ಕ್ಲಾಸ್‌ನ ಕೆಳಗಡೆ, ಸರ್ಕಾರಗಳು ಹಲವಾರು ಸಾಮಾಜಿಕ ಮತ್ತು ಕಾರ್ಮಿಕ ಕಾನೂನುಗಳನ್ನು ಜಾರಿಗೆ ತಂದಿವೆ. ಇಂತಹ ಕಾನೂನುಗಳ ಮೂಲಕ ವಿಶೇಷ ಯೋಜನೆ ಹಾಗೂ ಕಾರ್ಯಕ್ರಮಗಳನ್ನು ರೂಪಿಸಿ, ಮಹಿಳಾ ಶಿಕ್ಷಣದ ಅಭಿವೃದ್ಧಿಗೆ ಪ್ರಯತ್ನಿಸುತ್ತಿವೆ. ಇವುಗಳ ಜೊತೆಗೆ ಹೆಣ್ಣುಮಕ್ಕಳು ಹಾಗೂ ಮಹಿಳೆಯರಿಗೆ ಶಿಕ್ಷಣ ಮತ್ತು ತರಬೇತಿ ಸಂಸ್ಥೆಗಳಲ್ಲಿ, ಅಭಿವೃದ್ಧಿ

ಕಾರ್ಯಕ್ರಮಗಳಲ್ಲಿ, ಸ್ಥಳೀಯ ಚುನಾಯಿತ ಸಂಸ್ಥೆಗಳಲ್ಲಿ ಮತ್ತು ಕೆಲವು ಸರ್ಕಾರಿ ಉದ್ಯೋಗಗಳಲ್ಲಿ, ಮಹಿಳೆಯರಿಗೆ ಮೀಸಲಾತಿಯನ್ನು ಒದಗಿಸಲಾಗಿದೆ. ಹೀಗೆ ಸೈದ್ಧಾಂತಿಕವಾಗಿ ಮಹಿಳೆಯರಿಗೆ ಬಹುತೇಕ ಎಲ್ಲಾ ಕ್ಷೇತ್ರಗಳಲ್ಲಿ ಸಮಾನತೆ ನೀಡಲಾಗಿದೆ. ಭಾರತದಲ್ಲಿ ಹೆಣ್ಣು ಮಕ್ಕಳು ಮತ್ತು ಮಹಿಳೆಯರ ಪರವಾದ ಕಾನೂನುಗಳು ಇರುವುದು ಹೆಚ್ಚು. ಹಾಗೆಯೇ ಅವುಗಳ ಗುಣಲಕ್ಷಣಗಳೂ ಕೂಡ ವಿಶಿಷ್ಟವಾದವುಗಳಾಗಿವೆ. ಇವುಗಳ ಬಗ್ಗೆ ಇನ್ನೂ ಸಹ ಸರಿಯಾದ ಮಾಹಿತಿ ಮಹಿಳೆಯರಿಗಾಗಲೀ ಅಥವಾ ಹೆಣ್ಣುಮಕ್ಕಳಿಗಾಗಲಿ ಇರುವುದಿಲ್ಲ.

ಚೀನಾದ ನಂತರ ಭಾರತವು ಜಗತ್ತಿನಲ್ಲೆ ಎರಡನೇ ಅತ್ಯಂತ ದೊಡ್ಡ ಶೈಕ್ಷಣಿಕ ವ್ಯವಸ್ಥೆಯನ್ನು ಹೊಂದಿದ ರಾಷ್ಟ್ರವಾಗಿದೆ. ಭಾರತದಲ್ಲಿ ೬೧೦,೭೬೩ ಪ್ರಾಥಮಿಕ, ೧೮೫,೫೦೬ ಮಾಧ್ಯಮಿಕ ಮತ್ತು ೧೦೭,೧೦೦ ಪ್ರೌಢ ಶಾಲೆಗಳು, ೭೧೯೯ ಕಾಲೇಜುಗಳು (ಜರ್ನಲ್ ಎಜುಕೇಶನ್), ೨೦೭೫ ವೃತ್ತಿಪರ ಶಿಕ್ಷಣ ಕಾಲೇಜುಗಳು ಮತ್ತು ೨೨೯ ವಿಶ್ವವಿದ್ಯಾಲಯಗಳು ಇವೆ. ಇದರ ಜೊತೆಗೆ ಶಾಲೆಗೆ ಹೋಗುವ ವಯೋಮಾನದ (೦೬ ರಿಂದ ೧೪ ವಯೋಮಾನದ) ಮಕ್ಕಳ ಶಾಲೆಯಿಂದ ಹೊರಗೆ ಇರುವ ಮಕ್ಕಳನ್ನು ಶೈಕ್ಷಣಿಕ ಮುಖ್ಯಧಾರೆಗೆ ತರುವ ಉದ್ದೇಶದಿಂದ ಸುಮಾರು ೨೯೦,೦೦೦ಕ್ಕೂ ಹೆಚ್ಚಿನ ಅನೌಪಚಾರಿಕ ಶಿಕ್ಷಣ ಕೇಂದ್ರಗಳನ್ನು ತೆರೆಯಲಾಗಿದೆ. ವಯಸ್ಕರಿಗೆ (೧೫-೩೫ ವಯೋಮಾನದ) ಸಾಕ್ಷರತಾ ಕಾರ್ಯಕ್ರಮಗಳನ್ನು ಸ್ವಯಂ-ಸೇವಾ ಆಧಾರದಲ್ಲಿ, ವಿಸ್ತಾರಮಟ್ಟದಲ್ಲಿ ನಡೆಸಲಾಗುತ್ತಿದೆ. ಸರ್ಕಾರಿ ಪ್ರಾಥಮಿಕ ಶಾಲೆಗಳಿಗೆ ದೇಶದಾದ್ಯಂತ ೧೧೩.೮ ಮಿಲಿಯನ್‌ಗೂ ಹೆಚ್ಚಿನ ಮಕ್ಕಳು ದಾಖಲಾಗಿದ್ದಾರೆ (ಎಂ.ಎಚ್.ಆರ್.ಡಿ., ೨೦೦೩). ಒಂದರಿಂದ ಐದನೇ ತರಗತಿಯಲ್ಲಿ ೯೫.೭ ಮಿಲಿಯನ್ ಮಕ್ಕಳು, ಆರನೇ ತರಗತಿಯಿಂದ ಎಂಟನೇ ತರಗತಿಯವರೆಗೆ ೫೮.೬ ಮಿಲಿಯನ್ ಮಕ್ಕಳು, ಒಂದರಿಂದ-ಏಳನೇ ತರಗತಿಯಲ್ಲಿ ಸುಮಾರು ೮೧.೬ ಮಿಲಿಯನ್ ಮಕ್ಕಳು ದಾಖಲಾಗಿದ್ದಾರೆ. ಪ್ರಾಥಮಿಕ ಶಾಲಾ ಹಂತದ ಒಟ್ಟು ಶಾಲಾ ಹಾಜರಾತಿಯು ಶೇಕಡ ೮೩.೩ರಷ್ಟಿದೆ. ಇದರಲ್ಲಿ ಹೆಣ್ಣುಮಕ್ಕಳ ಶಾಲಾ ಹಾಜರಾತಿ ಪ್ರಮಾಣವು ಶೇಕಡ ೭೮.೬ರಷ್ಟಿದ್ದರೆ, ಗಂಡು ಮಕ್ಕಳ ಶಾಲಾ ಹಾಜರಾತಿ ಪ್ರಮಾಣವು ಶೇಕಡ ೮೫.೯ರಷ್ಟಿರುತ್ತದೆ. ಇದು ಕೇವಲ ಒಂದು ಉದಾಹರಣೆ ಮಾತ್ರ. ನಮ್ಮ ಶಿಕ್ಷಣ ವ್ಯವಸ್ಥೆಯು ತೀವ್ರತರವಾದ ಆಡಳಿತಾತ್ಮಕ ಪ್ರಾದೇಶಿಕ ಮತ್ತು ಲಿಂಗಸಂಬಂಧಿ ತಾರತಮ್ಯಗಳಿಂದ ಮುಂದುವರಿಯುತ್ತಿದೆ.

ಇನ್ನೂ ನಮ್ಮ ಸಂವಿಧಾನದ ನಿರ್ದೇಶನಾ ತತ್ವದ ಮೂಲ, ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣ ನೀಡಬೇಕು ಎನ್ನುವ ಗುರಿ ಹಾಗೆಯೇ ಉಳಿದಿದೆ. ೨೦೦೧ರ ಜನಗಣತಿ ಪ್ರಕಾರ ೦೭ ವಯೋಮಾನಕ್ಕಿಂತ ಮೇಲ್ಪಟ್ಟ ೧೦೦ ಜನ ಮಹಿಳೆಯರಲ್ಲಿ ಸುಮಾರು ಶೇಕಡ ೪೫.೮೪ರಷ್ಟು ಮಹಿಳೆಯರು ಅನಕ್ಷರಸ್ಥರಾಗಿ ಉಳಿದಿದ್ದಾರೆ. ನಿರಂತರ ೫೯ ವರ್ಷಗಳ ಶೈಕ್ಷಣಿಕ ಕ್ಷೇತ್ರದ ಅಭಿವೃದ್ಧಿ ನಂತರವೂ ಪ್ರೌಢ ಶಾಲೆ ಹಾಗೂ ತದನಂತರದ ಉನ್ನತ ಶಿಕ್ಷಣವು ನಗರ ಪ್ರದೇಶದ ಮಧ್ಯಮ ವರ್ಗಕ್ಕೆ ಸೇರಿದ ಸಂಗತಿಯಾಗಿ

ಬೆಳೆಯುವಲ್ಲಿ ಮಾತ್ರ ಯಶಸ್ವಿಯಾಗಿದೆ. ಅನಕ್ಷರಸ್ಥರಲ್ಲಿ ಹಾಗೂ ಶಾಲೆಯಿಂದ ಹೊರಗಿರುವವರಲ್ಲಿ ಗ್ರಾಮೀಣ ಪ್ರದೇಶದ ಹೆಣ್ಣು ಮಕ್ಕಳು, ಮಹಿಳೆಯರು ಮತ್ತು ನಗರ ಪ್ರದೇಶದ ಬಡವರ ಸಂಖ್ಯೆ ಹೆಚ್ಚಾಗಿದೆ. ಇತ್ತೀಚಿನ ದಿನಮಾನದಲ್ಲಿ ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ವಿವಿಧ ಸಾಮಾಜಿಕ ಗುಂಪುಗಳ ನಡುವಿನ ಅಂತರ ಹಾಗೂ ಪುರುಷರು ಮತ್ತು ಮಹಿಳಾ ಅಕ್ಷರಸ್ಥರ ನಡುವಿನ ಅಂತರ ಕಡಿಮೆಯಾಗುತ್ತಿರುವಂತೆ ಕಂಡುಬಂದರೂ ಇವುಗಳ ನಡುವಿನ ಅಂತರ ಇನ್ನೂ ಹೆಚ್ಚಾಗಿದೆ. ಉದಾಹರಣೆಗೆ: ಪುರುಷರು ಮತ್ತು ಮಹಿಳೆಯರ ನಡುವಿನ ಸಾಕ್ಷರತಾ ಅಂತರ ಶೇಕಡ ೨೧.೭೦ ರಷ್ಟಿದೆ.

**ಕೋಷ್ಟಕ-೫.೧**

## ಭಾರತದ ಸಾಕ್ಷರತೆ ಪ್ರಮಾಣ ೧೯೫೧ ರಿಂದ ೨೦೦೧ರವರೆಗೆ

| ಜನಗಣತಿ ವರ್ಷ | ಒಟ್ಟು | ಪುರುಷರು | ಮಹಿಳೆಯರು | ಸಾಕ್ಷರತೆಯಲ್ಲಿ ಪುರುಷರು ಮತ್ತು ಮಹಿಳೆಯರ ನಡುವಿನ ಅಂತರ |
|---|---|---|---|---|
| ೧೯೫೧ | ೧೮.೩೩ | ೨೭.೧೬ | ೮.೮೬ | ೧೮.೩೦ |
| ೧೯೬೧ | ೨೮.೩೦ | ೪೦.೪೦ | ೧೫.೩೫ | ೨೫.೦೫ |
| ೧೯೭೧ | ೩೪.೪೫ | ೪೫.೯೬ | ೨೧.೯೭ | ೨೩.೯೮ |
| ೧೯೮೧ | ೪೩.೫೭ | ೫೬.೩೮ | ೨೯.೭೬ | ೨೬.೬೨ |
| ೧೯೯೧ | ೫೨.೨೧ | ೬೪.೧೩ | ೩೯.೨೯ | ೨೪.೮೪ |
| ೨೦೦೧ | ೬೫.೩೮ | ೭೫.೮೫ | ೫೪.೧೬ | ೨೧.೭೦ |

ಮೂಲ : ಆಯ್ದ ಶೈಕ್ಷಣಿಕ ಅಂಕಿ-ಸಂಖ್ಯೆಗಳು, ೨೦೦೧.

ಸಾಮಾಜಿಕ ಅಭಿವೃದ್ಧಿ ಮಾಪನದಲ್ಲಿ ಒಟ್ಟು ಸಾಕ್ಷರತಾ ಪ್ರಮಾಣಕ್ಕೆ ಹೋಲಿಸಿದರೆ, ಮಹಿಳೆಯರ ಸಾಕ್ಷರತಾ ಪ್ರಮಾಣವನ್ನು ಪ್ರಮುಖ ಸೂಚಕವಾಗಿ ಪರಿಗಣಿಸಲಾಗಿದೆ. ಮಹಿಳೆಯರ ಸಾಕ್ಷರತೆಯು, ಸಂತಾನೋತ್ಪತ್ತಿ ದರ, ಜನಸಂಖ್ಯಾ ಬೆಳವಣಿಗೆ ದರ, ಶಿಶುಮರಣ ದರಗಳ ಜೊತೆಗೆ ಋಣಾತ್ಮಕ (Negative) ಸಂಬಂಧವನ್ನು ಹೊಂದಿದ್ದರೆ, ಹೆಣ್ಣುಮಕ್ಕಳ ಮದುವೆಯ ವಯಸ್ಸು, ಜೀವಿತಾವಧಿ, ಹೊಸ ಹೊಸ ಆರ್ಥಿಕ ವಲಯದಲ್ಲಿ ಮಹಿಳೆಯರ ಭಾಗವಹಿಸುವಿಕೆ, ಇದೆಲ್ಲಕ್ಕಿಂತ ಹೆಚ್ಚಾಗಿ ಹೆಣ್ಣುಮಕ್ಕಳ ಶಾಲಾ ದಾಖಲಾತಿ-ಹಾಜರಾತಿಯ ಜೊತೆಗೆ ಧನಾತ್ಮಕ (Positive) ಸಂಬಂಧ ಹೊಂದಿರುವುದು ನಮಗೆಲ್ಲ ತಿಳಿದಿರುವ ಸಂಗತಿ. ಮಹಿಳೆಯರ ಸಾಕ್ಷರತಾ ಪ್ರಮಾಣವು ೧೯೫೧ರಲ್ಲಿ ಶೇಕಡ ೮.೮೬ ಇದ್ದದು ೨೦೦೧ರ ವೇಳೆಗೆ ಶೇಕಡ ೫೪.೧೬ ತಲುಪಿರುವುದು ಆಶಾದಾಯಕ. ಇದೇ

ಸಮಯದಲ್ಲಿ ಪುರುಷರ ಸಾಕ್ಷರತೆಯು (೧೯೫೧) ಶೇಕಡ ೨೭.೧೬ ರಿಂದ (೨೦೦೧) ಶೇಕಡ ೭೫.೮೫ ಹೆಚ್ಚಳವಾಗಿದೆ. ಹೀಗೆ ಹೆಚ್ಚಳವಾಗುವಾಗ ಗ್ರಾಮೀಣ-ನಗರ ಮತ್ತು ವಿವಿಧ ಸಾಮಾಜಿಕ ಗುಂಪುಗಳ ನಡುವಿನ ಅಸಮಾನತೆಯು ತೀವ್ರವಾಗಿದೆ. ಅದರಲ್ಲಿಯೂ ಗ್ರಾಮೀಣ-ನಗರ ಪ್ರದೇಶಗಳ ಮಹಿಳೆಯರ ನಡುವಿನ ಅಂತರ ಬಹಳ ತೀವ್ರತರವಾಗಿ ಬೆಳೆಯುತ್ತಿದೆ. ಗ್ರಾಮೀಣ ಪ್ರದೇಶದ ಮಹಿಳೆಯರಿಗೆ ಹೋಲಿಸಿದರೆ, ನಗರ ಪ್ರದೇಶದ ಮಹಿಳೆಯರಲ್ಲಿ ಸಾಕ್ಷರತಾ ಮಟ್ಟ ಎರಡು ಪಟ್ಟು, ಕೆಲವು ಸಂದರ್ಭ ದಲ್ಲಿ ಮೂರು ಪಟ್ಟು ಹೆಚ್ಚಳವಾಗಿದೆ. ಪರಿಶಿಷ್ಟ ಜಾತಿ ಮತ್ತು ಪಂಗಡಗಳಿಗೆ ಸೇರಿದ ಮಹಿಳೆಯರು ಸಾಕ್ಷರತಾ ಪಟ್ಟಿಯಲ್ಲಿ ಕೊನೆಯಲ್ಲಿ ಇರುವುದು ದಿಗ್ಭ್ರಮೆಯನ್ನು ಹುಟ್ಟಿಸುತ್ತದೆ (ಎಚ್.ಡಿ. ಪ್ರಶಾಂತ್, ೨೦೦೫).

**೫.೧. ಸಾಕ್ಷರತಾ ಪ್ರಗತಿ**

ಹೊಸ ಹೊಸ ಪ್ರಯತ್ನಗಳು ಮತ್ತು ಹೆಚ್ಚಿನ ಸಂಪನ್ಮೂಲ ಬೆಂಬಲದಿಂದ ಪ್ರಾಥಮಿಕ ಶಿಕ್ಷಣ ಕ್ಷೇತ್ರದಲ್ಲಿ ಹಾಗೂ ಸಾಕ್ಷರತಾ ಕ್ಷೇತ್ರದಲ್ಲಿ ರಾಷ್ಟ್ರೀಯ ಸಾಕ್ಷರತಾ ಮಿಷನ್ (ಪ್ರಾರಂಭ ೧೯೮೮) ಸ್ವಯಂ-ಸೇವಾ ಮಾದರಿಯಲ್ಲಿ ನಡೆಸಿದ ಸಾಕ್ಷರತಾ ಚಳುವಳಿಗಳು ನಮ್ಮ ಒಟ್ಟಾರೆ ಶೈಕ್ಷಣಿಕ ಕ್ಷೇತ್ರದ ಅಭಿವೃದ್ಧಿಗೆ ಪ್ರತಿಫಲ ನೀಡಿವೆ. ೧೯೯೧ರಲ್ಲಿ ರಾಷ್ಟ್ರದ ಒಟ್ಟು ಸಾಕ್ಷರತೆ ಶೇಕಡ ೫೬.೦೪ ರಿಂದ ೨೦೦೧ರಲ್ಲಿ ಶೇಕಡ ೬೭.೦೪ಕ್ಕೆ ಹೆಚ್ಚಳವಾಗಿದೆ. ಇದೇ ಅವಧಿಯಲ್ಲಿ ೨೧೦.೧೩ ಲಕ್ಷದಷ್ಟು ಇದ್ದು ಅಕ್ಷರಸ್ಥರ ಸಂಖ್ಯೆಯು ೩೦೭.೭೫ ಲಕ್ಷಕ್ಕೆ ಏರಿಕೆಯಾಗಿದೆ. ಹಾಗೆಯೇ ಅನಕ್ಷರಸ್ಥರ ಸಂಖ್ಯೆ ೧೯೯೧ ರಲ್ಲಿ ೩೨೮ ಮಿಲಿಯನ್ ಇದ್ದದು ೨೦೦೧ರಲ್ಲಿ ೨೯೬ ಮಿಲಿಯನ್‌ಗಳಾಗಿದೆ. ಸ್ವಾತಂತ್ರನಂತರ ಅನಕ್ಷರಸ್ಥರ ಸಂಖ್ಯೆ ಕಡಿಮೆಯಾಗಿರುವುದು ಇದೆ ಮೊದಲು. ೧೯೮೧-೧೯೯೧ರ ನಡುವಿನ ಸಾಕ್ಷರತಾ ದಶವಾರ್ಷಿಕ ಬೆಳವಣಿಗೆ ಪ್ರಮಾಣ ಶೇಕಡ ೮.೦೭ರ ಪ್ರಮಾಣದಲ್ಲಿ, ೧೯೯೧-೨೦೦೧ರ ದಶಕದಲ್ಲಿ ಶೇಕಡ ೧೨.೯ರ ಪ್ರಮಾಣದಲ್ಲಿ ಬೆಳವಣಿಗೆಯಾಗಿದೆ (ಎಚ್.ಡಿ. ಪ್ರಶಾಂತ್, ೨೦೦೫).

೧೯೮೧-೯೧ರ ದಶಕದಲ್ಲಿ ಮಹಿಳೆಯರ ಸಾಕ್ಷರತಾ ಬೆಳವಣಿಗೆ ಪ್ರಮಾಣವು ಶೇಕಡ ೯.೫೩ರ ದರದಲ್ಲಿ, ಪುರುಷರ ಸಾಕ್ಷರತಾ ಬೆಳವಣಿಗೆ ದರವು ಶೇಕಡ ೭.೭೫ ದರದಲ್ಲಿ ಬೆಳವಣಿಗೆಯಾಗಿದೆ. ೧೯೯೧-೨೦೦೧ರ ದಶಕದಲ್ಲಿ ಮಹಿಳೆಯರ ಸಾಕ್ಷರತಾ ಬೆಳವಣಿಗೆ ಪ್ರಮಾಣವು ಶೇಕಡ ೧೪.೮೭ ದರದಲ್ಲಿ ಇದ್ದರೆ, ಪುರುಷರ ಸಾಕ್ಷರತಾ ಬೆಳವಣಿಗೆ ದರವು ಶೇಕಡ ೧೧.೭೨ರ ದರದಲ್ಲಿ ಬೆಳವಣಿಗೆ ಯಾಗಿದೆ. ಇಲ್ಲಿ ಮಹಿಳೆಯರ ಸಾಕ್ಷರತಾ ಬೆಳವಣಿಗೆ ದರವು ಪುರುಷರ ಸಾಕ್ಷರತೆಗಿಂತ ಸ್ವಲ್ಪಮಟ್ಟಿಗೆ ವೇಗವಾಗಿ ಬೆಳೆಯುತ್ತಿರುವುದು ತಿಳಿಯುತ್ತದೆ. ಹಾಗೆಯೇ, ನಗರ ಪ್ರದೇಶದ ಸಾಕ್ಷರತೆಗಿಂತ ಗ್ರಾಮೀಣ ಪ್ರದೇಶದ ಸಾಕ್ಷರತೆ ಪ್ರಮಾಣ ಸ್ವಲ್ಪ ಹೆಚ್ಚಿನ ಪ್ರಮಾಣದಲ್ಲಿ ಬೆಳವಣಿಗೆಯಾಗಿರುವುದು ೧೯೯೧-೨೦೦೧ರ ದಶಕದ ವಿಶೇಷವಾಗಿದೆ. ನಗರ-ಗ್ರಾಮೀಣ ಪ್ರದೇಶದ ನಡುವಿನ ಅಂತರ ಕೂಡ ಸ್ವಲ್ಪಮಟ್ಟಿಗೆ ಕ್ಷೀಣಿಸುತ್ತಿದೆ. ೧೯೯೧ರಲ್ಲಿ ನಗರ ಮತ್ತು ಗ್ರಾಮೀಣ ಪ್ರದೇಶಗಳ ನಡುವಿನ ಸಾಕ್ಷರತಾ

ಅಂತರ ಶೇಕಡ ೨೮.೪೧ರಷ್ಟಿತ್ತು. ಅಂದರೆ, ಗ್ರಾಮೀಣ ಪ್ರದೇಶದಲ್ಲಿ ಶೇಕಡ ೪೪.೭೦ ಮತ್ತು ನಗರ ಪ್ರದೇಶದಲ್ಲಿ ಶೇಕಡ ೭೩.೦೦ ಪ್ರಮಾಣದಷ್ಟು ಅಕ್ಷರಸ್ಥರಿದ್ದಾರೆ. ೧೯೯೭ರ ವೇಳೆಗೆ ಗ್ರಾಮೀಣ ಪ್ರದೇಶದ ಅಕ್ಷರಸ್ಥರ ಸಂಖ್ಯೆ ಶೇಕಡ ೫೬.೦೦ಕ್ಕೆ ಏರಿಕೆ ಕಂಡಿತ್ತು. ೨೦೦೧ರ ವೇಳೆಗೆ ಸಾಕ್ಷರತಾ ಪ್ರಮಾಣ ಶೇಕಡ ೬೫.೩೮ಕ್ಕೆ ಹೆಚ್ಚಳವಾಗಿದೆ. (ಜನಗಣತಿ ವರದಿ, ೧೯೯೧, ೨೦೦೧; ರಾಷ್ಟ್ರೀಯ ಮಾದರಿ ಸಮೀಕ್ಷೆ, ೧೯೯೭).

ಭಾರತದ ಈಶಾನ್ಯ ರಾಜ್ಯಗಳು ಸಾಕ್ಷರತೆಯಲ್ಲಿ ಸಾಕಷ್ಟು ಪ್ರಮಾಣದಲ್ಲಿ ಪ್ರಗತಿಯನ್ನು ಸಾಧಿಸಿವೆ. ಮಿಜೋರಾಂ ರಾಜ್ಯವು ನಮ್ಮ ರಾಷ್ಟ್ರದಲ್ಲಿಯೇ ಎರಡನೇ ಹೆಚ್ಚಿನ ಅಕ್ಷರಸ್ಥರನ್ನು ಹೊಂದಿದ ರಾಜ್ಯವಾಗಿದೆ. ಮಿಜೋರೊಂನ ಸಾಕ್ಷರತೆಯ ಪ್ರಮಾಣ ೨೦೦೧ರ ಜನಗಣತಿ ಪ್ರಕಾರ ಒಟ್ಟು ಸಾಕ್ಷರತೆಯ ಪ್ರಮಾಣ ಶೇಕಡ ೮೯.೦೦ರಷ್ಟು ಇದೇ ಸಮಯದಲ್ಲಿ ಕೇರಳ ರಾಜ್ಯದ ಸಾಕ್ಷರತೆ ಶೇಕಡ ೯೧.೦೦ ರಷ್ಟಾಗಿದೆ. ೧೯೯೧ರಲ್ಲಿ ಅಸ್ಸಾಂ ರಾಜ್ಯದ ಸಾಕ್ಷರತಾ ಪ್ರಮಾಣ ಶೇಕಡ ೫೩.೦೦ ರಷ್ಟಿದ್ದು, ೨೦೦೧ರಲ್ಲಿ ಶೇಕಡ ೬೩.೦೦ರನ್ನು ಮುಟ್ಟಿದೆ. ಈ ರಾಜ್ಯದ ದಶವಾರ್ಷಿಕ ಸಾಕ್ಷರತಾ ಬೆಳವಣಿಗೆ ಪ್ರಮಾಣ ಶೇಕಡ ೧೦.೦೦ರಷ್ಟಾಗಿದೆ.

ಬಿಮಾರು (ಬಿಹಾರ, ಮಧ್ಯಪ್ರದೇಶ, ಉತ್ತರ ಪ್ರದೇಶ ಹಾಗೂ ರಾಜಸ್ಥಾನ) ರಾಜ್ಯಗಳು ಕೂಡ ಸಾಕ್ಷರತಾ ಬೆಳವಣಿಗೆಯಲ್ಲಿ ಹಿಂದೆ ಬಿದ್ದಿಲ್ಲ ಎಂಬುದು ಆಶ್ಚರ್ಯಕರ ಸಂಗತಿ. ಬಿಹಾರ ರಾಜ್ಯದ ದಶವಾರ್ಷಿಕ ಸಾಕ್ಷರತಾ ಬೆಳವಣಿಗೆ ದರದಲ್ಲಿ ಶೇಕಡ ೧೦.೫ ರಷ್ಟಿದ್ದರೆ, ಮಧ್ಯಪ್ರದೇಶವು ಶೇಕಡ ೧೧.೮ ರಷ್ಟು, ಉತ್ತರ ಪ್ರದೇಶ ಶೇಕಡ ೧೪.೪ ರಷ್ಟು ಹಾಗೂ ರಾಜಸ್ಥಾನವು ಶೇಕಡ ೧೫.೦೫ ರಷ್ಟು ಪ್ರಗತಿ ತೋರಿಸಿವೆ. ಹಾಗೆಯೇ ಶಾಲಾ ಮೂಲ ಸೌಲಭ್ಯಗಳನ್ನು ಒದಗಿಸುವುದರಲ್ಲಿ ಮತ್ತು ನಿಗಧಿತ ವಯಸ್ಸಿನಲ್ಲಿ ಮಕ್ಕಳನ್ನು ಶಾಲೆಗೆ ನೋಂದಾಯಿಸುವುದರಲ್ಲಿ ಪ್ರಗತಿ ಸಾಧಿಸಿವೆ. ಆದರೂ ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣ ಎಂಬ ಉದ್ದೇಶ ಕೇವಲ ಉದ್ದೇಶವಾಗಿಯೇ ಉಳಿದುಕೊಂಡಿದೆ. ಸಮಾಜದ ಅಂಚಿನಲ್ಲಿರುವ ಜನವರ್ಗ, ಅದರಲ್ಲಿ ವಿಶೇಷವಾಗಿ ಹೆಣ್ಣುಮಕ್ಕಳು ಹಾಗೂ ಮಹಿಳೆಯರ ಶಿಕ್ಷಣಕ್ಕೆ ಅವರು ಶಾಲೆಗೆ ನೋಂದಾಯಿಸದಿರುವುದಕ್ಕೆ, ಹಾಗೂ ಶಿಕ್ಷಣವನ್ನು ಮುಂದುವರಿಸುವುದಕ್ಕೆ ಇರುವ ಸಾಮಾಜಿಕವಾದ ಕುಂದುಕೊರತೆಯೇ ಇದಕ್ಕೆ ಪ್ರಮುಖ ಕಾರಣ ಎಂದು ತಿಳಿದುಬರುತ್ತದೆ.

### ೫.೨. ಶಾಲಾ ದಾಖಲಾತಿ

ಇತ್ತೀಚಿನ ದಿನಮಾನದಲ್ಲಿ ಲಿಂಗ-ಸಂಬಂಧಿ ಆಯಾಮಗಳಿಗೆ ಹೆಚ್ಚಿನ ಮಹತ್ವ ನೀಡಿದ್ದರ ಫಲವಾಗಿ ಪ್ರಾಥಮಿಕ ಶಿಕ್ಷಣ ಹಂತದಲ್ಲಿ ಹೆಣ್ಣುಮಕ್ಕಳ ಭಾಗವಹಿಸುವಿಕೆ ಹೆಚ್ಚಾಗಿದೆ. ಶಾಲಾ ದಾಖಲಾತಿಯಲ್ಲಿ ಹೆಣ್ಣು ಮತ್ತು ಗಂಡುಮಕ್ಕಳ ನಡುವಿನ ಅಂತರ ಸಾಕಷ್ಟು ಕಡಿಮೆಯಾಗಿದ್ದರೂ ಗಂಡುಮಕ್ಕಳ ಶಾಲಾ ದಾಖಲಾತಿಗೆ ಹೋಲಿಸಿದರೆ ಹೆಣ್ಣುಮಕ್ಕಳ ಶಾಲಾ ದಾಖಲಾತಿ ಸ್ವಲ್ಪ-ಕಡಿಮೆ ಇದೆ. ಒಟ್ಟು ಶಾಲಾ ದಾಖಲಾತಿ ಸಂಖ್ಯೆಯನ್ನು ಪರಿಗಣನೆಗೆ ತೆಗೆದುಕೊಂಡಾಗ ನಗರ-ಗ್ರಾಮೀಣ

ಪ್ರದೇಶದಲ್ಲಿ ಹೆಣ್ಣುಮಕ್ಕಳ ಶಾಲಾ ದಾಖಲಾತಿ ದರದಲ್ಲಿ ಸಾಕಷ್ಟು ವ್ಯತ್ಯಾಸವಿರುವುದು ಕಂಡುಬರುತ್ತದೆ. ಅದರಲ್ಲಿಯೂ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಇತರ ಹಿಂದುಳಿದ ಜಾತಿ ಹಾಗೂ ಕೆಲವು ಅಲ್ಪಸಂಖ್ಯಾತ ಗುಂಪುಗಳಿಗೆ ಸೇರಿದ ಹೆಣ್ಣುಮಕ್ಕಳ ಶಾಲಾ ದಾಖಲಾತಿಯಲ್ಲಿ ಇನ್ನೂ ಕೂಡ ಬಹಳ ಅಂತರವಿರುವುದು ಕಂಡುಬರುತ್ತದೆ.

ಪ್ರಾಥಮಿಕ ಶಾಲಾ ಹಂತದಲ್ಲಿ (ಒಂದರಿಂದ-ಐದನೇ) ಹೆಣ್ಣುಮಕ್ಕಳ ಶಾಲಾ ದಾಖಲಾತಿಯು ೧೯೫೦-೫೧ರಲ್ಲಿ ಶೇಕಡ ೨೪.೮ ಇದ್ದದ್ದು, ೨೦೦೨-೦೩ರ ವೇಳೆಗೆ ಶೇಕಡ ೮೭.೧ಕ್ಕೆ ಹೆಚ್ಚಳವಾಗಿದೆ. ಇದೇ ಅವಧಿಯಲ್ಲಿ ಮಾಧ್ಯಮಿಕ ಹಂತದಲ್ಲಿ ಶೇಕಡ ೪.೬ರಷ್ಟು ಹೆಣ್ಣುಮಕ್ಕಳು ೧೯೫೦-೫೧ರಲ್ಲಿ ದಾಖಲಾಗಿದ್ದರೆ, ೨೦೦೨-೦೩ರ ಅವಧಿಯಲ್ಲಿ ಶೇಕಡ ೫೦.೨ರಷ್ಟು ಹೆಣ್ಣು ಮಕ್ಕಳು ಶಾಲೆಗಳಲ್ಲಿ ದಾಖಲಾಗಿದ್ದಾರೆ. ಹಾಗೆಯೆ ೧೯೫೦-೫೧ರಲ್ಲಿ ಒಂದರಿಂದ-ಎಂಟನೇ ತರಗತಿಯವರೆಗೆ ದಾಖಲಾದ ಹೆಣ್ಣುಮಕ್ಕಳ ಪ್ರಮಾಣ ಶೇಕಡ ೧೭.೭ ರಷ್ಟು ಮಾತ್ರ. ೨೦೦೨-೦೩ರ ಅವಧಿಯಲ್ಲಿ ಶೇಕಡ ೭೩.೧೧ ರಷ್ಟು ಹೆಣ್ಣುಮಕ್ಕಳು ಮಾತ್ರ ಒಂದರಿಂದ-ಎಂಟನೇ ತರಗತಿಯಲ್ಲಿ ದಾಖಲಾಗಿರುತ್ತಾರೆ.

**೫.೩. ಹೆಣ್ಣುಮಕ್ಕಳ ಶಾಲಾ ಭಾಗವಹಿಸುವಿಕೆಯಲ್ಲಿನ ಪ್ರಗತಿ**

ಶಾಲೆಗಳಲ್ಲಿ ಹೆಣ್ಣು ಮಕ್ಕಳ ಭಾಗವಹಿಸುವಿಕೆ ಬೆಳವಣಿಗೆ ದರ ಗಂಡು ಮಕ್ಕಳಿಗಿಂತ ಹೆಚ್ಚಾಗಿದೆ. ಇದಕ್ಕೆ ಹೆಣ್ಣು ಮಕ್ಕಳು ಶೈಕ್ಷಣಿಕವಾಗಿ ಭಾಗವಹಿಸಲು ನೀಡಿದ ಪ್ರಾಶಸ್ತ್ಯ ಮಾತ್ರ ಎಂದು ಹೇಳಲು ಬರುವುದಿಲ್ಲ. ಆದರೆ, ಸರ್ಕಾರಗಳು (ಕೇಂದ್ರ-ರಾಜ್ಯ) ವಿವಿಧ ಅಭಿವೃದ್ಧಿ ಯೋಜನೆಗಳ ಮೂಲಕ ಹೆಣ್ಣು ಮಕ್ಕಳ/ಮಹಿಳೆಯರ ಶೈಕ್ಷಣಿಕ ಮಟ್ಟ ಹೆಚ್ಚಿಸಲು ಹಾಕಿಕೊಂಡ ಯೋಜನೆಗಳು ಮಹತ್ವದ ಪಾತ್ರವನ್ನು ನಿರ್ವಹಿಸಿವೆ ಎಂದು ಹೇಳಬಹುದು.

ಪ್ರಾಥಮಿಕ ಶಾಲಾ ಹಂತದಲ್ಲಿ (೧ರಿಂದ ೫ನೇ ತರಗತಿ) ೧೯೯೦-೯೧ ರಿಂದ ೨೦೦೦-೦೧ರ ನಡುವೆ ಹೆಣ್ಣುಮಕ್ಕಳ ಸಂಖ್ಯೆ ಗಂಡು ಮಕ್ಕಳಿಗೆ ಹೋಲಿಸಿದರೆ, ಎರಡು ಪಟ್ಟು ಹೆಚ್ಚಾಗಿದೆ. ಇದೇ ಅವಧಿಯಲ್ಲಿ ಮಾಧ್ಯಮಿಕ ಶಾಲಾ (೬ ರಿಂದ ೮ನೇ ತರಗತಿ) ಹಂತದಲ್ಲಿ ಗಂಡುಮಕ್ಕಳಿಗಿಂತ ಹೆಣ್ಣುಮಕ್ಕಳ ಶಾಲಾ ಭಾಗವಹಿಸುವಿಕೆಯು ಎರಡು ಪಟ್ಟುಕ್ಕಿಂತಲೂ ಹೆಚ್ಚಾಗಿರುವುದು ತಿಳಿದುಬರುತ್ತದೆ. ಒಟ್ಟಾರೆ ಇದೇ ಅವಧಿಯಲ್ಲಿ ಪ್ರಾಥಮಿಕ ಹಂತದಲ್ಲಿ ಹೆಣ್ಣುಮಕ್ಕಳ ದಾಖಲಾತಿಯ ಸಂಖ್ಯೆಯು ೮ ಮಿಲಿಯನ್‌ಗಿಂತಲೂ ಹೆಚ್ಚಾಗಿದ್ದರೆ, ಗಂಡುಮಕ್ಕಳ ದಾಖಲಾತಿ ಸಂಖ್ಯೆಯು ೫ ವಿಲಿಯನ್‌ನಷ್ಟು ಹೆಚ್ಚಾಗಿದೆ. ಹಾಗೆಯೇ ಮಾಧ್ಯಮಿಕ ಹಂತದಲ್ಲಿ ಹೆಣ್ಣುಮಕ್ಕಳ ಸಂಖ್ಯೆ ೪.೩ ಮಿಲಿಯನ್‌ನಷ್ಟು ಹೆಚ್ಚಾಗಿದ್ದರೆ, ಗಂಡುಮಕ್ಕಳ ಸಂಖ್ಯೆಯು ೩.೨ ಮಿಲಿಯನ್‌ನಷ್ಟು ಹೆಚ್ಚಾಗಿದೆ.

**ಶೇಕಡವಾರು ಪ್ರಮಾಣ**

ಸ್ವಾತಂತ್ರ್ಯ ದೊರತಾಗಿನಿಂದ ಹೆಣ್ಣು ಮಕ್ಕಳ ಶೈಕ್ಷಣಿಕ ಭಾಗವಹಿಸುವಿಕೆಯ ಪ್ರಮಾಣವು ವಿವಿಧ ಶಾಲಾ ಹಂತದಲ್ಲಿ ಗಣನೀಯವಾಗಿ ಹೆಚ್ಚಾಗುತ್ತಾ ಬಂದಿದೆ. ೧೯೫೦-೫೧ ಮತ್ತು ೨೦೦೦-೦೧ರ ನಡುವೆ ಪ್ರಾಥಮಿಕ ಹಂತದ ಶಾಲೆಗಳಿಗೆ ಹೆಣ್ಣುಮಕ್ಕಳ ದಾಖಲಾತಿ ಪ್ರಮಾಣವು ಶೇಕಡ

೨೮.೧ ರಿಂದ ಶೇಕಡ ೪೮.೬೨ಕ್ಕೆ ಏರಿಕೆಯಾಗಿದೆ. ಮಾಧ್ಯಮಿಕ ಶಾಲಾ ಹಂತದಲ್ಲಿ ಹೆಣ್ಣು ಮಕ್ಕಳ ಶಾಲಾ ದಾಖಲಾತಿ ಪ್ರಮಾಣ ಶೇಕಡ ೬.೧ ರಿಂದ ಶೇಕಡ ೪೬.೧೨ಕ್ಕೆ ಹೆಚ್ಚಳವಾಗಿದೆ. ಪ್ರೌಢ ಶಾಲಾ ಹಂತದಲ್ಲಿ ಇದು ಶೇಕಡ ೧೩.೩ರಿಂದ ಶೇಕಡ ೪೩.೪೨ಕ್ಕೆ ಹಾಗೂ ಉನ್ನತ ಶಿಕ್ಷಣದಲ್ಲಿ ಶೇಕಡ ೧೦ ರಿಂದ ಶೇಕಡ ೩೬.೬ಕ್ಕೆ ಹೆಚ್ಚಾಗಿದೆ.

**ಕೋಷ್ಟಕ-೫.೨**

## ೧೯೫೦-೫೧ ರಿಂದ ೨೦೦೦-೦೧ರ ಅವಧಿಯಲ್ಲಿ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲೆಗಳಲ್ಲಿ ಹೆಣ್ಣು ಮಕ್ಕಳ ದಾಖಲಾತಿಯ ಶೇಕಡವಾರು ಪ್ರಮಾಣ

| ವರ್ಷಗಳು | ಪ್ರಾಥಮಿಕ ಹಂತ (೧ ರಿಂದ ೫) | ಮಾಧ್ಯಮಿಕ ಹಂತ (೬ ರಿಂದ ೮) |
|---|---|---|
| ೧೯೫೦-೫೧ | ೨೮.೧ | ೬.೧ |
| ೧೯೬೦-೬೧ | ೩೨.೬ | ೨೩.೯ |
| ೧೯೭೦-೭೧ | ೩೭.೪ | ೨೯.೩ |
| ೧೯೮೦-೮೧ | ೩೮.೬ | ೩೨.೯ |
| ೧೯೯೦-೯೧ | ೪೧.೫ | ೩೬.೭ |
| ೨೦೦೦-೦೧ | (೪೩.೬೨) | (೪೬.೧೨) |

ಮೂಲ : ಆಯ್ದ ಶೈಕ್ಷಣಿಕ ಅಂಕಿ-ಸಂಖ್ಯೆಗಳು, ೨೦೦೧.

**ಕೋಷ್ಟಕ-೫.೩**

## ೨೦೦೦-೦೧ರಲ್ಲಿ ಪ್ರಾಥಮಿಕ ಹಂತದಲ್ಲಿ ವಿವಿಧ ಸಾಮಾಜಿಕ ಗುಂಪುಗಳಿಗೆ ಸೇರಿದ ಹೆಣ್ಣು ಮಕ್ಕಳ ದಾಖಲಾತಿ ಶೇಕಡವಾರು ಪ್ರಮಾಣ

| ಸಾಮಾಜಿಕ ಗುಂಪು | ಪ್ರಾಥಮಿಕ ಹಂತ (೧ ರಿಂದ ೫) | | ಮಾಧ್ಯಮಿಕ ಹಂತ (೬ ರಿಂದ ೮) | |
|---|---|---|---|---|
| | ೧೯೯೭-೯೮ | ೨೦೦೦-೦೧ | ೧೯೯೭-೯೮ | ೨೦೦೦-೦೧ |
| ಎಲ್ಲ ಗುಂಪುಗಳು | ೪೩.೬೨ | ೭೦.೨ | ೪೦.೧೨ | ೫೦.೭ |
| ಪರಿಶಿಷ್ಟ ಜಾತಿ | ೪೨.೫೯ | ೬೮.೬ | ೩೮.೪೯ | ೪೨.೮ |
| ಪರಿಶಿಷ್ಟ ಪಂಗಡ | ೪೨.೮೨ | ೬೪.೫ | ೩೭.೦೯ | ೪೦.೩ |

ಮೂಲ : ಪ್ರಶಾಂತ್ ಎಚ್.ಡಿ., ೨೦೦೬.

ಪ್ರಾಥಮಿಕ ಹಂತದಲ್ಲಿ ಒಟ್ಟು ಎಲ್ಲಾ ಸಾಮಾಜಿಕ ಗುಂಪುಗಳ ಹೆಣ್ಣುಮಕ್ಕಳ ದಾಖಲಾತಿ ಪ್ರಮಾಣಕ್ಕೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಹೆಣ್ಣು ಮಕ್ಕಳ ದಾಖಲಾತಿ ಪ್ರಮಾಣಕ್ಕೂ ಅಷ್ಟೇನೂ ವ್ಯತ್ಯಾಸ ಕಂಡುಬರುವುದಿಲ್ಲ. ಇದು ಸ್ವಲ್ಪ ಹೆಚ್ಚು ಕಡಿಮೆ ಸಾಮಾನ್ಯ ಜನಸಂಖ್ಯೆಯಲ್ಲಿನ ಪ್ರತಿಶತ ಹೆಣ್ಣು ಮಕ್ಕಳ ಪ್ರಮಾಣದಷ್ಟೆ ಇದೆ. ಮಾಧ್ಯಮಿಕ ಶಾಲಾ ಹಂತದಲ್ಲಿ ಪರಿಶಿಷ್ಟ ಪಂಗಡ ಹಾಗೂ ಪರಿಶಿಷ್ಟ ಜಾತಿಯ ಹೆಣ್ಣುಮಕ್ಕಳು ಸಾಮಾನ್ಯ ಜನಸಂಖ್ಯೆಯ ಹೆಣ್ಣುಮಕ್ಕಳಿಗೆ ಹೋಲಿಸಿದರೆ ಹಿಂದುಳಿದಿದ್ದಾರೆ. ಪ್ರಾಥಮಿಕ ಹಂತದಲ್ಲಿ ಒಟ್ಟು ಮಕ್ಕಳಲ್ಲಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಮಕ್ಕಳ ಪ್ರಮಾಣ, ಒಟ್ಟು ಮಕ್ಕಳಷ್ಟು ಇದೆ. ಈ ಜಾತಿ-ಪಂಗಡಗಳ ಪ್ರಮಾಣ ಒಂದೇ ರೀತಿಯಾಗಿದೆ. ಆದರೆ, ಮಾಧ್ಯಮಿಕ ಶಾಲಾ ಹಂತದಲ್ಲಿ ಪರಿಶಿಷ್ಟ ಪಂಗಡಕ್ಕೆ ಸೇರಿದ ಗಂಡು-ಹೆಣ್ಣು ಮಕ್ಕಳ ನಡುವಿನ ಪರಿಸ್ಥಿತಿ ತೃಪ್ತಿಕರವಾಗಿಲ್ಲ. ೧೯೯೧ರ ಜನಗಣತಿ ಪ್ರಕಾರ ಒಟ್ಟು ಜನಸಂಖ್ಯೆಯಲ್ಲಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಗಳ ಅನುಕ್ರಮವಾಗಿ ೧೬.೩೩ ಮತ್ತು ೮.೦೧ ರಷ್ಟಿದೆ.

**೫.೪. ಪ್ರಾದೇಶಿಕ ವೈವಿಧ್ಯತೆ**

ಹೆಣ್ಣುಮಕ್ಕಳ ಶಾಲಾ ದಾಖಲಾತಿಯಲ್ಲಿ ಪ್ರಾದೇಶಿಕ ವೈವಿಧ್ಯತೆ/ವ್ಯತ್ಯಾಸಗಳು ಎದ್ದು ಕಾಣುತ್ತವೆ. ಪ್ರಾಥಮಿಕ ಶಾಲಾ ಹಂತದ ದಾಖಲಾತಿಯಲ್ಲಿನ ವ್ಯತ್ಯಾಸವು ಶೇಕಡ ೩೭.೦೦ರಷ್ಟು ಬಿಹಾರ ಮತ್ತು ಉತ್ತರ ಪ್ರದೇಶದಲ್ಲಿದ್ದರೆ, ಶೇಕಡ ೫೦.೦೦ರಷ್ಟು ಪ್ರಮಾಣದ ವ್ಯತ್ಯಾಸವು ಮೇಘಾಲಯದಲ್ಲಿ ಕಂಡು ಬರುತ್ತದೆ. ಮಾಧ್ಯಮಿಕ ಹಂತದಲ್ಲಿ ಬಿಹಾರದಲ್ಲಿ ಶೇಕಡ ೩೧.೦೦ರಷ್ಟು, ದಿಯು ಮತ್ತು ದಮನ್‌ನಲ್ಲಿ ಶೇಕಡ ೫೩ರಷ್ಟಿದೆ. ಪ್ರೌಢ ಶಾಲಾ ಹಂತದಲ್ಲಿ ಬಿಹಾರದಲ್ಲಿ ಶೇಕಡ ೨೫.೦೦ರಷ್ಟು ಇದ್ದರೆ, ದಿಯು ಮತ್ತು ದಮನ್‌ನಲ್ಲಿ ಶೇಕಡ ೫೩.೫ ರಷ್ಟಿದೆ. ಉನ್ನತ ಶಿಕ್ಷಣಕ್ಕೆ ಶೇಕಡ ೧೯.೦೦ ರಷ್ಟು ಹೆಣ್ಣುಮಕ್ಕಳು ಬಿಹಾರದಲ್ಲಿ ದಾಖಲಾಗುತ್ತಿದ್ದರೆ, ಕೇರಳದಲ್ಲಿ ಶೇಕಡ ೫೯.೦೦ ರಷ್ಟು ಹೆಣ್ಣು ಮಕ್ಕಳು ಉನ್ನತ ಶಿಕ್ಷಣಕ್ಕೆ ದಾಖಲಾಗುತ್ತಿದ್ದಾರೆ.

ಗಂಡುಮಕ್ಕಳಿಗೆ ಹೋಲಿಸಿದರೆ, ಹೆಣ್ಣುಮಕ್ಕಳು ಕಡಿಮೆ ಮಟ್ಟದ ಚಲನೆಯನ್ನು ಎಲ್ಲಾ ಕ್ಷೇತ್ರದಲ್ಲಿ ಹೊಂದಿರುವುದೇ ಇದಕ್ಕೆ ಪ್ರಮುಖ ಕಾರಣ. ತಂದೆ-ತಾಯಿ ಹಾಗೂ ಪೋಷಕರು ಹೆಣ್ಣು ಮಕ್ಕಳ ವೈಯಕ್ತಿಕ ರಕ್ಷಣೆಗೆ ಪ್ರಥಮ ಆದ್ಯತೆ ನೀಡುವ ಕಾರಣದಿಂದ ತಾವಿರುವ ಗ್ರಾಮದಲ್ಲಿನ ಮತ್ತು ಪಕ್ಕದ ಊರಿನಲ್ಲಿ ಇರುವ ಶೈಕ್ಷಣಿಕ ಸೌಲಭ್ಯವನ್ನು ಹೆಣ್ಣುಮಕ್ಕಳು ಬಳಸಿಕೊಳ್ಳುವಲ್ಲಿ ವಿಫಲವಾಗುವಂತಹ ಪರಿಸರ ಇದೆ. ಕಂದಾಯ ಗ್ರಾಮ ಎನ್ನುವುದು ಬಹುತೇಕ ಸಂದರ್ಭದಲ್ಲಿ ಅನೇಕ ಜನವಸತಿ ನೆಲೆ ಹಾಗೂ ಉಪ-ಘಟಕಗಳನ್ನು ಹೊಂದಿರುತ್ತದೆ. ಸರಾಸರಿ ಒಂದು ಕಂದಾಯ ಗ್ರಾಮಕ್ಕೆ ಎರಡು ಜನವಸತಿ ನೆಲೆಗಳು ಬರುತ್ತವೆ. ಉದಾಹರಣೆಗೆ, ಅನೇಕ ಸಂದರ್ಭದಲ್ಲಿ ಕಂದಾಯ ಗ್ರಾಮವು ಹಲವು ಕಿಲೋಮೀಟರ್‌ಗಳ ದೂರ ವಿಸ್ತರಣೆಯಾಗಿರುವುದು ತಿಳಿದುಬರುತ್ತದೆ. ಗುಡ್ಡಗಾಡು ಹಾಗೂ ಕಣಿವೆ ಪ್ರದೇಶಗಳು ಹೆಚ್ಚಾಗಿರುವ ಪ್ರದೇಶ/ರಾಜ್ಯಗಳಲ್ಲಿ ಕಂದಾಯ ಗ್ರಾಮ ಹಲವಾರು ಕಿಲೋಮೀಟರ್

ಗಳವರೆಗೆ ವಿಸ್ತೀರ್ಣಗೊಂಡಿರುತ್ತದೆ. ಉದಾಹರಣೆಗೆ, ಮಧ್ಯಪ್ರದೇಶ, ರಾಜಸ್ಥಾನ, ಜಮ್ಮು-ಕಾಶ್ಮೀರ, ಅಸ್ಸಾಂ, ಉತ್ತರಾಚಲ, ಇನ್ನೂ ಮುಂತಾದ ರಾಜ್ಯಗಳಲ್ಲಿ ಗುಡ್ಡಗಾಡು ಹಾಗೂ ಅರಣ್ಯ ಪ್ರದೇಶಗಳು ಭೌತಿಕವಾದ ಅಂತರವನ್ನು ಮಾತ್ರ ಹುಟ್ಟು ಹಾಕದೇ, ಇದು ಸಾಮಾಜಿಕ ಅಂತರವನ್ನು ಕೂಡ ಹೆಚ್ಚಿಸುತ್ತದೆ (ಉಷಾ ನಾಯರ್, ೧೯೯೩-೦೪). ಇಂತಹ ಜನವಸತಿ ನೆಲೆಗಳು ಜಾತಿ-ವರ್ಗದ ಆಧಾರ ದಲ್ಲಿಯೂ ಇರುತ್ತವೆ. ಇದು ಕೇವಲ ಕೃಷಿ ಭೂಮಿ ಹೊಂದಿರುವ ಮೇಲುಜಾತಿಗೆ/ವರ್ಗಕ್ಕೆ ಮಾತ್ರ ಸೀಮಿತವಾಗದೆ, ಪರಿಶಿಷ್ಟ ಜಾತಿ ಮತ್ತು ಪಂಗಡಗಳಿಗೆ ಸೇರಿದವರು ಆಗಿರುತ್ತಾರೆ. ನಾವು ಅವಲೋಕಿಸಿ ದಂತೆ ಬಹುತೇಕ ಕಂದಾಯ ಗ್ರಾಮಗಳ ಮಧ್ಯ ವಿಭಾಗದಲ್ಲಿ ಮೇಲುಜಾತಿ ವರ್ಗಕ್ಕೆ ಸೇರಿದ ಜನಸಮುದಾಯದ ಜನರು ವಾಸವಾಗಿದ್ದರೆ, ಗ್ರಾಮದ ಅಂಚಿನಲ್ಲಿ ಅವಕಾಶ ವಂಚಿತರು ಪರಿಶಿಷ್ಟ ಜಾತಿ ವರ್ಗಕ್ಕೆ ಸೇರಿದ ಜನ ಸಮುದಾಯದ ಜನರು ವಾಸವಾಗಿದ್ದಾರೆ. ಬಹುತೇಕ ಸಂದರ್ಭದಲ್ಲಿ ಶಾಲೆಗಳು ಗ್ರಾಮದ ಮಧ್ಯಭಾಗದಲ್ಲಿ ಇದ್ದರೆ ಅಥವಾ ಅವಕಾಶ ವಂಚಿತರ ಜನವಸತಿ ನೆಲೆಗಳಿಂದ ದೂರ ನೆಲೆಗೊಂಡಿವೆ. ಹಾಗೂ ಸಾಮಾನ್ಯವಾಗಿ ಶಾಲೆಗಳು ಉನ್ನತ ಜಾತಿಯವರ ಪ್ರಮುಖ ಪ್ರದೇಶ ದಲ್ಲಿಯೇ ಇರುತ್ತವೆ. ಇಂತಹ ಪರಿಸ್ಥಿತಿಯಲ್ಲಿ ನಿರ್ದಿಷ್ಟವಾಗಿ ಪರಿಶಿಷ್ಟ ಜಾತಿ ಹಾಗೂ ಪಂಗಡಗಳಿಗೆ ಸೇರಿದ ಪೋಷಕರು ತಮ್ಮ ಮಕ್ಕಳನ್ನು ಉನ್ನತ ಜಾತಿ ಜನರಿಗೆ ಸೇರಿದ ಪ್ರದೇಶದಲ್ಲಿ ಮಕ್ಕಳನ್ನು ಶಾಲೆಗೆ ಕಳುಹಿಸಲು ಈಗಲೂ ಹಿಂಜರಿಯುತ್ತಿದ್ದಾರೆ. ಇಂತಹ ಪರಿಸ್ಥಿತಿ ಭಾರತದ ಉತ್ತರ ಭಾಗದಲ್ಲಿ ಹೆಚ್ಚಾಗಿದೆ ಎಂದು ನಾಯರ್ ತಮ್ಮ ಅಧ್ಯಯನದಲ್ಲಿ ವಿವರಿಸಿದ್ದಾರೆ.

ಗ್ರಾಮೀಣ ಪ್ರದೇಶದ ಹೆಣ್ಣುಮಕ್ಕಳು ಶೈಕ್ಷಣಿಕವಾಗಿ ಹಿಂದುಳಿದಿರುವಿಕೆಯು ಗ್ರಾಮೀಣ ಪ್ರದೇಶ ಅಭಿವೃದ್ಧಿಯನ್ನು ಸೂಚಿಸುವ ಸಂಬಂಧ ಹೊಂದಿದೆ. ಅಭಿವೃದ್ಧಿಯ ಮೂಲ ಸೌಲಭ್ಯಗಳಾದ, ಸುರಕ್ಷಿತ ಸಾರಿಗೆ-ಸೌಲಭ್ಯ, ಸುರಕ್ಷಿತ ಕುಡಿಯುವ ನೀರು, ಕಡಿಮೆ ಬೆಲೆಯಲ್ಲಿ ಉರುವಲು ದೊರಕುವಿಕೆ, ಶೌಚಾಲಯ, ಸ್ವಚ್ಛತೆ, ಮೂಲ ಆರೋಗ್ಯ ಸೌಲಭ್ಯಗಳು ಹಾಗೂ ಶೈಕ್ಷಣಿಕ ಮೂಲ ಸೌಲಭ್ಯಗಳು ಕೂಡ ಅಭಿವೃದ್ಧಿಯ ಸೂಚಕವಾಗಿದೆ. ಈ ಎಲ್ಲ ಮೂಲ ಸೌಲಭ್ಯಗಳ ಕೊರತೆಯು ಚಿಕ್ಕಪುಟ್ಟ ಗ್ರಾಮಗಳಲ್ಲಿ ಬಹಳ ಹೆಚ್ಚಾಗಿ ಈಗಲೂ ಕಂಡುಬರುತ್ತದೆ. ಅದರಲ್ಲಿ ಜನಸಂಖ್ಯೆ ಬಹಳ ಕಡಿಮೆ ಇರುವ ಅತಿ ಸಣ್ಣ ಜನವಸತಿ ಪ್ರದೇಶದಲ್ಲಿ ಈ ಸೌಲಭ್ಯಗಳು ಇಲ್ಲವೇ ಇಲ್ಲ ಎಂದು ಹೇಳಿದರೆ ತಪ್ಪಾಗಲಾರದು. ಬಡತನಕ್ಕೂ, ಲಿಂಗಸಂಬಂಧಿ ತಾರತಮ್ಯಕ್ಕೂ ಬಿಡಿಸಲಾಗದ ಸಂಬಂಧ. ಅದರಲ್ಲಿಯೂ ಗ್ರಾಮೀಣ ಪ್ರದೇಶದಲ್ಲಿ ಬಡತನವು ಹೆಣ್ಣು ಮಕ್ಕಳ ಮೇಲೆ ಹೆಚ್ಚಿನ ದುಡಿಮೆಯ ಹೊರೆಯನ್ನು ಹೊರಿಸುತ್ತದೆ. ತಮ್ಮ ಕುಟುಂಬಗಳಿಗಾಗಿ ಹೆಣ್ಣು ಮಕ್ಕಳು ಪ್ರತ್ಯೇಕ್ಷವಾಗಿ ಮತ್ತು ಪರೋಕ್ಷವಾಗಿ ದುಡಿಯುವಂತೆ ಹಾಗೂ ಮಿತಿಯಿಲ್ಲದೆ ಕೆಲಸ ಮಾಡುವ ಪರಿಸ್ಥಿತಿಯನ್ನು ಗ್ರಾಮೀಣ ಬಡತನವು ರೂಪಿಸುತ್ತದೆ. ಮನೆಯಲ್ಲಿ ಮುದ್ದಿನಿಂದ ಆಟವಾಡಬೇಕಾದಂತಹ ಸಾಕಷ್ಟು ಚಿಕ್ಕ ಹೆಣ್ಣು ಮಕ್ಕಳು ಕುಟುಂಬಕ್ಕೆ ಆದಾಯ ತರುವವರಾಗಿ ಕಾರ್ಯನಿರ್ವಹಿಸುತ್ತಿರುವುದನ್ನು ನಾವು ಗ್ರಾಮೀಣ ಪ್ರದೇಶದಲ್ಲಿ ಕಾಣುತ್ತೇವೆ. ಆದರೆ ಗಂಡುಮಕ್ಕಳನ್ನು ವರದಕ್ಷಿಣೆ ತರುವ/ಆದಾಯ ತರುವವರು

ಎಂದು ಮುದ್ದಿನಿಂದ ಪೋಷಿಸುವ ಸಾಮಾಜಿಕ ಪರಿಸರವನ್ನು ನಾವು ಕಾಣಬಹುದು. ನಿರ್ದಿಷ್ಟವಾಗಿ ಮಾಧ್ಯಮಿಕ ಹಾಗೂ ಅದರ ನಂತರ ಶಾಲಾ ಭಾಗವಹಿಸುವಿಕೆಯಲ್ಲಿ ಹೆಣ್ಣುಮಕ್ಕಳ ಸಂಖ್ಯೆ ಈಗಲೂ ಬಹಳ ಕಡಿಮೆ ಪ್ರಮಾಣದಲ್ಲಿ ಇರುವುದಕ್ಕೆ ಪ್ರಮುಖ ಕಾರಣ. ಗ್ರಾಮೀಣ ಪ್ರದೇಶಗಳಲ್ಲಿ ಮಹಿಳಾ ಶಿಕ್ಷಕಿಯರ ಕೊರತೆಯೂ ಪ್ರಮುಖವಾಗಿದೆ. ಹಿಂದಿನ ೬ನೇ ಅಖಿಲ ಭಾರತ ಶೈಕ್ಷಣಿಕ ಸಮೀಕ್ಷೆಯ ಮಾಹಿತಿ ಪ್ರಕಾರ ಗ್ರಾಮೀಣ ಪ್ರದೇಶದಲ್ಲಿ ಮಹಿಳಾ ಶಿಕ್ಷಕಿಯರ ಕೊರತೆ ಎದ್ದು ಕಾಣುತ್ತಿದೆ.

### ೫.೫. ಮಧ್ಯದಲ್ಲಿ ಶಾಲೆ ಬಿಡುವವರ ಪ್ರಮಾಣ

೧೯೫೦-೫೧ ರಿಂದ ೨೦೦೦-೦೧ರ ನಡುವಿನ ಅವಧಿಯಲ್ಲಿ ಶಾಲೆಗೆ ದಾಖಲಾಗುವವರ ಪ್ರಮಾಣ ಮತ್ತು ಕಲಿಕೆಯನ್ನು ಮುಂದುವರಿಸುವವರ ಸಂಖ್ಯೆ ಸಾಕಷ್ಟು ಪ್ರಮಾಣದಲ್ಲಿ ಹೆಚ್ಚಾಗಿದೆ. ೧೯೬೦-೬೧ ರಿಂದ ೨೦೦೦-೦೧ರ ಅವಧಿಯಲ್ಲಿ ಪ್ರಾಥಮಿಕ ಹಂತದಲ್ಲಿ (೧ ರಿಂದ ೫) ಶಾಲೆಯನ್ನು ಮಧ್ಯದಲ್ಲಿಯೇ ಬಿಡುವ ಗಂಡು ಮಕ್ಕಳ ಪ್ರಮಾಣ ಶೇಕಡ ೬೧.೭ ರಿಂದ ೩೯.೭ಕ್ಕೆ ಕಡಿಮೆಯಾಗಿದ್ದರೆ, ಇದು ಹೆಣ್ಣುಮಕ್ಕಳಲ್ಲಿ ಶೇಕಡ ೭೦.೯ ರಿಂದ ೪೧.೯ಕ್ಕೆ ಇಳಿದಿದೆ. ಹಾಗೆಯೇ ೧ನೇ ತರಗತಿಯಿಂದ ೮ನೇ ತರಗತಿಯವರೆಗೆ (ಮಾಧ್ಯಮಿಕ ಹಾಗೂ ಪ್ರೌಢ ಹಂತದ) ಮಧ್ಯದಲ್ಲಿ ಶಾಲೆ ಬಿಡುವ ಗಂಡು ಮಕ್ಕಳ ಪ್ರಮಾಣವು ಶೇಕಡ ೭೫.೦ ಯಿಂದ ಶೇಕಡ ೫೦.೩ಕ್ಕೆ ಹಾಗೂ ಹೆಣ್ಣು ಮಕ್ಕಳಲ್ಲಿ ಮಧ್ಯದಲ್ಲಿ ಶಾಲೆ ಬಿಡುವ ಪ್ರಮಾಣವು ಶೇಕಡ ೮೫.೦ ರಿಂದ ಶೇಕಡ ೫೭.೭ಕ್ಕೆ ಇಳಿದಿದೆ. ಇದು ಆಶಾದಾಯಕ ಬೆಳವಣಿಗೆ. ಆದರೆ, ನಮಗೆ ದೊರಕುವ ಅಂಕಿ-ಸಂಖ್ಯೆಗಳ ಪ್ರಕಾರ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡ ಸೇರಿದ ಮಕ್ಕಳಲ್ಲಿ ಶಾಲೆಯನ್ನು ಮಧ್ಯದಲ್ಲಿಯೇ ಬಿಡುವ ಪ್ರಮಾಣ ಸಾಮಾನ್ಯ ವರ್ಗದ ಮಕ್ಕಳಿಗಿಂತ ಹೆಚ್ಚಾಗಿರುವುದು ತಿಳಿದುಬರುತ್ತದೆ. ಇದೇ ಪ್ರವೃತ್ತಿ ಗ್ರಾಮೀಣ ಪ್ರದೇಶದ ಹೆಣ್ಣುಮಕ್ಕಳಲ್ಲಿ ಹೆಚ್ಚಾಗಿರುವುದು ಕಂಡುಬರುತ್ತದೆ.

**ಕೋಷ್ಟಕ-೫.೪**

**೧೯೬೦-೬೧ ರಿಂದ ೨೦೦೦-೦೧ ರವರೆಗೆ**
**ವಿವಿಧ ಹಂತದಲ್ಲಿ ಮಧ್ಯದಲ್ಲಿ ಶಾಲೆ ಬಿಟ್ಟ ಮಕ್ಕಳ ಪ್ರಮಾಣ**

| ವರ್ಷಗಳು | (೧ ರಿಂದ ೫ನೇ ತರಗತಿವರೆಗೆ) | | | (೧ ರಿಂದ ೮ನೇ ತರಗತಿವರೆಗೆ) | | |
|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧೯೬೦-೬೧ | ೬೧.೭ | ೭೦.೯ | ೬೪.೯ | ೭೫.೦ | ೮೫.೦ | ೭೮.೩ |
| ೧೯೭೦-೭೧ | ೬೪.೫ | ೭೦.೯ | ೬೭.೦ | ೭೪.೬ | ೮೩.೪ | ೭೭.೯ |
| ೧೯೮೦-೮೧ | ೫೬.೨ | ೬೨.೫ | ೫೮.೭ | ೬೮.೦ | ೭೯.೪ | ೭೨.೭ |
| ೧೯೯೦-೯೧ | ೪೦.೧ | ೪೬.೦ | ೪೨.೬ | ೫೯.೧ | ೬೫.೧ | ೬೦.೯ |
| ೨೦೦೦-೦೧ | ೩೯.೭ | ೪೧.೯ | ೪೦.೭ | ೫೦.೩ | ೫೭.೭ | ೫೩.೭ |

ಮೂಲ : ಸೆಲೆಕ್ಟೆಡ್ ಎಜ್ಯುಕೇಷನಲ್ (ರಿಲೇವೆಂಟ್ ಇಯರ್ಸ್) ಸ್ಟಾಟಿಸ್ಟಿಕ್ಸ್, ೨೦೦೧.

ಹೆಣ್ಣುಮಕ್ಕಳು ಹಾಗೂ ಗಂಡುಮಕ್ಕಳಲ್ಲಿ ಶಾಲೆಯನ್ನು ಮಧ್ಯದಲ್ಲಿಯೇ ಬಿಡುವವರ ಪ್ರಮಾಣ ಹಾಗೂ ಉತ್ತೀರ್ಣವಾಗುವವರ ಪ್ರಮಾಣದ ಅಂತರವು ಬಹಳ ಕಡಿಮೆ. ಆದರೆ ಗಂಡುಮಕ್ಕಳಿಗೆ ಹೋಲಿಸಿ ನೋಡಿದಾಗ ಹೆಣ್ಣುಮಕ್ಕಳು ಐದು ವರ್ಷದ ಪ್ರಾಥಮಿಕ ಹಂತ ಶಿಕ್ಷಣ ಮುಗಿಸಲು ಒಂದು ವರ್ಷ ಹೆಚ್ಚಿಗೆ ತೆಗೆದುಕೊಳ್ಳುತ್ತಾರೆ. ಎಲ್ಲರಿಗೂ ಶಿಕ್ಷಣ ನೀಡಬೇಕು ಎನ್ನುವ ಯೋಜನೆ/ಕಾರ್ಯಕ್ರಮ ಗಳಲ್ಲಿ ಹೆಣ್ಣುಮಕ್ಕಳ ದಾಖಲಾತಿ ಶಾಲೆಯಲ್ಲಿ ಉಳಿದುಕೊಳ್ಳುವಿಕೆಯೇ ಸಾಧನೆ.

ಒಟ್ಟಾರೆಯಾಗಿ ಭಾರತದಲ್ಲಿ ಪರಿಹಾರ ಶಿಕ್ಷಣ ಇನ್ನು ರೂಪಿತವಾಗಿ ಜನಪ್ರಿಯವಾಗಬೇಕಾಗಿದೆ. ವಿದ್ಯಾರ್ಥಿ ವೇತನ, ಉಚಿತ ಶಿಕ್ಷಣವಲ್ಲದೇ ಉಚಿತ ಊಟದ ವ್ಯವಸ್ಥೆ, ವಸತಿ ಸೌಲಭ್ಯ, ಉಚಿತ ಪುಸ್ತಕ, ತಾಂತ್ರಿಕ ಶಿಕ್ಷಣ, ವಿಶೇಷ ಬೋಧನೆಯ ಸೌಕರ್ಯಗಳು ನೀಡಲ್ಪಡುತ್ತಿವೆ. ಇಂದು ಮಹಿಳಾ ಶಿಕ್ಷಣದ ಮಕ್ಕಳ ಶಿಕ್ಷಣದ ಅಭಿವೃದ್ಧಿ ಒಂದು ಸವಾಲಾಗಿದೆ. ಇಂಥ ಸಮಸ್ಯೆ ಪರಿಹಾರಕ್ಕೆ ಬಹುಮುಖಿ ಪ್ರಯತ್ನ ನಡೆಯುತ್ತಿದೆ. ನಮ್ಮ ಸಮಾಜದಲ್ಲಿ ಬೇರೂರಿರುವ ಆರ್ಥಿಕ ಅಂಶಗಳು ಮನೋವೈಜ್ಞಾನಿಕ ಮತ್ತು ಇತರ ಅಂಶಗಳು ಮಹಿಳಾ ಸಮಸ್ಯೆಯನ್ನು ಕೆರಳಿಸಿವೆ

## ಆಕರಗ್ರಂಥಗಳು

ಚಂದ್ರಶೇಖರ್ ಟಿ.ಆರ್., (೨೦೦೬), ಕರ್ನಾಟಕದ ಪ್ರಾಥಮಿಕ ಶಿಕ್ಷಣದ ಸ್ಥಿತಿಗತಿ, ಅಭಿವೃದ್ಧಿ ಅಧ್ಯಯನ ಪತ್ರಿಕೆ, ಸಂಪುಟ ೫, ಸಂಚಿಕೆ ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಡಿಪಾರ್ಟ್‌ಮೆಂಟ್ ಆಫ್ ಎಜ್ಯುಕೇಶನ್, (೧೯೯೬), ಸೆಲೆಕ್ಟೆಡ್ ಎಜ್ಯುಕೇಷನಲ್ ಸ್ಟ್ಯಾಟಿಕ್ಟಿಕ್ಸ್ ಎಮ್.ಎಚ್.ಆರ್.ಡಿ., ಗರ್ವನಮೆಂಟ್ ಆಫ್ ಇಂಡಿಯಾ, ನ್ಯೂಡೆಲ್ಲಿ.

ಪ್ರಶಾಂತ್ ಎಚ್.ಡಿ., (೨೦೦೫), ಈಶಾನ್ಯ ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣ ಮತ್ತು ಸಮಾಜ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಪ್ರಶಾಂತ್ ಎಚ್.ಡಿ., (೨೦೦೬), ಹೆಣ್ಣುಮಕ್ಕಳ ಶಿಕ್ಷಣ : ಒಂದು ಸ್ಥೂಲನೋಟ, ಅಭಿವದ್ಧಿ ಅಧ್ಯಯನ ಪತ್ರಿಕೆ, ಸಂಪುಟ ೫, ಸಂಚಿಕೆ ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಪ್ರಶಾಂತ್ ಎಚ್.ಡಿ., (೨೦೦೬), ಶಾಲಾ ಶಿಕ್ಷಣ, ಅಭಿವೃದ್ಧಿ ಪಥ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಮತ್ತು ಕರ್ನಾಟಕ ಗ್ಯಾಜೆಟಿಯರ್ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು.

ನರಸಿಂಹಾಚಾರ್, (೨೦೦೬), ಉದಯೋನ್ಮುಖ ಭಾರತದಲ್ಲಿ ಶಿಕ್ಷಣ, ಭಾರತಿ ಪ್ರಕಾಶನ, ಸರಸ್ವತಿಪುರಂ, ಮೈಸೂರು.

ಶ್ರೀಮತಿ ಎಚ್.ಎಸ್., (೨೦೦೧), ಆಧುನಿಕ ಭಾರತದಲ್ಲಿ ಮಹಿಳೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಸೆನ್ಸಸ್ ಆಫ್ ಇಂಡಿಯಾ, (೨೦೦೧), ಪ್ರೈಮರಿ ಸೆನ್ಸಸ್ ಅಬ್‌ಸ್ಟ್ರಾಕ್ ಕರ್ನಾಟಕ, ಡೈರೆಕ್ಟರ್ ಜನರಲ್ ಪಾಪುಲೇಶನ್, ಡೈರಕ್ಟರೇಟ್ ಆಫ್ ಸೆನ್ಸಸ್ ಆಪರೇಶನ್, ಬೆಂಗಳೂರು.

• • •

# ಅಧ್ಯಾಯ ಆರು

# ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣದ ಪ್ರಸ್ತುತ ಸ್ಥಿತಿ

---

ಭಾರತದಲ್ಲಿ ಸ್ವತಂತ್ರ್ಯಾನಂತರದ ಶೈಕ್ಷಣಿಕ ಅಭಿವೃದ್ಧಿಯ ಗುರಿಗಳಲ್ಲಿ ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣವು ಅತ್ಯಂತ ಪ್ರಮುಖವಾಗಿದೆ. ನಮ್ಮ ಸಂವಿಧಾನ ಜಾರಿಗೆ ಬಂದ ಹತ್ತು ವರ್ಷ ದೊಳಗೆ ಹದಿನಾಲ್ಕು ವರ್ಷ ವಯಸ್ಸಿನವರೆಗಿನ ಎಲ್ಲಾ ಮಕ್ಕಳಿಗೆ ಉಚಿತ ಹಾಗೂ ಕಡ್ಡಾಯ ಪ್ರಾಥಮಿಕ ಶಿಕ್ಷಣ ನೀಡಬೇಕೆಂಬ ನಿರ್ದೇಶನವನ್ನು ಅನುಚ್ಛೇದ ೪೫ರಲ್ಲಿ ನೀಡಲಾಗಿದೆ. ೧೯೬೦ರ ವೇಳೆಗೆ ಸಾಧಿಸಬೇಕಾಗಿದ್ದ ಗುರಿ ಮುಟ್ಟಲಿಲ್ಲ. ಇದರಿಂದಾಗಿ ಉದ್ದೇಶಿತ ಕಾಲವನ್ನು ಮೊದಲು ೧೯೭೦ಕ್ಕೆ, ನಂತರ ೧೯೭೫ ಮತ್ತು ಇನ್ನು ಮುಂದೆ ೧೯೯೦ಕ್ಕೆ ವಿಸ್ತರಿಸಲಾಯಿತು. ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯು ಇದನ್ನು ೧೯೯೫ಕ್ಕೆಂದು ನಿಗದಿಪಡಿಸಿದ್ದು, ಪರಿಷ್ಕೃತ ನೀತಿಯಲ್ಲಿ ಹೇಳಲಾಗಿದೆ. ಹೀಗೆ ಹೇಳಿದ "ನಾವು ೨೧ನೇ ಶತಮಾನಕ್ಕೆ ಕಾಲಿಡುವ ಮೊದಲು ೧೪ ವರ್ಷ ದವರೆಗಿನ ಎಲ್ಲ ಮಕ್ಕಳಿಗೂ ಉಚಿತ ಹಾಗೂ ಕಡ್ಡಾಯ ಮಾತ್ರವಲ್ಲದೇ ಉತ್ತಮ ಗುಣಮಟ್ಟದ ಶಿಕ್ಷಣ ನೀಡುವುದು ಖಚಿತವಾಗಬೇಕಾಗಿದೆ. ಈ ಗುರಿ ಸಾಧನೆಗಾಗಿ ಒಂದು ರಾಷ್ಟ್ರೀಯ ಮಿಷನ್ ಪ್ರಾರಂಭಿಸಲಾಗಿದೆ." ೨೦೦೦ದ ವಿಶ್ವ ಶಿಕ್ಷಣ ಸಮಾವೇಶವು ನಿರ್ಧರಿಸಿರುವಂತೆ ಭಾರತವು ಈ ಗುರಿಯನ್ನು ೨೦೧೦ರ ವೇಳೆಗೆ ಸಾಧಿಸಬೇಕಾಗಿದೆ. ಪ್ರಸ್ತುತದಲ್ಲಿ ೨೦೦೭ನೇ ಇಸವಿ ಬಂದರೂ ಸಹ ಇದು ತನ್ನ ಗುರಿ ಮುಟ್ಟಿಲ್ಲ. ಸಾಕ್ಷರತೆಯ ಪ್ರಮಾಣವನ್ನು ಸೂಕ್ಷ್ಮವಾಗಿ ನೋಡುವುದಾದರೆ ಪ್ರದೇಶ, ವರ್ಗ, ಜಾತಿ ಮತ್ತು ಲಿಂಗಾಧಾರಿತ ಪರಿಮಾಣದಲ್ಲಿ ವ್ಯತ್ಯಾಸ ಕಂಡುಬರುತ್ತದೆ. ಭಾರತದ ದಕ್ಷಿಣ-ಪಶ್ಚಿಮ ಭಾಗದಲ್ಲಿ ಸಾಕ್ಷರತೆಯು ಉತ್ತರ-ಪೂರ್ವ ಭಾಗಕ್ಕಿಂತ ಬಹಳ ಹೆಚ್ಚಿನ ಪ್ರಮಾಣದ ಸಾಧನೆಯನ್ನು ಮಾಡಿರುವುದು ನೋಡಬಹುದು.

ನಮ್ಮ ಸಂವಿಧಾನವು ಸಮಾನತೆಯನ್ನು ನೀಡಿ ಲಿಂಗಭೇದವನ್ನು ನಿಷೇಧಿಸಿತ್ತಾದರೂ ವಾಸ್ತವದಲ್ಲಿ ಮಹಿಳಾ ಶಿಕ್ಷಣದಲ್ಲಿ ನಾವೆಣಿಸಿದಷ್ಟು ಪ್ರಗತಿ ಕಂಡಿಲ್ಲ. ನಮ್ಮ ದೇಶದ ಒಟ್ಟು ಜನಸಂಖ್ಯೆಯಲ್ಲಿ ಮಹಿಳೆಯರು ಸರಿ ಸುಮಾರು ಅರ್ಧದಷ್ಟು ಇದ್ದಾರೆ. ಮಹಿಳೆ ಮತ್ತು ಪುರುಷರ ಶಿಕ್ಷಣದ ನಡುವೆ ಸಾಕಷ್ಟು ಅಂತರವಿದೆ. ಮಹಿಳಾ ಸಾಕ್ಷರತೆಯ ಪ್ರಮಾಣ ೧೯೫೧ರಲ್ಲಿ ಶೇಕಡ ೮.೮೬ರಷ್ಟಿದ್ದರೆ, ಅದು ೨೦೦೧ರಲ್ಲಿ ಶೇಕಡ ೫೪.೧೬ರಷ್ಟಿದ್ದು ಕಂಡುಬರುತ್ತದೆ.

ಆದರೆ ಪುರುಷರ ಸಾಕ್ಷರತೆಯ ಪ್ರಮಾಣವು ೧೯೫೧ರಲ್ಲಿ ೨೭.೧೬ರಷ್ಟಿದ್ದರೂ ಅದು ೨೦೦೧ರಲ್ಲಿ ಶೇಕಡಾ ೭೫.೮೫ರ ಪ್ರಮಾಣದಲ್ಲಿ ಏರಿರುವುದು ಕಂಡುಬರುತ್ತದೆ. ಇದನ್ನು ನೋಡಿದರೆ ಈ ಸಮಾಜದಲ್ಲಿ ಶಿಕ್ಷಣದ ಅವಕಾಶದ ಬಳಕೆಯಲ್ಲಿ ಲಿಂಗ ತಾರತಮ್ಯವು ಎಷ್ಟರಮಟ್ಟಿಗೆ ಇದೆ ಎಂಬುದು ಮನದಟ್ಟಾಗುತ್ತದೆ.

**ಕೋಷ್ಟಕ-೬.೧**

## ಭಾರತದಲ್ಲಿ ಮಹಿಳೆಯರ ಮತ್ತು ಪುರುಷರ ಶೇಕಡವಾರು ಸಾಕ್ಷರತೆ ಪ್ರಮಾಣ

| ವರ್ಷ | ಪುರುಷರು | ಮಹಿಳೆಯರು | ದೇಶದ ಒಟ್ಟು ಸಾಕ್ಷರತಾ ಪ್ರಮಾಣ |
|---|---|---|---|
| ೧೯೫೧ | ೨೭.೧೬ | ೮.೮೬ | ೧೮.೩೩ |
| ೧೯೬೧ | ೪೦.೪೦ | ೧೫.೩೪ | ೨೮.೩೦ |
| ೧೯೭೧ | ೪೫.೯೫ | ೨೧.೯೭ | ೩೪.೪೫ |
| ೧೯೮೧ | ೫೩.೪೫ | ೨೮.೪೬ | ೪.೪೭ |
| ೧೯೯೧ | ೬೪.೧೩ | ೩೯.೨೯ | ೫೨.೨೧ |
| ೨೦೦೧ | ೭೫.೮೫ | ೫೪.೧೬ | ೬೫.೩೮ |
| ೨೦೦೧ ಗ್ರಾಮೀಣ | ೭೧.೪೦ | ೪೬.೭೦ | ೫೯.೪೦ |
| ೨೦೦೧ ನಗರ | ೮೬.೭೦ | ೭೩.೨೦ | ೮೦.೩೦ |

ಮೂಲ : ೨೦೦೧ರ ಜನಗಣತಿ ವರದಿ.

ಮಹಿಳೆ ಮತ್ತು ಪುರುಷರ ಸಾಕ್ಷರತೆಯ ಪ್ರಮಾಣದಲ್ಲಿ ವ್ಯತ್ಯಾಸವಿರುವುದಷ್ಟೇ ಅಲ್ಲ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲೂ ಸಾಕ್ಷರತೆಯ ಪ್ರಮಾಣದಲ್ಲಿ ಅಗಾಧವಾದ ವ್ಯತ್ಯಾಸಗಳಿರುವುದು ಕಂಡುಬರುತ್ತದೆ. ನಗರ ಪ್ರದೇಶದಲ್ಲಿ ಮಹಿಳಾ ಸಾಕ್ಷರತೆಯ ಪ್ರಮಾಣ ಶೇಕಡ ೭೩.೨೦ರಷ್ಟಿದ್ದರೆ ಅದು ಗ್ರಾಮೀಣ ಪ್ರದೇಶದಲ್ಲಿ ಈ ಪ್ರಮಾಣವು ಶೇಕಡ ೪೬.೭೦ರಷ್ಟು ಮಾತ್ರವಿದೆ.

೨೦೦೧ರ ಜನಗಣತಿಯ ಪ್ರಕಾರ ಭಾರತದ ಒಟ್ಟು ಸಾಕ್ಷರತೆ ಪ್ರಮಾಣ ಶೇಕಡ ೬೫.೩೮ರಷ್ಟು ಇದೆ. ಇದರಲ್ಲಿ ಪುರುಷರ ಸಾಕ್ಷರತೆ ಪ್ರಮಾಣ ಶೇಕಡ ೭೫.೮೫ರಷ್ಟಿದ್ದರೆ, ಮಹಿಳೆಯರ ಸಾಕ್ಷರತಾ ಪ್ರಮಾಣ ಶೇಕಡ ೫೪.೧೬ರಷ್ಟು ಇದೆ. ಸ್ವಾತಂತ್ರ್ಯ ನಂತರ ಪ್ರತಿ ವರ್ಷವು

ಸ್ವಲ್ಪಮಟ್ಟಿಗೆ ಮಹಿಳಾ ಸಾಕ್ಷರತೆಯಲ್ಲಿ ಏರಿಕೆಯಾಗುತ್ತಾ ಬಂದಿದೆ. ಆದರೂ ಸಹ ಎಲ್ಲರಿಗೂ ಸಾರ್ವತ್ರಿಕವಾಗಿ ಶಿಕ್ಷಣ ತಲುಪಿಸುವಲ್ಲಿ ಸರ್ಕಾರ ಮಂದಗತಿಯತ್ತ ಸಾಗುತ್ತಿದೆ ಎಂದು ಹೇಳಬಹುದು. ಕರ್ನಾಟಕ ರಾಜ್ಯವು ಬೇರೆಲ್ಲಾ ರಾಜ್ಯಗಳಿಗೆ ಹೋಲಿಸಿದಾಗ ಶಿಕ್ಷಣ ಮಟ್ಟದಲ್ಲಿ ಅತ್ತ ಹಿಂದುಳಿಯದೆ ಇತ್ತ ಮುಂದೆಯೂ ಸಾಗದೇ ಮಧ್ಯಮಗತಿಯಲ್ಲಿ ಸಾಗುತ್ತಿದೆ ಎನ್ನಬಹುದು. ದೇಶದಲ್ಲಿ ಕೇರಳ ಮತ್ತು ಹಿಮಾಚಲ ಪ್ರದೇಶ ರಾಜ್ಯಗಳು ಅತ್ಯಂತ ಹೆಚ್ಚು ಸಾಕ್ಷರತೆಯನ್ನು ಹೊಂದಿದ ರಾಜ್ಯವಾಗಿದೆ. ಹಾಗೆಯೇ ಕೇರಳ ರಾಜ್ಯದಲ್ಲಿ ಅತಿಹೆಚ್ಚು ಮಹಿಳಾ ಸಾಕ್ಷರತೆಯಿದ್ದು ಬಿಹಾರ ರಾಜ್ಯದಲ್ಲಿ ಅತ್ಯಂತ ಕಡಿಮೆ (೩೩.೫೭) ಮಟ್ಟದ ಮಹಿಳಾ ಸಾಕ್ಷರತೆಯನ್ನು ನಾವು ಕಾಣಬಹುದು.

**ಕೋಷ್ಟಕ-೬.೨**

## ಕರ್ನಾಟಕದಲ್ಲಿ ಮಹಿಳೆ ಮತ್ತು ಪುರುಷರ ಸಾಕ್ಷರತಾ ಪ್ರಮಾಣದಲ್ಲಿನ ವ್ಯತ್ಯಾಸಗಳು

| ವರ್ಷ | ಒಟ್ಟು | ಸಾಕ್ಷರತಾ ಪ್ರಮಾಣ | | ವ್ಯತ್ಯಾಸಗಳು |
|---|---|---|---|---|
| | | ಪುರುಷ | ಮಹಿಳೆ | |
| ೧೯೬೧ | ೨೯.೮೦ | ೪೨.೨೯ | ೧೬.೭೦ | ೨೫.೫೯ |
| ೧೯೭೧ | ೩೬.೮೩ | ೪೮.೫೧ | ೨೪.೫೫ | ೨೩.೯೬ |
| ೧೯೮೧ | ೪೬.೨೧ | ೫೮.೭೩ | ೩೩.೦೭ | ೨೫.೫೬ |
| ೧೯೯೧ | ೫೬.೦೪ | ೬೭.೨೬ | ೪೪.೩೪ | ೨೨.೯೨ |
| ೨೦೦೧ | ೬೭.೦೪ | ೭೬.೨೯ | ೫೭.೪೫ | ೧೮.೮೪ |

ಮೂಲ : ಜನಗಣತಿ ವರದಿಗಳು.

ಸಾಕ್ಷರತಾ ಪ್ರಮಾಣವು ೧೯೬೧ರಲ್ಲಿ ಒಟ್ಟು ಶೇಕಡ ೨೯.೮೦ರಷ್ಟು ಇದ್ದು ಇದರಲ್ಲಿ ಮಹಿಳೆಯ ಸಾಕ್ಷರತಾ ಪ್ರಮಾಣ ಶೇಕಡ ೧೬.೭೦ರಷ್ಟಿದೆ. ರಾಜ್ಯದಲ್ಲಿ ೧೯೬೧ ರಿಂದ ೨೦೦೧ರ ವರೆಗೆ ಪುರುಷರ ಮತ್ತು ಮಹಿಳೆಯರ ಸಾಕ್ಷರತಾ ಪ್ರಮಾಣದಲ್ಲಿ ಶೇಕಡ ೧೮.೮೪ರಷ್ಟು ವ್ಯತ್ಯಾಸವಿರುವುದನ್ನು ಕಾಣಬಹುದು. ಮಹಿಳೆಯರ ಸಾಕ್ಷರತೆಯೂ ವರ್ಷದಿಂದ ವರ್ಷಕ್ಕೆ ಏರಿಕೆಯಾಗಿರುವುದು ತಿಳಿಯುತ್ತದೆ.

ಕೋಷ್ಟಕ-೬.೩

## ವಿಭಾಗ ಮತ್ತು ಪ್ರದೇಶವಾರು ಸಾಕ್ಷರತೆಯ ಪ್ರಮಾಣ (ಕರ್ನಾಟಕದಲ್ಲಿ)

| ಕ್ರ.ಸಂ. | ವಿಭಾಗ/ಪ್ರದೇಶ | ಸಾಕ್ಷರತೆ | | |
|---|---|---|---|---|
| | | ಒಟ್ಟು | ಪುರುಷರು | ಮಹಿಳೆಯರು |
| ೧. | ಬೆಂಗಳೂರು ವಿಭಾಗ | ೭೨.೯೧ | ೮೦.೫೬ | ೬೪.೭೮ |
| ೨. | ಬೆಳಗಾವಿ ವಿಭಾಗ | ೬೫.೪೦ | ೭೬.೩೦ | ೫೪.೦೬ |
| ೩. | ಗುಲ್ಬರ್ಗಾ ವಿಭಾಗ | ೫೪.೪೦ | ೬೬.೫೧ | ೪೧.೯೨ |
| ೪. | ಮೈಸೂರು ವಿಭಾಗ | ೬೯.೩೦ | ೭೭.೦೨ | ೬೧.೬೪ |
| ೫. | ಉತ್ತರ ಕರ್ನಾಟಕ | ೬೦.೮೨ | ೭೨.೨೪ | ೪೮.೯೯ |
| ೬. | ದಕ್ಷಿಣ ಕರ್ನಾಟಕ | ೭೦.೫೦ | ೬೯.೨೦ | ೬೩.೫೨ |
| ೭. | ಕರ್ನಾಟಕ | ೬೭.೦೪ | ೭೬.೨೬ | ೫೭.೪೫ |

ಮೂಲ : ಜನಗಣತಿ ವರದಿ ೨೦೦೧, ಅಭಿವೃದ್ಧಿ ಅಧ್ಯಯನ, ೨೦೦೩

ಸಾಕ್ಷರತಾ ಪ್ರಮಾಣವನ್ನು ನಾವು ವಿಭಾಗವಾರು ನೋಡಿದಾಗ ಅನೇಕ ಭಿನ್ನತೆಗಳು ಕಾಣುತ್ತವೆ. ಬೆಂಗಳೂರು ವಿಭಾಗದ ಒಟ್ಟು ಸಾಕ್ಷರತಾ ಪ್ರಮಾಣ ಶೇಕಡ ೭೨.೯೧ರಷ್ಟಿದೆ. ಪುರುಷರ ಸಾಕ್ಷರತೆ ಶೇಕಡ ೮೦.೫೬ ಮತ್ತು ಮಹಿಳೆಯರ ಸಾಕ್ಷರತೆ ಶೇಕಡ ೬೪.೭೮ರಷ್ಟಿದೆ. ಇದು ಇತರ ಮೂರು ವಿಭಾಗಗಳಿಗಿಂತ ಹೆಚ್ಚಾಗಿದೆ. ಬೆಳಗಾವಿ ಕಂದಾಯ ವಿಭಾಗದ ಒಟ್ಟು ಸಾಕ್ಷರತೆ ಶೇಕಡ ೬೫.೪೦ರಷ್ಟು, ಈ ವಿಭಾಗದಲ್ಲಿ ಪುರುಷರ ಸಾಕ್ಷರತೆ ಶೇಕಡ ೭೬.೩೦ರಷ್ಟು ಮತ್ತು ಮಹಿಳಾ ಸಾಕ್ಷರತೆ ಶೇಕಡ ೫೪.೦೬ ರಷ್ಟಿದೆ. ಗುಲ್ಬರ್ಗಾ ವಿಭಾಗದ ಒಟ್ಟು ಸಾಕ್ಷರತೆ ಶೇಕಡ ೫೪.೪೦ರಷ್ಟಿದೆ. ಪುರುಷರ ಸಾಕ್ಷರತೆ ಶೇಕಡ ೬೬.೫೧ರಷ್ಟು ಮತ್ತು ಮಹಿಳಾ ಸಾಕ್ಷರತೆ ಪ್ರಮಾಣ ಶೇಕಡ ೪೧.೯೨ರಷ್ಟಿದೆ. ಇಲ್ಲಿ ರಾಜ್ಯದ ಒಟ್ಟು ಪುರುಷರ ಮತ್ತು ಮಹಿಳೆಯರ ಸಾಕ್ಷರತೆಗಿಂತ ಗುಲ್ಬರ್ಗಾ ವಿಭಾಗ ಪುರುಷರ ಮತ್ತು ಮಹಿಳೆಯರ ಸಾಕ್ಷರತೆಯಲ್ಲಿ ಕ್ರಮವಾಗಿ ಶೇಕಡ ೯.೭೫ ಅಂಶಗಳಷ್ಟು ಮತ್ತು ೧೫.೫೩ ಅಂಶಗಳಷ್ಟು ಅಂತರವಿದೆ. ಮೈಸೂರು ವಿಭಾಗವು ಸಾಕ್ಷರತೆಯ ದೃಷ್ಟಿಯಿಂದ ಎರಡನೆಯ ಸ್ಥಾನ ಪಡೆದಿದೆ. ಈ ವಿಭಾಗದ ಒಟ್ಟು ಸಾಕ್ಷರತೆ ೬೯.೩೦ ರಷ್ಟಿದ್ದರೆ, ಪುರುಷರ ಸಾಕ್ಷರತಾ ಪ್ರಮಾಣ ಶೇಕಡ ೭೭.೦೨ರಷ್ಟು ಮತ್ತು ಮಹಿಳೆಯರ ಸಾಕ್ಷರತಾ ಪ್ರಮಾಣ ಶೇಕಡ ೬೧.೬೪ರಷ್ಟಿದೆ. ಈ ವಿಭಾಗದ ಸಾಕ್ಷರತೆಯೂ ಎಲ್ಲಾ ದೃಷ್ಟಿಯಿಂದ ರಾಜ್ಯದ

ಒಟ್ಟು ಸರಾಸರಿಗಿಂತ ಸ್ವಲ್ಪ ಹೆಚ್ಚಿನ ಪ್ರಮಾಣದ್ದಾಗಿದೆ. ಉತ್ತರ ಕರ್ನಾಟಕ ಪ್ರದೇಶದ ಒಟ್ಟು ಸಾಕ್ಷರತೆಯೂ ೬೦.೮೨ರಷ್ಟಿದೆ. ಉತ್ತರ ಕರ್ನಾಟಕ ಪ್ರದೇಶ ಮಹಿಳೆಯರ ಸಾಕ್ಷರತೆ ಶೇಕಡ ೪೮.೯೯ರಷ್ಟು ಮತ್ತು ರಾಜ್ಯದ ಮಹಿಳೆಯ ಸಾಕ್ಷರತೆ ಶೇಕಡ ೫೭.೪೫ರಷ್ಟು ಇಲ್ಲಿ ಈ ಎರಡರ ನಡುವಿನ ಅಂತರ ಶೇಕಡ ೮.೪೬ ಅಂಶಗಳಷ್ಟು. ದಕ್ಷಿಣ ಕರ್ನಾಟಕ ಪ್ರದೇಶದ ಮಹಿಳಾ ಸಾಕ್ಷರತೆಯು ಉತ್ತರ ಕರ್ನಾಟಕ ಪ್ರದೇಶದ ಮಹಿಳೆಯರ ಸಾಕ್ಷರತೆಗಿಂತ ಶೇಕಡ ೧೪.೫೩ ಅಂಶ ಗಳಷ್ಟು ಮತ್ತು ಕರ್ನಾಟಕ ಒಟ್ಟು ಮಹಿಳೆಯರ ಸಾಕ್ಷರತೆಗಿಂತ ಶೇಕಡ ೬.೦೭ ಅಂಶಗಳಷ್ಟು ಹೆಚ್ಚಾಗಿದೆ. ಒಟ್ಟಾರೆಯಾಗಿ ಮಹಿಳಾ ಸಾಕ್ಷರತೆಯಲ್ಲಿ ಗುಲ್ಬರ್ಗ ವಿಭಾಗವು ಹಿಂದುಳಿದಿದೆ ಎಂದು ಹೇಳಬಹುದು.

ಮಾನವ ಅಭಿವೃದ್ಧಿ ವಿಚಾರ ಪ್ರಣಾಳಿಕೆಯಲ್ಲಿ ಸಾಕ್ಷರತೆಯು ೨ನೇ ಸ್ಥಾನವನ್ನು ಪಡೆದಿದೆ. ಮಾನವ ಅಭಿವೃದ್ಧಿ ಅತ್ಯಾವಶ್ಯಕವಾಗಿರುವ ಧಾರಣಶಕ್ತಿಯನ್ನು ಒದಗಿಸುವ ಗುಣ ಸಾಕ್ಷರತೆಗೆ ಇದೆ. ಸಾಕ್ಷರತೆಯೇ ಅಭಿವೃದ್ಧಿ. ಸಾಕ್ಷರತೆಯ ವೈಫಲ್ಯವು ಅಭಿವೃದ್ಧಿಯ ಹಿನ್ನೆಡೆಗೆ ಕಾರಣವಾಗುತ್ತದೆ.

ಸಾಕ್ಷರತೆಯು ಸಮಾಜದಲ್ಲಿಯ ಪರಿಸ್ಥಿತಿಯನ್ನು ಪ್ರಚುರಪಡಿಸುವ ಒಂದು ಸೂಚಿಯಾಗಿದೆ. ಸಾಕ್ಷರತೆಯಲ್ಲಿಯ ಲಿಂಗ ಅಸಮಾನತೆಯು, ಸಮಾಜದಲ್ಲಿ ಮಹಿಳೆಯನ್ನು ನಿರ್ಲಕ್ಷಿಸಲಾಗುತ್ತಿದೆ ಎಂಬುವುದರ ಪ್ರತಿಬಿಂಬವಾಗಿದೆ. "ಮಹಿಳೆಯರ ಸಾಕ್ಷರತೆ ಪುರುಷರ ಸಾಕ್ಷರತೆಗಿಂತ ಕಡಿಮೆ ಇದ್ದರೆ ಅದು ಆಕೆಯ ಜೈವಿಕ ಸ್ವರೂಪದ ಫಲವಲ್ಲ. ಅದು ಸಮಾಜವು ಕಟ್ಟಿರುವ ಒಂದು ನಿರ್ಬಂಧ. ಸಾಮಾನ್ಯ ಜನಸಂಖ್ಯೆಯ ಸಾಕ್ಷರತೆ ಪ್ರಮಾಣವು ಪರಿಶಿಷ್ಟ ಜನಸಂಖ್ಯೆಯ ಸಾಕ್ಷರತೆ ಪ್ರಮಾಣಕ್ಕಿಂತ ಅಧಿಕವಾಗಿದ್ದರೆ ಅದು ಸಾಮಾಜಿಕ ವ್ಯವಸ್ಥೆಯ ಒಂದು ಪರಿಣಾಮವಾಗಿದೆ. ಸಾಕ್ಷರತೆಗೆ ಸಂಬಂಧಿಸಿದ ಸಿದ್ಧ ಸಾಧನೆಗಳನ್ನು, ವೈಫಲ್ಯಗಳನ್ನು ವ್ಯಕ್ತಿಗತ ನೆಲೆಯಲ್ಲಿ ಅಥವಾ ಜೈವಿಕ-ನೈಸರ್ಗಿಕ ನೆಲೆಯಲ್ಲಿ ಪರಿಭಾವಿಸುವುದು ಸಾಧ್ಯವಿಲ್ಲ. ಇವೆಲ್ಲವೂ ಸಾಮಾಜಿಕ ವ್ಯವಸ್ಥೆಯೊಂದು ರೂಪಿಸಿದ ಸಂಗತಿಯಾಗಿದೆ" (ಚಂದ್ರಶೇಖರ್, ೧೯೯೯).

### ೬.೧. ಅಧ್ಯಯನ ಕ್ಷೇತ್ರದಲ್ಲಿ ಸಾಕ್ಷರತೆ

ಕರ್ನಾಟಕದ ಅಕ್ಷರಸ್ಥರ ಪ್ರಮಾಣ ಪುರುಷರು ೭೬.೨೯, ಮಹಿಳೆಯರದ್ದು ೫೭.೪೫, ಒಟ್ಟು ೬೭.೦೪ರಷ್ಟು ಇದೆ. ತುಮಕೂರು ಜಿಲ್ಲೆಯದ್ದು ಪುರುಷರ ಅಕ್ಷರಸ್ಥರ ಪ್ರಮಾಣ ೭೬.೮೮ ಮತ್ತು ಮಹಿಳೆಯರದ್ದು ೫೭.೧೮, ಒಟ್ಟು ೬೭.೧೯. ಹಾಗೆಯೇ ಬಳ್ಳಾರಿ ಜಿಲ್ಲೆಯ ಅಕ್ಷರಸ್ಥರ ಪ್ರಮಾಣ ಪುರುಷರು ೬೯.೫೯ ಮಹಿಳೆಯರದ್ದು ೪೬.೧೬, ಒಟ್ಟು ೫೮.೦೪ರಷ್ಟು ಪ್ರಮಾಣ ಇದೆ (ಜನಗಣತಿ ೨೦೦೧).

## ಕೋಷ್ಟಕ-೬.೪

## ಹೊಸಪೇಟೆ ತಾಲ್ಲೂಕು ಸಾಕ್ಷರತಾ ಪ್ರಮಾಣ

| | ಒಟ್ಟು ಸಾಕ್ಷರತೆ | ಪುರುಷರ ಸಾಕ್ಷರತೆ | ಮಹಿಳೆಯರ ಸಾಕ್ಷರತೆ |
|---|---|---|---|
| ಒಟ್ಟು | ೫೭.೦೪ | ೬೯.೦೨ | ೪೫.೦೩ |
| ಗ್ರಾಮೀಣ | ೫೦.೦೩ | ೬೩.೦೫ | ೩೬.೦೮ |
| ನಗರ | ೭೦.೦೨ | ೭೯.೦೪ | ೬೦.೦೭ |

ಮೂಲ : ಅಭಿವೃದ್ಧಿ ಅಧ್ಯಯನ ಪತ್ರಿಕೆ, ೨೦೦೩

## ಕೋಷ್ಟಕ-೬.೫

## ಕಮಲಾಪುರ ಪಟ್ಟಣ ಪಂಚಾಯಿತಿ ಪ್ರದೇಶದ ವಾರ್ಡ್‌ಗಳ ಸಾಕ್ಷರತಾ ಪ್ರಮಾಣ

| ಪ್ರದೇಶ/ ವಾರ್ಡ್‌ಗಳು | ಒಟ್ಟು ಸಾಕ್ಷರತೆ | ಪುರುಷರ ಸಾಕ್ಷರತೆ | ಮಹಿಳೆಯರ ಸಾಕ್ಷರತೆ |
|---|---|---|---|
| ಕಮಲಾಪುರ | ೫೬.೯ | ೬೬.೯ | ೪೬.೯ |
| ವಾರ್ಡ್ ೧ | ೭೨.೬ | ೮೩.೬ | ೬೧.೯ |
| ವಾರ್ಡ್ ೨ | ೭೫.೬ | ೮೪.೨ | ೬೬.೭ |
| ವಾರ್ಡ್ ೩ | ೭೩.೯ | ೮೦.೨ | ೬೭.೨ |
| ವಾರ್ಡ್ ೪ | ೫೯.೦ | ೭೦.೭ | ೪೮.೪ |
| ವಾರ್ಡ್ ೫ | ೪೫.೪ | ೫೨.೭ | ೩೮.೬ |
| ವಾರ್ಡ್ ೬ | ೪೪.೪ | ೫೩.೬ | ೩೫.೫ |
| ವಾರ್ಡ್ ೭ | ೭೩.೨ | ೮೬.೯ | ೬೦.೧ |
| ವಾರ್ಡ್ ೮ | ೬೨.೯ | ೭೪.೪ | ೫೧.೬ |
| ವಾರ್ಡ್ ೯ | ೫೨.೭ | ೬೦.೭ | ೪೪.೪ |
| ವಾರ್ಡ್ ೧೦ | ೭೭.೯ | ೮೮.೬ | ೬೬.೫ |
| ವಾರ್ಡ್ ೧೧ | ೭೨.೯ | ೮೩.೨ | ೬೧.೫ |
| ವಾರ್ಡ್ ೧೨ | ೫೫.೩ | ೬೬.೪ | ೪೩.೬ |

| | | | |
|---|---|---|---|
| ವಾರ್ಡ್ ೧೩ | ೬೬.೦ | ೭೭.೧ | ೫೫.೫ |
| ವಾರ್ಡ್ ೧೪ | ೫೭.೪ | ೬೮.೮ | ೪೬.೨ |
| ವಾರ್ಡ್ ೧೫ | ೪೫.೧ | ೫೭.೭ | ೩೨.೪ |
| ವಾರ್ಡ್ ೧೬ | ೪೩.೩ | ೫೩.೮ | ೩೯.೦ |
| ವಾರ್ಡ್ ೧೭ | ೪೫.೦ | ೫೩.೭ | ೩೬.೬ |
| ವಾರ್ಡ್ ೧೮ | ೪೫.೮ | ೫೮.೩ | ೩೨.೫ |
| ವಾರ್ಡ್ ೧೯ | ೧೫.೩ | ೨೪.೦ | ೬.೩ |

ಮೂಲ : ಅಭಿವೃದ್ಧಿ ಅಧ್ಯಯನ ಪತ್ರಿಕೆ, ೨೦೦೬

ಈ ಕೋಷ್ಟಕದಲ್ಲಿ ಕಮಲಾಪುರದ ಸಾಕ್ಷರತೆ ಪ್ರಮಾಣವನ್ನು ತೋರಿಸಲಾಗಿದೆ. ಹಾಗೆಯೇ ಕಮಲಾಪುರದಲ್ಲಿರುವ ಹತ್ತೊಂಬತ್ತು ವಾರ್ಡ್‌ಗಳ ಸಾಕ್ಷರತೆ ಪ್ರಮಾಣವನ್ನು ತಿಳಿಸುವುದರ ಜೊತೆಗೆ ಮಹಿಳೆ ಮತ್ತು ಪುರುಷ ಸಾಕ್ಷರತೆ ಪ್ರಮಾಣವನ್ನು ತಿಳಿಸಲಾಗಿದೆ.

**ಕೋಷ್ಟಕ-೬.೬**

## ಕೊರಟಗೆರೆ ತಾಲ್ಲೂಕು ಸಾಕ್ಷರತೆಯ ಪ್ರಮಾಣ ೨೦೦೧

| | ಒಟ್ಟು ಸಾಕ್ಷರತೆ | ಪುರುಷರ ಸಾಕ್ಷರತೆ | ಮಹಿಳೆಯರ ಸಾಕ್ಷರತೆ |
|---|---|---|---|
| ಒಟ್ಟು | ೬೨.೭ | ೭೩.೩ | ೫೧.೮ |
| ಗ್ರಾಮೀಣ | ೬೧.೨ | ೭೨.೧ | ೪೯.೯ |
| ನಗರ | ೭೯.೪ | ೮೬.೫ | ೭೨.೧ |

ಮೂಲ : ಡಿಸ್ಟ್ರಿಕ್ಟ್ ಪಾಪ್ಯುಲೇಶನ್ ಬುಕ್‌ಲೆಟ್, ೨೦೦೧.

ಈ ಕೋಷ್ಟಕದಿಂದ ತಿಳಿಯುವುದೇನೆಂದರೆ ಕೊರಟಗೆರೆ ತಾಲ್ಲೂಕಿನ ಒಟ್ಟು ಸಾಕ್ಷರತೆ ಶೇಕಡ ೬೨.೭ರಷ್ಟಿದ್ದರೆ ಇದರಲ್ಲಿ ಪುರುಷರ ಸಾಕ್ಷರತೆ ಶೇಕಡ ೭೩.೩, ಮಹಿಳೆಯರ ಸಾಕ್ಷರತೆ ಶೇಕಡ ೫೧.೮ರಷ್ಟು. ಇವೆರಡರ ನಡುವಿನ ಅಂತರ ೨೧.೫ರಷ್ಟು. ಗ್ರಾಮೀಣ ಪ್ರದೇಶದ ಒಟ್ಟು ಸಾಕ್ಷರತೆ ಶೇಕಡ ೬೧.೨ರಷ್ಟು, ಪುರುಷರ ಪ್ರಮಾಣ ಶೇಕಡ ೭೨.೧ ಮತ್ತು ಮಹಿಳೆಯರ ಶೇಕಡ ಪ್ರಮಾಣ ೪೯.೯. ಪುರುಷ ಮತ್ತು ಮಹಿಳೆಯರ ನಡುವಿನ ಅಂತರ ಶೇಕಡ ೨೨.೨ರಷ್ಟು ಅಂತರ ಇದೆ. ನಗರ ಪ್ರದೇಶದ ಸಾಕ್ಷರತೆ ಒಟ್ಟು ೭೯.೪, ಪುರುಷರ ಪ್ರಮಾಣ ಶೇಕಡ ೮೬.೫, ಮಹಿಳೆಯರ ಪ್ರಮಾಣ ಶೇಕಡ ೭೨.೧ರಷ್ಟು. ಇವೆರಡರ ನಡುವೆ ಅಂತರ ಶೇಕಡ ೧೪.೮ರಷ್ಟು ಇದೆ.

ಕೋಷ್ಟಕ-೬.೭

## ಕೊರಟಗೆರೆ ಪಟ್ಟಣ ಪಂಚಾಯಿತಿ ಪ್ರದೇಶದ ವಾರ್ಡ್‌ಗಳ ಸಾಕ್ಷರತಾ ಪ್ರಮಾಣ

| ಪ್ರದೇಶ/ ವಾರ್ಡ್‌ಗಳು | ಒಟ್ಟು ಸಾಕ್ಷರತೆ | ಪುರುಷರ ಸಾಕ್ಷರತೆ | ಮಹಿಳೆಯರ ಸಾಕ್ಷರತೆ |
|---|---|---|---|
| ಕೊರಟಗೆರೆ | ೭೯.೪ | ೮೬.೫ | ೭೨.೧ |
| ವಾರ್ಡ್ ನಂ.೧ | ೮೫.೦ | ೯೦.೭ | ೭೯.೩ |
| ವಾರ್ಡ್ ನಂ.೨ | ೭೮.೫ | ೮೭.೨ | ೬೯.೯ |
| ವಾರ್ಡ್ ನಂ.೩ | ೭೨.೨ | ೭೬.೯ | ೬೭.೩ |
| ವಾರ್ಡ್ ನಂ.೪ | ೮೧.೩ | ೮೮.೦ | ೭೪.೮ |
| ವಾರ್ಡ್ ನಂ.೫ | ೬೯.೬ | ೭೯.೯ | ೫೯.೪ |
| ವಾರ್ಡ್ ನಂ.೬ | ೭೪.೫ | ೮೩.೬ | ೬೫.೦ |
| ವಾರ್ಡ್ ನಂ.೭ | ೮೫.೮ | ೯೧.೦ | ೮೦.೩ |
| ವಾರ್ಡ್ ನಂ.೮ | ೮೪.೯ | ೯೩.೮ | ೭೫.೯ |
| ವಾರ್ಡ್ ನಂ.೯ | ೮೩.೦ | ೯೦.೭ | ೭೫.೦ |
| ವಾರ್ಡ್ ನಂ.೧೦ | ೮೭.೧ | ೯೩.೫ | ೮೦.೪ |
| ವಾರ್ಡ್ ನಂ.೧೧ | ೯೧.೦ | ೯೫.೨ | ೮೭.೦ |
| ವಾರ್ಡ್ ನಂ.೧೨ | ೭೨.೯ | ೮೧.೮ | ೬೧.೯ |

ಮೂಲ : ಡಿಸ್ಟ್ರಿಕ್ಟ್ ಪಾಪ್ಯುಲೇಶನ್ ಬುಕ್‌ಲೆಟ್, ೨೦೦೧.

ಈ ಕೋಷ್ಟಕದಲ್ಲಿ ಕೊರಟಗೆರೆ ಸಾಕ್ಷರತಾ ಪ್ರಮಾಣವನ್ನು ತಿಳಿಸಲಾಗಿದೆ. ಒಟ್ಟು ಸಾಕ್ಷರತೆ ಶೇಕಡ ೭೯.೪. ಪುರುಷರ ಸಾಕ್ಷರತಾ ಪ್ರಮಾಣ ಶೇಕಡ ೮೬.೫ ಮತ್ತು ಮಹಿಳೆಯರದ್ದು ಶೇಕಡ ೭೨.೧ರಷ್ಟು. ಈ ಪಟ್ಟಣದಲ್ಲಿ ೧೨ ವಾರ್ಡ್‌ಗಳಿದ್ದು ಪ್ರತಿಯೊಂದು ವಾರ್ಡ್‌ನ ಸಾಕ್ಷರತೆಯನ್ನು ತೋರಿಸಲಾಗಿದೆ.

ಅಧ್ಯಯನಕ್ಕೊಳಪಡಿಸಿದ ಎರಡು ಪಟ್ಟಣ ಪಂಚಾಯಿತಿಗಳ ಸಾಕ್ಷರತೆಯನ್ನು ಮೇಲಿನ ಕೋಷ್ಟಕಗಳಲ್ಲಿ ನೀಡಲಾಗಿದೆ. ಈ ಎರಡು ಕೋಷ್ಟಕಗಳನ್ನು ಗಮನಿಸಿ ತುಲನೆ ಮಾಡಿದಾಗ ನಮಗೆ ಕೆಲವು ಅಂಶಗಳು ಸಿಗುತ್ತವೆ. ಕಮಲಾಪುರ ಪಟ್ಟಣ ಪಂಚಾಯಿತಿಯಲ್ಲಿರುವ ೧೯ ವಾರ್ಡ್‌ಗಳಲ್ಲಿ

ಒಂದನೇ ವಾರ್ಡ್, ಎರಡನೇ ವಾರ್ಡ್, ಮೂರನೇ ವಾರ್ಡ್ ಮತ್ತು ಏಳನೇ ವಾರ್ಡಗಳನ್ನು ಹೊರತುಪಡಿಸಿದರೆ ಇನ್ನುಳಿದ ಎಲ್ಲಾ ವಾರ್ಡ್‌ಗಳಲ್ಲಿ ಮಹಿಳಾ ಸಾಕ್ಷರತೆಯು ಶೇಕಡ ೫೦ಕ್ಕಿಂತ ಕಡಿಮೆಯಿರುವುದು ತಿಳಿದುಬರುತ್ತದೆ. ವಿಶೇಷವೆಂದರೆ ವಾರ್ಡ್ ಸಂಖ್ಯೆ ಹತ್ತೊಂಬತ್ತರಲ್ಲಿ ಮಹಿಳಾ ಸಾಕ್ಷರತೆಯು ಶೇಕಡ ೬.೩ ಇರುವುದು ಶೋಚನೆಯ ಸಂಗತಿ. ಕೊರಟಗೆರೆ ಪಟ್ಟಣ ಪಂಚಾಯಿತಿಯಲ್ಲಿರುವ ಹನ್ನೆರಡು ವಾರ್ಡ್‌ಗಳನ್ನು ಕಮಲಾಪುರ ವಾರ್ಡ್‌ಗಳಲ್ಲಿರುವ ಮಹಿಳಾ ಸಾಕ್ಷರತೆಯ ಪ್ರಮಾಣಕ್ಕೆ ತುಲನೆ ಮಾಡಿದಾಗ ವ್ಯತಿರಿಕ್ತವಾದ ಅಂಶಗಳು ಕಂಡುಬರುತ್ತವೆ. ಕೊರಟಗೆರೆ ವಾರ್ಡ್ ಸಂಖ್ಯೆ ಐದನ್ನು ಹೊರತುಪಡಿಸಿದರೆ ಉಳಿದ ಹನ್ನೊಂದು ವಾರ್ಡ್‌ಗಳಲ್ಲಿ ಮಹಿಳಾ ಸಾಕ್ಷರತೆಯು ಶೇಕಡ ೬೦ಕ್ಕಿಂತಲೂ ಹೆಚ್ಚು ಇರುವುದು ತಿಳಿಯುತ್ತದೆ. ಹಾಗೆಯೇ ವಾರ್ಡ್ ಐದು ಮತ್ತು ಹನ್ನೆರಡನ್ನು ಹೊರತುಪಡಿಸಿದರೆ ಇನ್ನುಳಿದ ಹತ್ತು ವಾರ್ಡ್‌ಗಳಲ್ಲಿ ಸಾಕ್ಷರತಾ ಪ್ರಮಾಣ ರಾಜ್ಯದ ಮಹಿಳಾ ಸಾಕ್ಷರತಾ ಪ್ರಮಾಣಕ್ಕಿಂತ ಹೆಚ್ಚಾಗಿರುತ್ತದೆ.

### ೬.೨. ಶಾಲಾ-ದಾಖಲಾತಿ

ಇಂದು ಲಿಂಗಸಂಬಂಧಿ ಆಯಾಮಕ್ಕೆ ಹೆಚ್ಚಿನ ಮಹತ್ವ ನೀಡಿದ್ದರ ಫಲವಾಗಿ ಪ್ರಾಥಮಿಕ ಶಿಕ್ಷಣದಲ್ಲಿ ಹೆಣ್ಣುಮಕ್ಕಳ ಭಾಗವಹಿಸುವಿಕೆ ಹೆಚ್ಚಾಗಿದೆ. ಶಾಲಾ ದಾಖಲಾತಿಯಲ್ಲಿ ಹೆಣ್ಣು ಮತ್ತು ಗಂಡುಮಕ್ಕಳ ನಡುವಿನ ಅಂತರ ಸಾಕಷ್ಟು ಕಡಿಮೆಯಾಗಿದ್ದರೂ, ಗಂಡುಮಕ್ಕಳ ಶಾಲಾ ದಾಖಲಾತಿಗೆ ಹೋಲಿಸಿದರೆ ಹೆಣ್ಣುಮಕ್ಕಳ ಶಾಲಾ ದಾಖಲಾತಿ ಸ್ವಲ್ಪ ಕಡಿಮೆ ಇದೆ. ಒಟ್ಟು ಶಾಲಾ ದಾಖಲಾತಿ ಸಂಖ್ಯೆಯನ್ನು ಪರಿಗಣನೆಗೆ ತೆಗೆದುಕೊಂಡಾಗ ನಗರ ಗ್ರಾಮೀಣ ಪ್ರದೇಶದಲ್ಲಿ ಹೆಣ್ಣುಮಕ್ಕಳ ಶಾಲಾ ದಾಖಲಾತಿ ದರದಲ್ಲಿ ಸಾಕಷ್ಟು ವ್ಯತ್ಯಾಸವಿರುವುದು ಕಂಡುಬರುತ್ತದೆ. ಅದರಲ್ಲಿಯೂ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಇತರ ಹಿಂದುಳಿದ ಜಾತಿ ಹಾಗೂ ಕೆಲವು ಅಲ್ಪಸಂಖ್ಯಾತ ಗುಂಪುಗಳಿಗೆ ಸೇರಿದ ಹೆಣ್ಣುಮಕ್ಕಳ ಶಾಲಾ ದಾಖಲಾತಿಯಲ್ಲಿ ಬಹಳ ಅಂತರವಿರುವುದು ಕಂಡುಬರುತ್ತದೆ.

ಕೋಷ್ಟಕ-೬.೮

## ಭಾರತದಲ್ಲಿ ಶಾಲಾ ದಾಖಲಾತಿಯ ಒಟ್ಟು ಪ್ರಮಾಣ

| ವರ್ಷ | ಪ್ರಾಥಮಿಕ | | | ಮಾಧ್ಯಮಿಕ/ಹಿರಿಯ ಪ್ರಾಥಮಿಕ | | |
|---|---|---|---|---|---|---|
| | ಬಾಲಕರು | ಬಾಲಕಿಯರು | ಒಟ್ಟು | ಬಾಲಕರು | ಬಾಲಕಿಯರು | ಒಟ್ಟು |
| ೯೦-೯೧ | ೧೧೪.೦ | ೮೫.೫ | ೧೦೦.೧ | ೭೬.೬ | ೪೭.೦ | ೬೨.೧ |
| ೯೧-೯೨ | ೧೧೨.೮ | ೮೬.೯ | ೧೦೦.೨ | ೭೫.೧ | ೪೯.೬ | ೬೧.೪ |
| ೯೨-೯೩ | ೯೫.೦ | ೭೩.೫ | ೮೪.೬ | ೭೨.೫ | ೪೮.೯ | ೬೭.೫ |
| ೯೩-೯೪ | ೯೦.೦ | ೭೩.೧ | ೮೧.೯ | ೬೨.೧ | ೪೫.೪ | ೫೪.೨ |
| ೯೪-೯೫ | ೯೬.೬ | ೭೮.೨ | ೮೭.೭ | ೬೮.೯ | ೫೦.೦ | ೬೦.೦ |
| ೯೫-೯೬ | ೯೭.೧ | ೭೯.೪ | ೮೮.೬ | ೬೭.೮ | ೪೯.೮ | ೫೯.೩ |
| ೯೬-೯೭ | ೯೮.೭ | ೮೧.೯ | ೯೦.೬ | ೭೦.೯ | ೫೨.೮ | ೬೨.೪ |
| ೯೭-೯೮ | ೯೭.೭ | ೮೧.೨ | ೮೯.೭ | ೬೬.೫ | ೪೯.೫ | ೫೮.೫ |
| ೯೮-೯೯ | ೧೦೦.೯ | ೮೨.೯ | ೯೨.೧ | ೬೫.೩ | ೪೯.೧ | ೫೭.೬ |
| ೯೯-೨೦೦೦ | ೧೦೪.೧ | ೮೫.೨ | ೯೪.೯ | ೬೭.೨ | ೪೯.೭ | ೫೮.೮ |
| ೨೦೦೦-೦೧ | ೧೦೪.೯ | ೮೫.೯ | ೯೫.೭ | ೬೬.೭ | ೪೯.೯ | ೫೮.೬ |

ಮೂಲ : ಮಹಿಳೆ ಮತ್ತು ಅಭಿವೃದ್ಧಿ, ೨೦೦೭.

ಪ್ರಾಥಮಿಕ ಹಂತದ ಶಿಕ್ಷಣದಲ್ಲಿ ದಾಖಲಾತಿಯ ಪ್ರಮಾಣವು ೧೯೫೦-೫೧ರಲ್ಲಿ ೧೯:೧೬ ಮಿಲಿಯನ್ ಇದ್ದದ್ದು ೨೦೦೦-೦೧ರ ಅವಧಿಯಲ್ಲಿ ೧೧೩ ಮಿಲಿಯನ್‌ಗೆ ಏರಿಕೆಯಾಯಿತು. ೧೪ ವರ್ಷದ ಒಳಗಿನ ಮಕ್ಕಳ ಪ್ರಾಥಮಿಕ ಶಿಕ್ಷಣದ ದಾಖಲಾತಿಯಲ್ಲಿ ಗಣನೀಯವಾಗಿ ಹೆಚ್ಚಳ ಕಂಡರೂ, ಇದು ಸಂವಿಧಾನದ ಸಾರ್ವತ್ರಿಕ ಗುರಿಯನ್ನು ತಲುಪುವಲ್ಲಿ ಯಶಸ್ವಿಯಾಗಿಲ್ಲ.

೨೦೦೦-೦೧ರ ಸಾಲಿನಲ್ಲಿ ಪ್ರಾಥಮಿಕ ಮತ್ತು ಹಿರಿಯ ಪ್ರಾಥಮಿಕ ಶಿಕ್ಷಣ ಹಂತದಲ್ಲಿ ದಾಖಲಾತಿಯ ಒಟ್ಟು ಪ್ರಮಾಣ ಶೇಕಡವಾರು ವೃದ್ಧಿಯಾಗಿದೆ. ೬ ರಿಂದ ೧೪ ವರ್ಷದೊಳಗಿನ ಮಕ್ಕಳು ಹಿಂದಿನಗಿಂತಲೂ ಇಂದು ಹೆಚ್ಚು ಪ್ರಮಾಣದಲ್ಲಿ ಶಾಲೆಗೆ ದಾಖಲಾಗುತ್ತಿದ್ದಾರೆ (ಮಹಿಳೆ ಮತ್ತು ಅಭಿವೃದ್ಧಿ, ೨೦೦೭).

೨೦೦೩-೦೪ ಕರ್ನಾಟಕದಲ್ಲಿ ೫೧,೯೦೪ ಪ್ರಾಥಮಿಕ ಶಾಲೆಗಳಿದ್ದು (೧-೮ನೇ ತರಗತಿ) ಇವುಗಳ ಪೈಕಿ ೪೩,೪೪೭ ಸರ್ಕಾರಿ ಶಾಲೆಗಳು ಇರುತ್ತವೆ. ೧೯೯೦-೯೧ ರಿಂದ ೨೦೦೩-೦೪ರಲ್ಲಿ ಪ್ರಾಥಮಿಕ ಶಿಕ್ಷಣದಲ್ಲಿನ (೧-೭ನೇ ತರಗತಿ) ದಾಖಲಾತಿಯು ವಾರ್ಷಿಕ ಶೇಕಡ ೧.೪ರ ದರದಲ್ಲಿ ಬೆಳವಣಿಗೆ ಹೊಂದಿದ್ದು, ಅದು ಬಾಲಕರಲ್ಲಿ ಶೇಕಡ ೧ ಹಾಗೂ ಬಾಲಕಿಯರಲ್ಲಿ ಶೇಕಡ ೨ರ ಗಡಿ ಒಳಗೊಂಡಿದ್ದು, ಹೆಣ್ಣುಮಕ್ಕಳ ಶಿಕ್ಷಣಕ್ಕೆ ಚಾಲನೆ ದೊರಕಿರುವುದನ್ನು ಅದು ಸೂಚಿಸುತ್ತದೆ. ೧೯೯೭-೯೮ರಲ್ಲಿ ಬಾಲಕಿಯರ ದಾಖಲಾತಿಯಲ್ಲಿ ಬಿಜಾಪುರ ಜಿಲ್ಲೆಯು ಅತಿಕೆಳಗಿನ ಸ್ಥಾನ ಪಡೆದಿದೆ. ಬಾಲಕಿಯರ ದಾಖಲಾತಿ ಪ್ರಮಾಣವು ೧೯೯೭-೯೮ರ ಶೇಕಡ ೪೨.೨ ರಿಂದ ೨೦೦೩-೦೪ರಲ್ಲಿ ಶೇಕಡ ೪೬.೮ಕ್ಕೆ ಏರಿಕೆಯಾದರೂ ಸಹ, ಜಿಲ್ಲೆಯು ಕೊನೆಯ ಸ್ಥಾನದಲ್ಲಿಯೇ ಮುಂದುವರಿದಿದೆ. ಬಾಲಕಿಯರ ದಾಖಲಾತಿಯಲ್ಲಿ ಜಿಲ್ಲೆಗಳ ನಡುವೆ ಹೆಚ್ಚಿನ ವ್ಯತ್ಯಾಸವಿರುವುದಿಲ್ಲ. ಪರಿಶಿಷ್ಟ ಪಂಗಡಕ್ಕೆ ಸೇರಿದ ಬಾಲಕಿಯರ ದಾಖಲಾತಿಯೂ ಗುಲ್ಬರ್ಗಾದಲ್ಲಿ ಅತಿಕಡಿಮೆ ಇದೆ. ಅತಿಹೆಚ್ಚಿನ ಹಾಗೂ ಅತಿಕಡಿಮೆ ದಾಖಲಾತಿ ಸಂಖ್ಯೆಯಲ್ಲಿನ ವ್ಯತ್ಯಾಸವು ಗಣನೀಯವಾಗಿಲ್ಲದಿದ್ದರೂ ಸಹ ಬೆಂಗಳೂರು ನಗರದಲ್ಲಿ ಅತಿಹೆಚ್ಚಿನ ಹಾಗೂ ಬಳ್ಳಾರಿಯಲ್ಲಿ ಅತಿಕಡಿಮೆ ದಾಖಲಾತಿ ಪ್ರಮಾಣಗಳು ಕಂಡುಬರುತ್ತದೆ.

ರಾಜ್ಯದಲ್ಲಿ ಒಟ್ಟು ದಾಖಲಾತಿ ದರವು ೧೯೯೬-೯೭ರಲ್ಲಿ ಶೇಕಡ ೯೨ರಷ್ಟು ೨೦೦೦-೦೧ರಲ್ಲಿ ಶೇಕಡ ೯೯ಕ್ಕೆ ಏರಿ, ಪುನಃ ೨೦೦೩-೦೪ರಲ್ಲಿ ಶೇಕಡ ೯೪.೧೪ಕ್ಕೆ ಇಳಿಮುಖವಾಯಿತು. ೧೯೯೮-೯೯ರಲ್ಲಿ ರಾಯಚೂರಿನಲ್ಲಿ ಅತಿಕಡಿಮೆ ಒಟ್ಟು ದಾಖಲಾತಿ ದರವಿದ್ದು, ಅದು ಉಡುಪಿಯಲ್ಲಿ ಅತಿ ಹೆಚ್ಚಾಗಿತ್ತು. ೨೦೦೦-೦೧ರಲ್ಲಿ ಒಟ್ಟು ದಾಖಲಾತಿ ದರದಲ್ಲಿ ರಾಯಚೂರಿನ ಸ್ಥಾನಮಾನದಲ್ಲಿ ಯಾವುದೇ ಬದಲಾವಣೆಯಾಗದೇ ಅದು ಅತಿಕೊನೆಯಲ್ಲಿದ್ದರೆ ಬೆಂಗಳೂರು ನಗರ(ಶೇ. ೧೨೮.೨೧)ದಲ್ಲಿ ಅತಿಹೆಚ್ಚು ಒಟ್ಟು ದಾಖಲಾತಿ ದರವಿರುತ್ತದೆ. ೨೦೦೩-೦೪ರಲ್ಲಿ ದಕ್ಷಿಣ ಕನ್ನಡದಲ್ಲಿ ಅತಿಹೆಚ್ಚು ಒಟ್ಟು ದಾಖಲಾತಿ ದರವಿತ್ತು. ಈಗಲೂ ಸಹ ರಾಯಚೂರಿನಲ್ಲಿ ಅತಿಕಡಿಮೆ ಒಟ್ಟು ದಾಖಲಾತಿ ದರವಿದೆ. ಜಾತಿವಾರು ಪರಿಶಿಷ್ಟ ಪಂಗಡಗಳಿಗೆ ಸೇರಿದವರಲ್ಲಿ ಒಟ್ಟು ದಾಖಲಾತಿ ದರವು ಸಾಮಾನ್ಯ ಜನರು ಹಾಗೂ ಪರಿಶಿಷ್ಟ ಜಾತಿಗೆ ಸೇರಿದವರಿಗಿಂತ ಕಡಿಮೆ ಇರುತ್ತದೆ. ವಾಸ್ತವದಲ್ಲಿ ಪರಿಶಿಷ್ಟ ಜಾತಿಗೆ ಸೇರಿದವರಲ್ಲಿನ ಒಟ್ಟು ದಾಖಲಾತಿ ದರದಲ್ಲಿ ಉತ್ತಮ ಸುಧಾರಣೆ ಕಂಡಿದ್ದು, ಇದು ೨೦೦೦-೦೧ರಲ್ಲಿ ಸಾಮಾನ್ಯ ಒಟ್ಟು ದಾಖಲಾತಿ ದರವನ್ನು ಹಿಂದಕ್ಕೆ ಹಾಕಿದೆ. ಇದು ಸರ್ಕಾರದ ವಿಶೇಷ ಪ್ರೋತ್ಸಾಹಕ ಯೋಜನೆಗಳ ನೇರ ಫಲಿತಾಂಶವಾಗಿರುತ್ತದೆ. ಪರಿಶಿಷ್ಟ ಜಾತಿಗೆ ಸಂಬಂಧಪಟ್ಟಂತೆ ಅವರಿಗೆ ಒಟ್ಟಾರೆ ವಿಭಿನ್ನವಾದ ಸಮಸ್ಯೆಗಳಿದ್ದು, ಅವುಗಳನ್ನು ಪುನರ್ ವಿಮರ್ಶಿಸುವ ಹಾಗೂ ಅದಕ್ಕೆ ತಕ್ಕ ಪರಿಹಾರಗಳನ್ನು ಹುಡುಕಬೇಕಾದ ಅವಶ್ಯಕತೆ ಇರುತ್ತದೆ (ಕರ್ನಾಟಕದ ಮಾನವ ಅಭಿವೃದ್ಧಿ ವರದಿ, ೨೦೦೫).

ಶಾಲಾ ದಾಖಲಾತಿ ಕುರಿತ ಸಂಗತಿಗಳನ್ನು ಚರ್ಚಿಸುವಾಗ ಮೊದಲಿಗೆ ೧೯೫೭-೫೮ರಿಂದ ೨೦೦೪-೦೫ರವರೆಗೆ ಶಾಲಾ ದಾಖಲಾತಿಯನ್ನು ಹಿಡಿದಿಡಲಾಗಿದೆ. ವಿಶೇಷವಾಗಿ ೧೯೯೦-೯೧ರಿಂದ ೨೦೦೪-೦೫ರವರೆಗೆ ಶಾಲಾ ದಾಖಲಾತಿಯಲ್ಲಿನ ಬೆಳವಣಿಗೆಯ ಪ್ರಮಾಣವನ್ನು ವಿಶ್ಲೇಷಿಸಲಾಗಿದೆ. ಹಾಗೆಯೇ, ೨೦೦೧ರ ಕರ್ನಾಟಕದ ಜನಸಂಖ್ಯೆಯನ್ನು ಆಧಾರವಾಗಿ ಇಟ್ಟುಕೊಂಡು ಶಾಲಾ ದಾಖಲಾತಿಯ ಸಾಮಾಜಿಕ ಹಾಗೂ ಪ್ರಾದೇಶಿಕ ಆಯಾಮಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

೧೯೫೦-೫೧ರಲ್ಲಿ ಶಾಲೆಗೆ ೧ರಿಂದ ೭ ದಾಖಲಾದ ಒಟ್ಟು ಮಕ್ಕಳ ಸಂಖ್ಯೆ ೬,೩೫,೨೦೬ ಇದ್ದರೆ, ೨೦೦೪-೦೫ರಲ್ಲಿ ಶಾಲೆಗೆ ದಾಖಲಾದ ಒಟ್ಟು ಮಕ್ಕಳ ಸಂಖ್ಯೆ ೭೯,೦೦,೭೩೩ ಆಗಿದೆ. ಪ್ರಾಥಮಿಕ ಶಾಲೆಗಳ ಒಟ್ಟು ದಾಖಲಾತಿ ಪ್ರಮಾಣ ೧೯೮೦-೮೧ರಲ್ಲಿ ಶೇ. ೬೬.೦೦ರಷ್ಟು, ೧೯೯೬-೯೭ರಲ್ಲಿ ಶೇ. ೯೨.೦೦ ಹಾಗೂ ೨೦೦೪-೦೫ರಲ್ಲಿ ಶೇ. ೯೮.೮೦ ತಲುಪಿದೆ. ಬಾಲಕಿಯರ ಶಾಲಾ ದಾಖಲಾತಿ ಪ್ರಮಾಣವು ೧೯೮೦-೮೧ರಲ್ಲಿ ಶೇ. ೪೪.೫ ಇದ್ದದ್ದು, ೧೯೯೭-೯೮ರಲ್ಲಿ ಶೇ. ೪೮.೦೦ ರಷ್ಟನ್ನು ಮತ್ತು ೨೦೦೪-೦೫ರಲ್ಲಿ ಶೇ. ೯೬.೧೦ ತಲುಪಿದೆ.

**ಕೋಷ್ಟಕ-೬.೯**

## ಶಾಲಾ ದಾಖಲಾತಿಯ ಬೆಳವಣಿಗೆ (ಲಕ್ಷಗಳಲ್ಲಿ)

| ವರ್ಷಗಳು | ಬಾಲಕರು | ಬಾಲಕಿಯರು | ಒಟ್ಟು |
|---|---|---|---|
| ೧೯೫೭-೫೮ | ೯.೦೯ | ೪.೩೩ | ೧೩.೪೨ |
| ೧೯೭೮-೭೯ | ೧೯.೨೮ | ೧೩.೨೨ | ೩೨.೫೦ |
| ೧೯೯೩-೯೪ | ೪೦.೬೫ | ೩೪.೮೫ | ೭೫.೫೦ |
| ೨೦೦೧-೦೨ | ೪೨.೮೨ | ೪೨.೯೯ | ೮೫.೮೧ |
| ೨೦೦೪-೦೫ | ೪೭.೫೧ | ೫೧.೮೪ | ೯೯.೩೬ |

೧೯೯೦-೯೧ರಿಂದ ೨೦೦೪-೦೫ರಲ್ಲಿ ಪ್ರಾಥಮಿಕ ಶಿಕ್ಷಣದಲ್ಲಿನ (೧ರಿಂದ ೭ನೇ ತರಗತಿಗಳು) ದಾಖಲಾತಿಯ ವಾರ್ಷಿಕ ಶೇಕಡ ೧.೫ರಷ್ಟು ದರದಲ್ಲಿ ಬೆಳವಣಿಗೆ ಹೊಂದಿದ್ದು, ಬಾಲಕರಲ್ಲಿ ಶೇ. ೧.೧ ಹಾಗೂ ಬಾಲಕಿಯರಲ್ಲಿ ಶೇ. ೨.೦೦ರಷ್ಟು ಪ್ರಮಾಣದಲ್ಲಿ ವಾರ್ಷಿಕ ಬೆಳವಣಿಗೆ ಹೊಂದಿದೆ. ಇದು ಹೆಣ್ಣುಮಕ್ಕಳ ಶಿಕ್ಷಣಕ್ಕೆ ಹೆಚ್ಚಿನ ಚಾಲನೆ ದೊರಕಿರುವುದನ್ನು ಸೂಚಿಸುತ್ತದೆ. ಒಟ್ಟು ದಾಖಲಾತಿಯಲ್ಲಿ ಬಾಲಕಿಯರ ದಾಖಲಾತಿಯು ೧೯೯೦-೯೧ರಲ್ಲಿ ಶೇ. ೩೬.೦೦ರಿಂದ ೨೦೦೪-೦೫ರಲ್ಲಿ ಶೇ. ೪೯.೦೦ರಷ್ಟು ಬೆಳವಣಿಗೆಯನ್ನು ಹೊಂದಿದೆ. ೧೯೯೭-೯೮ರಲ್ಲಿ ಬಾಲಕಿಯರ ದಾಖಲಾತಿಯಲ್ಲಿ ಬಿಜಾಪುರ ಜಿಲ್ಲೆಯು ಅತಿಕಡಿಮೆ ಸ್ಥಾನವನ್ನು ಹೊಂದಿದ್ದು, ೧೯೯೭-೯೮ರಲ್ಲಿ

ಬಾಲಕಿಯರ ದಾಖಲಾತಿ ಪ್ರಮಾಣವು ಶೇ. ೪೨.೨ರಿಂದ ೨೦೦೩-೦೪ರಲ್ಲಿ ಶೇ. ೪೬.೮ರಷ್ಟು ಏರಿಕೆಯನ್ನು ಹೊಂದಿದೆ. ಬಾಲಕಿಯರ ದಾಖಲಾತಿಯಲ್ಲಿ ಜಿಲ್ಲೆ ಜಿಲ್ಲೆಗಳ ನಡುವೆ ಹೆಚ್ಚಿನ ವ್ಯತ್ಯಾಸ ವಿರುವುದಿಲ್ಲ. ಪರಿಶಿಷ್ಟ ಪಂಗಡಕ್ಕೆ ಸೇರಿದ ಬಾಲಕಿಯರ ದಾಖಲಾತಿಯು ಮಂಡ್ಯದಲ್ಲಿ ಹೆಚ್ಚಾಗಿದ್ದು, ಪರಿಶಿಷ್ಟ ಜಾತಿಗೆ ಸೇರಿದ ಬಾಲಕಿಯರ ದಾಖಲಾತಿಯು ಗುಲ್ಬರ್ಗದಲ್ಲಿ ಅತಿ ಕಡಿಮೆ ಇರುತ್ತದೆ. ಅತಿಹೆಚ್ಚಿನ ಹಾಗೂ ಅತಿಕಡಿಮೆ ದಾಖಲಾತಿಯ ಸಂಖ್ಯೆಯಲ್ಲಿನ ವ್ಯತ್ಯಾಸವು ಅಷ್ಟಾಗಿ ಇಲ್ಲದಿದ್ದರೂ ಸಹ ಬೆಂಗಳೂರು ನಗರದಲ್ಲಿ ಅತಿಹೆಚ್ಚಿನ ದಾಖಲಾತಿ ಹಾಗೂ ಬಳ್ಳಾರಿಯಲ್ಲಿ ಅತಿಕಡಿಮೆ ದಾಖಲಾತಿ ಇರುತ್ತದೆ.

ಒಟ್ಟು ಹಾಗೂ ನಿವ್ವಳ ದಾಖಲಾತಿ ಪರಿಮಾಣವು ಶಿಕ್ಷಣದ ಬಹುಮುಖ ಕ್ಷೇತ್ರಗಳನ್ನು ತಿಳಿಸುತ್ತದೆ. ಇದು ಒಟ್ಟು ದಾಖಲಾತಿ ಮತ್ತು ನಿವ್ವಳ ದಾಖಲಾತಿ ದರದ ಪರಿಕಲ್ಪನೆಯಲ್ಲಿನ ಭೇದವನ್ನು ತೋರಿಸುವಲ್ಲಿ ಉಪಯೋಗವಾಗಿದೆ. ಸಾಮಾನ್ಯವಾಗಿ ಒಟ್ಟು ಹಾಗೂ ನಿವ್ವಳ ದಾಖಲಾತಿ ಪರಿಮಾಣಗಳನ್ನು ಮಕ್ಕಳ ಶಿಕ್ಷಣವನ್ನು ಕಂಡುಹಿಡಿಯಲು ಬಳಸುತ್ತಾರೆ. ದಾಖಲಾತಿ ದರವನ್ನು ಶಾಲೆಯಲ್ಲಿ ಒಟ್ಟು ಮಕ್ಕಳ ಸಂಖ್ಯೆಯನ್ನು ಅದೇ ವಯಸ್ಸಿನ ಗುಂಪಿನ ಮಕ್ಕಳ ಜನಸಂಖ್ಯೆಯಿಂದ ಭಾಗಿಸುವುದರಿಂದ ಬರುವ ಸಂಖ್ಯೆಯೆಂದು ವ್ಯಾಖ್ಯಾನಿಸುತ್ತಾರೆ. ಒಟ್ಟು ದಾಖಲಾತಿ ದರವು ನಿರ್ದಿಷ್ಟ ಶಿಕ್ಷಣ ಮಟ್ಟವನ್ನು ಹೊಂದಿದ ಮಕ್ಕಳು, ಅವರ ಸಂಬಂಧಪಟ್ಟ ವಯಸ್ಸಿನ ಗುಂಪಿನ ಭಾಗಲಬ್ದವನ್ನು ಉಪಯೋಗಿಸುವ ವಯಸ್ಸಿಗಿಂತ ಹೆಚ್ಚು ಅಥವಾ ಕಡಿಮೆ ವಯಸ್ಸನ್ನು ಹೊಂದಿರುವಂತಹವರನ್ನು ಒಳಗೊಂಡಿರುತ್ತದೆ. ನಿವ್ವಳ ದಾಖಲಾತಿ ದರವು ಸಂಬಂಧಪಟ್ಟ ವಯಸ್ಸಿನ ಗುಂಪಿನ ನಿರ್ದಿಷ್ಟ ಹಂತದಲ್ಲಿ ದಾಖಲಾದ ಒಟ್ಟು ಮಕ್ಕಳ ಸಂಖ್ಯೆಯನ್ನು ನಿರ್ದಿಷ್ಟ ವಯಸ್ಸಿನ ಗುಂಪಿನ ಒಟ್ಟು ಮಕ್ಕಳ ಜನಸಂಖ್ಯೆಯಿಂದ ಭಾಗಿಸುವುದರಿಂದ ದೊರಕುತ್ತದೆ. ಆದುದರಿಂದ ಒಟ್ಟು ದಾಖಲಾತಿ ದರವು ಶೇ. ೧೦೦ನ್ನು ಮೀರಬಹುದು.

ರಾಜ್ಯದಲ್ಲಿ ಒಟ್ಟು ದಾಖಲಾತಿ ದರವು ೧೯೯೬-೯೭ರಲ್ಲಿ ಶೇ. ೯೨.೦೦ರಿಂದ ೨೦೦೦-೦೧ರಲ್ಲಿ ಶೇ. ೯೯.೦೦ಕ್ಕೆ ಏರಿಕೆಯಾಗಿದ್ದು ೨೦೦೪-೦೫ರಲ್ಲಿ ಶೇ. ೯೬.೧೧ಕ್ಕೆ ಇಳಿಕೆಯಾಗಿರುತ್ತದೆ. ೧೯೯೮-೯೯ರಲ್ಲಿ ರಾಯಚೂರಿನಲ್ಲಿ ಅತಿಕಡಿಮೆ ಒಟ್ಟು ದಾಖಲಾತಿ ದರವಿದ್ದು ಉಡುಪಿಯಲ್ಲಿ ಅತಿ ಹೆಚ್ಚು ಇರುತ್ತದೆ. ೨೦೦೧-೦೨ರಲ್ಲಿ ಒಟ್ಟು ದಾಖಲಾತಿ ದರದಲ್ಲಿ ರಾಯಚೂರಿನ ಸ್ಥಾನಮಾನ (೭೪.೫೪)ದಲ್ಲಿ ಯಾವುದೇ ವ್ಯತ್ಯಾಸವಿಲ್ಲದೆ ಆ ಜಿಲ್ಲೆ ಪುನಃ ಅತಿ ಕೆಳಸ್ಥಾನದಲ್ಲಿರುತ್ತದೆ. ಆದರೆ ಬೆಂಗಳೂರು ನಗರ(೧೨೮.೨೧)ದಲ್ಲಿ ಅತಿಹೆಚ್ಚು ಒಟ್ಟು ದಾಖಲಾತಿ ದರವಿರುತ್ತದೆ. ೨೦೦೪-೦೫ರಲ್ಲಿ ದಕ್ಷಿಣ ಕನ್ನಡದಲ್ಲಿ ಅತಿಹೆಚ್ಚು ಒಟ್ಟು ದಾಖಲಾತಿ ದರವಿದ್ದು ಈಗಲೂ ಸಹ ರಾಯಚೂರಿನಲ್ಲಿ ಅತಿಕಡಿಮೆ ದಾಖಲಾತಿ ದರವಿರುತ್ತದೆ. ಬೀದರ್‌ನಲ್ಲಿ ಒಟ್ಟು ದಾಖಲಾತಿ ದರದಲ್ಲಿ

ಅದರಲ್ಲೂ ಬಾಲಕಿಯರ ದಾಖಲಾತಿ ದರದಲ್ಲಿ ಗುರುತರವಾದ ಸುಧಾರಣೆಯಾಗಿದ್ದು, ಇದು ಬಾಲಕರ ದಾಖಲಾತಿ ದರಕ್ಕೆ ಸಮನಾಗಿದೆ. ಜಾತಿವಾರು, ಪರಿಶಿಷ್ಟ ಪಂಗಡಗಳಿಗೆ ಸೇರಿದವರಲ್ಲಿ ಒಟ್ಟು ದಾಖಲಾತಿ ದರವು ಸಾಮಾನ್ಯ ಜನರು ಹಾಗೂ ಪರಿಶಿಷ್ಟ ಜಾತಿಗೆ ಸೇರಿದವರಿಗಿಂತ ಕಡಿಮೆ ಇರುತ್ತದೆ. ಪರಿಶಿಷ್ಟ ಜಾತಿಗೆ ಸೇರಿದವರಲ್ಲಿನ ಒಟ್ಟು ದಾಖಲಾತಿ ದರದಲ್ಲಿ ಉತ್ತಮ ಸುಧಾರಣೆ ಯಾಗಿದ್ದು, ಇದು ೨೦೦೪-೦೫ರಲ್ಲಿ ಸಾಮಾನ್ಯ ಜನರ ಒಟ್ಟು ದಾಖಲಾತಿ ದರವನ್ನು ಹಿಂದಕ್ಕೆ ಹಾಕಿದ್ದು, ಇದು ಸರ್ಕಾರದ ವಿಶೇಷ ಪ್ರೋತ್ಸಾಹಕ ಯೋಜನೆಗಳ ಫಲವಾಗಿರುತ್ತದೆ. ಪರಿಶಿಷ್ಟ ಜಾತಿಗೆ ಸಂಬಂಧಪಟ್ಟಂತೆ ಕೆಲವು ಸಮಸ್ಯೆಗಳು ಇದ್ದು, ಸ್ವಲ್ಪಮಟ್ಟಿನ ಪರಿಹಾರದ ಅವಶ್ಯಕತೆ ಇರುತ್ತದೆ.

**೬.೩. ಶಾಲಾ ದಾಖಲಾತಿಯ ಸಾಧನೆ**

೨೦೦೫ಕ್ಕೆ ಸಂಬಂಧಿಸಿದಂತೆ ೧ರಿಂದ ೭ನೆಯ, ೮ರಿಂದ ೧೦ನೆಯ ಹಾಗೂ ಒಟ್ಟು ೧ರಿಂದ ೧೦ನೆಯ ತರಗತಿಗಳ ದಾಖಲಾತಿ ವಿವರಗಳನ್ನು ಕಂದಾಯ ವಿಭಾಗವಾರು ನೀಡಲಾಗಿದೆ. ಒಂದರಿಂದ ಹತ್ತನೆಯ ತರಗತಿವರೆಗಿನ ದಾಖಲಾತಿ ಸಂಖ್ಯೆ ೯೯.೩೬ ಲಕ್ಷ. ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ೧-೧೦ನೆಯ ತರಗತಿಯಲ್ಲಿರುವ ಮಕ್ಕಳ ಪ್ರಮಾಣವು ಶೇ. ೧೮.೮೦ರಷ್ಟಿದೆ.

ತೋರಿಸುತ್ತಿರುವ ಒಂದು ಕುತೂಹಲಕಾರಿ ಸಂಗತಿ ಬಗ್ಗೆ ವಿವರವಾಗಿ ಚರ್ಚಿಸುವ ಅಗತ್ಯವಿದೆ. ಒಟ್ಟು ಮಕ್ಕಳ ದಾಖಲಾತಿಯ ಪ್ರಾದೇಶಿಕ ಸ್ವರೂಪಕ್ಕೆ ಇದು ಸಂಬಂಧಿಸಿದೆ. ಕರ್ನಾಟಕ ರಾಜ್ಯದ ಎರಡು ಪ್ರದೇಶಗಳಾದ ದಕ್ಷಿಣ ಕರ್ನಾಟಕ (ದ.ಕ.) ಮತ್ತು ಉತ್ತರ ಕರ್ನಾಟಕ(ಉ.ಕ.)ಗಳ ನಡುವೆ ಜನಸಂಖ್ಯೆಯ ಹಂಚಿಕೆಗಿಂತ ದಾಖಲಾದ ಮಕ್ಕಳ ಹಂಚಿಕೆಯು ಭಿನ್ನವಾಗಿದೆ. ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ದಕ್ಷಿಣ ಕರ್ನಾಟಕದ ಪಾಲು ಶೇ. ೫೭.೩೦ ರಷ್ಟಿದ್ದರೆ ಉತ್ತರ ಕರ್ನಾಟಕದ ಪಾಲು ಕೇವಲ ಶೇ. ೪೨.೭೦. ಆದರೆ ೧ರಿಂದ ೧೦ನೆಯ ತರಗತಿವರೆಗಿನ ಮಕ್ಕಳ ದಾಖಲಾತಿಯಲ್ಲಿ ಇದು ತಿರುವು ಮುರುವು ಆಗಿರುವುದು ಕಂಡುಬರುತ್ತದೆ. ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಶೇ. ೫೭.೩೦ ಪಾಲು ಪಡೆದಿರುವ ದಕ್ಷಿಣ ಕರ್ನಾಟಕ ಪ್ರದೇಶವು ೧ ರಿಂದ ೧೦ನೆಯ ತರಗತಿವರೆಗಿನ ಶಾಲಾ ಮಕ್ಕಳಿಗೆ ಸಂಬಂಧಿಸಿದಂತೆ ಅದರ ಪಾಲು ಕೇವಲ ಶೇ. ೫೩.೪೮ರಷ್ಟು, ಇದಕ್ಕೆ ಪ್ರತಿಯಾಗಿ ಜನಸಂಖ್ಯೆಯಲ್ಲಿ ಶೇ. ೪೨.೭೦ ಪಾಲು ಪಡೆದಿರುವ ಉತ್ತರ ಕರ್ನಾಟಕ ಪ್ರದೇಶವು, ಶಾಲಾ ಮಕ್ಕಳಲ್ಲಿ ಶೇ. ೪೬.೫೨ ಪಾಲು ಪಡೆದಿದೆ.

ಇದನ್ನು ಅರ್ಥ ಮಾಡಿಕೊಳ್ಳಲು ನಾವು ರಾಜ್ಯದಲ್ಲಿನ ೦-೬ ವಯೋಮಾನದ ಮಕ್ಕಳ ಹಂಚಿಕೆಯನ್ನು ಪರಿಗಣಿಸಬೇಕಾಗುತ್ತದೆ. ಕೋಷ್ಟಕ-೬.೧೧ರಲ್ಲಿ ೧೯೯೧ ಮತ್ತು ೨೦೦೧ರಲ್ಲಿ ರಾಜ್ಯದ ವಿಭಾಗಗಳ ನಡುವೆ ೦-೬ ವಯೋಮಾನದ ಮಕ್ಕಳ ಹಂಚಿಕೆಯ ವಿವರ ನೀಡಲಾಗಿದೆ.

ಕೋಷ್ಟಕ-೬.೧೦

## ಕರ್ನಾಟಕದಲ್ಲಿ ೦-೬ ವಯೋಮಾನದ ಮಕ್ಕಳ ೧೯೯೧ ಮತ್ತು ೨೦೦೧

| ವಿಭಾಗಗಳು ಪ್ರದೇಶ ರಾಜ್ಯ | ೦-೬ ವಯೋಮಾನದ ಮಕ್ಕಳು ೧೯೯೧ ಸಂಖ್ಯೆ ಪ್ರಮಾಣ (ಲಕ್ಷಗಳಲ್ಲಿ) | | ೦-೬ ವಯೋಮಾನದ ಮಕ್ಕಳು ೨೦೦೧ ಸಂಖ್ಯೆ ಪ್ರಮಾಣ (ಲಕ್ಷಗಳಲ್ಲಿ) | | ೧೯೯೧-೨೦೦೧ರ ದಶಕದಲ್ಲಿ ಬೆಳವಣಿಗೆ ಪ್ರಮಾಣ (ಶೇ.) |
|---|---|---|---|---|---|
| ಬೆಂಗಳೂರು ವಿಭಾಗ | ೨೩.೬೫ | ೩೧.೬೩ | ೨೧.೬೭ | ೩೧.೭೫ | - ೮.೩೭ |
| ಮೈಸೂರು ವಿಭಾಗ | ೧೫.೬೫ | ೨೦.೧೨ | ೧೩.೧೭ | ೧೯.೨೭ | - ೧೮.೮೪ |
| ದ.ಕ.ಪ್ರದೇಶ | ೩೯.೩೦ | ೫೨.೫೫ | ೩೪.೮೪ | ೫೧.೦೪ | - ೧೧.೩೪ |
| ಬೆಳಗಾವಿ ವಿಭಾಗ | ೧೯.೭೧ | ೨೬.೩೬ | ೧೮.೩೧ | ೨೬.೮೨ | - ೭.೧೦ |
| ಗುಲಬರ್ಗಾ ವಿಭಾಗ | ೧೫.೭೭ | ೨.೦೯ | ೧೫.೧೧ | ೨೨.೧೪ | - ೪.೧೮ |
| ಉ.ಕ. ಪ್ರದೇಶ | ೩೫.೪೮ | ೪೭.೪೫ | ೩೩.೪೨ | ೪೮.೯೬ | - ೫.೮೧ |
| ಕರ್ನಾಟಕ ರಾಜ್ಯ | ೭೪.೭೮ | ೧೦೦.೦೦ | ೬೮.೨೬ | ೧೦೦.೦೦ | - ೮.೭೨ |

ಮೂಲ : ಜನಗಣತಿ ವರದಿಗಳು ೧೯೯೯-೨೦೦೧

ಮೊದಲನೆಯದಾಗಿ, ೧೯೯೧ರಿಂದ ೨೦೦೧ರ ದಶಕದಲ್ಲಿ ೦-೬ ವಯೋಮಾನದ ಒಟ್ಟು ಮಕ್ಕಳ ಸಂಖ್ಯೆಯು ಕಡಿಮೆಯಾಗಿದೆ. ಅದು ಶೇಕಡ ೮.೭೨ರಷ್ಟು ಕಡಿಮೆಯಾಗಿದೆ. ಆದರೆ ಕಡಿಮೆ ಯಾಗುತ್ತಿರುವ ಪ್ರಮಾಣ ಎಲ್ಲ ಪ್ರದೇಶದಲ್ಲೂ ಏಕರೂಪಿಯಾಗಿಲ್ಲ. ದಕ್ಷಿಣ ಕರ್ನಾಟಕ ಪ್ರದೇಶ ದಲ್ಲಿ ಅದು ಶೇ. ೧೧.೩೪ರಷ್ಟು ಕಡಿಮೆಯಾಗಿದ್ದರೆ, ಉತ್ತರ ಕರ್ನಾಟಕ ಪ್ರದೇಶದಲ್ಲಿ ಅದು ಕೇವಲ ಶೇ. ೫.೮೧ರಷ್ಟು ಕಡಿಮೆಯಾಗಿದೆ. ಇದರಿಂದಾಗಿ ೦-೬ ವಯೋಮಾನದ ಮಕ್ಕಳಿಗೆ ಸಂಬಂಧಿಸಿದಂತೆ ಉತ್ತರ ಕರ್ನಾಟಕ ಪ್ರದೇಶದ ಪಾಲು ೧೯೯೧ರಲ್ಲಿ ಶೇ. ೪೭.೪೫ ರಷ್ಟಿದ್ದುದು ೨೦೦೧ರಲ್ಲಿ ಅದು ಶೇ. ೪೮.೯೬ಕ್ಕೆ ಏರಿಕೆಯಾಗಿದೆ. ಇದಕ್ಕೆ ಪ್ರತಿಯಾಗಿ ದಕ್ಷಿಣ ಕರ್ನಾಟಕ ಪ್ರದೇಶದ ಪಾಲು ಇದೇ ಅವಧಿಯಲ್ಲಿ ಶೇ. ೫೨.೫೫ರಿಂದ ಶೇ. ೫೧.೦೪ಕ್ಕೆ ಇಳಿದಿದೆ. ಒಟ್ಟಾರೆ ೧೯೯೧-೨೦೦೧ರ ದಶಕದಲ್ಲಿ ೦-೬ ವಯೋಮಾನದ ಮಕ್ಕಳ ಪ್ರಮಾಣವು ಉತ್ತರ ಕರ್ನಾಟಕ ಪ್ರದೇಶದಲ್ಲಿ ಸಾಪೇಕ್ಷವಾಗಿ ಅಧಿಕಗೊಂಡಿದೆ (ಚಂದ್ರಶೇಖರ್ ಟಿ.ಆರ್., ೨೦೦೩). ಮಕ್ಕಳ ದಾಖಲಾತಿಗೆ ಸಂಬಂಧಿಸಿದ ಪ್ರಾದೇಶಿಕ ಸ್ವರೂಪವು ಜನಸಂಖ್ಯೆಯ ಪ್ರಾದೇಶಿಕ ಹಂಚಿಕೆಗಿಂತ ಯಾಕೆ ಭಿನ್ನವಾಗಿದೆ ಎಂಬುದನ್ನು ಸೂಚಿಗಳಿಂದ ತಿಳಿದುಕೊಳ್ಳಬಹುದಾಗಿದೆ.

ಎರಡನೆಯದಾಗಿ ಮತ್ತೊಂದು ದೃಷ್ಟಿಯಿಂದ ಮಹತ್ವವಾದುದಾಗಿದೆ. ಈ ಕೋಷ್ಟಕದ ನೆರವಿನಿಂದ ಕರ್ನಾಟಕದಲ್ಲಿ ಜನಸಂಖ್ಯೆಯ ಬೆಳವಣಿಗೆಯ ತೀವ್ರತೆಯು ಯಾವ ಭಾಗದಲ್ಲಿ ಅಧಿಕ ವಾಗಿದೆ ಎಂಬುದನ್ನು ಅರ್ಥಮಾಡಿಕೊಳ್ಳಬಹುದಾಗಿದೆ. ಈ ಸಂಗತಿಯು ಜನಸಂಖ್ಯಾ ನೀತಿ ಕಾರ್ಯಕ್ರಮದ ದೃಷ್ಟಿಯಿಂದ ಉಪಯುಕ್ತವಾದುದಾಗಿದೆ.

ಮೂರನೆಯದಾಗಿ, ಪ್ರಸ್ತುತ ಕೋಷ್ಟಕ ತುಂಬಾ ಮಹತ್ವವಾದ ಅಸಮಾನತೆಯ ಸೂಕ್ಷ್ಮ ನೆಲೆಯನ್ನು ಗುರುತಿಸುವ ದೃಷ್ಟಿಯಿಂದ ನಿರ್ಣಾಯಕವಾದುದಾಗಿದೆ. ಈ ದಾಖಲಾತಿಯನ್ನು ೧ರಿಂದ ೭ನೆಯ ತರಗತಿ ಹಾಗೂ ೮ರಿಂದ ೧೦ನೆಯ ತರಗತಿವರೆಗೆ ವರ್ಗೀಕರಿಸಿ ನೀಡಲಾಗಿದೆ. ಕರ್ನಾಟಕದಲ್ಲಿ ಪ್ರಾದೇಶಿಕ ಅಸಮಾನತೆ ಬಗ್ಗೆ ತುಂಬಾ ಸಾಮಾನ್ಯೀಕರಿಸಿದ ರೀತಿಯಲ್ಲಿ ಮಾತನಾಡುವುದು ಕಂಡು ಬರುತ್ತದೆ. ಅದರ ಸೂಕ್ಷ್ಮ ನೆಲೆಗಳನ್ನು ಕುರಿತಂತೆ ಚರ್ಚೆಗಳು ಕಡಿಮೆ. ಕೋಷ್ಟಕ-೧೨ರ ಮೂರನೆಯ ಅಂಕಣವು ತೋರಿಸುವಂತೆ ದಕ್ಷಿಣ ಕರ್ನಾಟಕ ಪ್ರದೇಶವು ಜನಸಂಖ್ಯೆಯಲ್ಲಿ ಎಷ್ಟು ಪಾಲು ಪಡೆದಿದೆಯೋ ಅದಕ್ಕಿಂತ ಕಡಿಮೆ ಪಾಲನ್ನು ೧ರಿಂದ ೭ನೆಯ ತರಗತಿಯಲ್ಲಿನ ದಾಖಲಾದ ಮಕ್ಕಳಲ್ಲಿ ಪಡೆದಿದೆ. ಆದರೆ ಪ್ರೌಢಶಾಲೆಗಳ ಹಂತಕ್ಕೆ (೮-೧೦) ಬಂದರೆ ದಕ್ಷಿಣ ಕರ್ನಾಟಕ ಪ್ರದೇಶದ ಪಾಲು ಒಟ್ಟು ಜನಸಂಖ್ಯೆಯಲ್ಲಿನ ಪಾಲಿಗಿಂತ ಅಧಿಕವಿರುವುದು ಕುತೂಹಲಕಾರಿಯಾಗಿದೆ.

ಇದಕ್ಕೆ ಪ್ರತಿಯಾಗಿ ಉತ್ತರ ಕರ್ನಾಟಕ ಪ್ರದೇಶವು ಜನಸಂಖ್ಯೆಯಲ್ಲಿ ಎಷ್ಟು ಪಾಲು ಪಡೆದಿದೆಯೋ (ಶೇ. ೪೨.೭೦) ಅದಕ್ಕಿಂತಲೂ ಹೆಚ್ಚಿನ ಪಾಲನ್ನು ಅದು ೧-೭ನೆಯ ತರಗತಿ ಮಕ್ಕಳ ದಾಖಲಾತಿಯಲ್ಲಿ ಪಡೆದಿದೆ (ಶೇ. ೪೮.೬೫). ಆದರೆ ಪ್ರೌಢಶಾಲೆ ಹಂತಕ್ಕೆ ಬಂದರೆ (೮ರಿಂದ ೧೦ನೆಯ ತರಗತಿ) ಅದರ ಪಾಲು ಜನಸಂಖ್ಯೆಯಲ್ಲಿ ಪಡೆದ ಪಾಲಿಗಿಂತ ಕಡಿಮೆಯಾಗಿರುವುದು (ಶೇ. ೩೮.೯೯) ಆಘಾತಕಾರಿ ಸಂಗತಿಯಾಗಿದೆ. ಇದು ಪ್ರಮುಖವಾಗಿ ಮಕ್ಕಳು ಶಾಲೆಯನ್ನು ಮಧ್ಯದಲ್ಲಿ ಬಿಡುವ ಪ್ರಮಾಣವು ದಕ್ಷಿಣ ಕರ್ನಾಟಕ ಪ್ರದೇಶಕ್ಕಿಂತ ಉತ್ತರ ಕರ್ನಾಟಕ ಪ್ರದೇಶದಲ್ಲಿ ಅಧಿಕವಾಗಿರುವುದನ್ನು ಸೂಚಿಸುತ್ತದೆ. ರಾಜ್ಯದಲ್ಲಿ ೨೦೦೫ರಲ್ಲಿ ೮ರಿಂದ ೧೦ನೆಯ ತರಗತಿವರೆಗೆ ಕಲಿಯುತ್ತಿರುವ ಒಟ್ಟು ಮಕ್ಕಳಲ್ಲಿ (೨೦.೩೬ ಲಕ್ಷ) ಕೇವಲ ಶೇ. ೩೮.೯೯ರಷ್ಟು ಉತ್ತರ ಕರ್ನಾಟಕ ಪ್ರದೇಶಕ್ಕೆ ಸೇರಿದ್ದರೆ, ಶೇ. ೬೧.೦೧ರಷ್ಟು ದಕ್ಷಿಣ ಕರ್ನಾಟಕ ಪ್ರದೇಶಕ್ಕೆ ಸೇರಿದ್ದಾರೆ.

ಶಾಲಾ ದಾಖಲಾತಿಗೆ ಸಂಬಂಧಿಸಿದ ಒಟ್ಟು ಸಾಧನೆ ಹಾಗೂ ಅದರ ಪ್ರಾದೇಶಿಕ ಸ್ವರೂಪವನ್ನು ಸ್ಪಷ್ಟವಾಗಿ ತೋರಿಸುತ್ತದೆ. ಈ ಮೇಲಿನ ಅಂಕಿ-ಸಂಖ್ಯೆಯ ಮೂಲಕ ಮೂರು ಮುಖ್ಯ ತಥ್ಯಗಳನ್ನು ರೂಪಿಸಬಹುದಾಗಿದೆ.

೧. ಕರ್ನಾಟಕದಲ್ಲಿ ಇಂದು ೧ರಿಂದ ೧೦ನೆಯ ತರಗತಿಗಳಲ್ಲಿ ಕಲಿಯುತ್ತಿರುವ ಮಕ್ಕಳ ಸಂಖ್ಯೆ ಸರಿಸುಮಾರು ೧೦೦ ಲಕ್ಷ ಇದೆ. ಆದರೆ ದಕ್ಷಿಣ ಕರ್ನಾಟಕ ಪ್ರದೇಶವು ರಾಜ್ಯದ

ಜನಸಂಖ್ಯೆಯಲ್ಲಿ ಎಷ್ಟು ಪಾಲು ಪಡೆದಿದೆಯೋ ಅದಕ್ಕಿಂತ ಕಡಿಮೆ ಪಾಲು ರಾಜ್ಯದ ಮಕ್ಕಳ ದಾಖಲಾತಿಯಲ್ಲಿ ಪಡೆದಿದೆ. ಇದಕ್ಕೆ ಪ್ರತಿಯಾಗಿ ಉತ್ತರ ಕರ್ನಾಟಕ ಪ್ರದೇಶವು ರಾಜ್ಯದ ಜನಸಂಖ್ಯೆಯಲ್ಲಿ ಎಷ್ಟು ಪಾಲು ಪಡೆದಿದೆಯೋ ಅದಕ್ಕಿಂತ ಅಧಿಕ ಪಾಲನ್ನು ರಾಜ್ಯದ ಶಾಲಾಮಕ್ಕಳ ಸಂಖ್ಯೆಯಲ್ಲಿ ಪಡೆದಿದೆ. ಆದರೆ ಇಂತಹ ಹಂಚಿಕೆ ೧-೭ನೆಯ ತರಗತಿ ದಾಖಲಾತಿಗೆ ಮಾತ್ರ ಅನ್ವಯಿಸುತ್ತದೆ. ಮುಂದೆ ೮-೧೦ನೆಯ ತರಗತಿಯ ದಾಖಲಾತಿ ತೆಗೆದುಕೊಂಡರೆ ಪರಿಸ್ಥಿತಿ ಆಶಾ ದಾಯಕವಾಗಿಲ್ಲ. ಇಲ್ಲಿ ದಕ್ಷಿಣ ಕರ್ನಾಟಕದ ಪಾಲು ಅಧಿಕವಾಗಿದೆ ಮತ್ತು ಉತ್ತರ ಕರ್ನಾಟಕದ ಪಾಲು ಕಡಿಮೆಯಾಗಿದೆ.

೨. ಪ್ರಾದೇಶಿಕವಾಗಿ ದಾಖಲಾದ ಮಕ್ಕಳ ಹಂಚಿಕೆಯು ಜನಸಂಖ್ಯೆಯ ಹಂಚಿಕೆಗಿಂತ ಭಿನ್ನವಾಗಿದ್ದರೆ ಅದಕ್ಕೆ ಉತ್ತರವನ್ನು ೦-೬ ವಯೋಮಾನದ ಮಕ್ಕಳ ಪ್ರಾದೇಶಿಕ ಹಂಚಿಕೆಯಲ್ಲಿ ಕಂಡುಕೊಳ್ಳಬಹುದಾಗಿದೆ.

೩. ಪ್ರಾದೇಶಿಕವಾಗಿ ೦-೬ ವಯೋಮಾನದ ಮಕ್ಕಳ ಹಂಚಿಕೆಯ ಆಧಾರದ ಮೇಲೆ ರಾಜ್ಯದಲ್ಲಿ ಜನಸಂಖ್ಯೆಯ ಬೆಳವಣಿಗೆ ಒತ್ತಡ ಯಾವ ಪ್ರದೇಶದಲ್ಲಿ ಅಧಿಕವಿದೆ ಎಂಬುದನ್ನು ಅರ್ಥ ಮಾಡಿಕೊಳ್ಳಬಹುದಾಗಿದೆ.

**೬.೪. ಅಧ್ಯಯನ ಕ್ಷೇತ್ರದಲ್ಲಿ ಶಾಲೆ ಬಿಟ್ಟ ಮಕ್ಕಳು**

ಪ್ರಾಥಮಿಕ ಶಾಲೆಗಳಿಗೆ ಸಂಬಂಧಿಸಿದಂತೆ ನಾವು ಎದುರಿಸುತ್ತಿರುವ ಸಮಸ್ಯೆಯೆಂದರೆ ಮಕ್ಕಳು ಶಾಲೆಯನ್ನು ಮಧ್ಯದಲ್ಲಿ ಬಿಡುವ ಸಂಗತಿಯಾಗಿದೆ. ಪ್ರತಿಯೊಂದು ಮಗುವಿಗೆ ೧೦ ವರ್ಷಗಳ ಶಾಲಾ ಶಿಕ್ಷಣವನ್ನು ಕಡ್ಡಾಯವಾಗಿ ಮತ್ತು ಉಚಿತವಾಗಿ ಒದಗಿಸುವ ಜವಾಬ್ದಾರಿಗೆ ಸಮಾಜವು ಬದ್ಧವಾಗಿದೆ. ಆದರೆ ೧೦ ವರ್ಷಗಳ ಶಾಲಾ ಶಿಕ್ಷಣವನ್ನು ಪಡೆಯುವ ಅವಕಾಶ ಅನೇಕ ಮಕ್ಕಳಿಗಿರುವುದಿಲ್ಲ. ಇದಕ್ಕೆ ಬಡತನವನ್ನು ಮುಖ್ಯ ಕಾರಣವನ್ನಾಗಿ ನೀಡುತ್ತಾ ಬರಲಾಗಿದೆ. ಆದರೆ ಮಕ್ಕಳು ಶಾಲೆಯನ್ನು ಬಿಡಲು ಅನೇಕ ಕಾರಣಗಳು ಸಾಧ್ಯ. ಅದಕ್ಕೆ ಬಡತನವನ್ನು ಮಾತ್ರವೇ ಕಾರಣ ಮಾಡುವುದು ಸೂಕ್ತವೆನಿಸುವುದಿಲ್ಲ.

ಅನೇಕ ಸಾಮಾಜಿಕ-ರಾಜಕೀಯ-ಚಾರಿತ್ರಿಕ ಕಾರಣಗಳು ಇದರ ಹಿಂದಿರಲು ಸಾಧ್ಯ. ಮೊದಲ ತಲೆಮಾರಿನ ಅಕ್ಷರಸ್ಥ ಮಕ್ಕಳ ಸಮಸ್ಯೆ ಒಂದು ಬಗೆಯದ್ದಾದರೆ, ವಲಸೆ ಹೋಗುವ ಕುಟುಂಬಗಳಲ್ಲಿನ ಮಕ್ಕಳ ಸಮಸ್ಯೆ ಇದಕ್ಕಿಂತ ಭಿನ್ನವಾಗಿದೆ. ಇತ್ತೀಚಿನ ಅಧ್ಯಯನಗಳು ತೋರಿಸಿರುವಂತೆ ಶಾಲೆಯೊಳಗಿನ ವಾತಾವರಣವೂ ಬಹಳ ಮುಖ್ಯ. ಮಕ್ಕಳಿಗೆ ಶಾಲೆ-ಪಾಠ ಆಕರ್ಷಣೀಯವಾಗುವಂತೆ ಮಾಡುವುದು, ಉಚಿತ ಊಟ, ಪಠ್ಯಪುಸ್ತಕ, ಪಠ್ಯಕ್ರಮ, ಸಮವಸ್ತ್ರ ಮುಂತಾದವುಗಳನ್ನು ಒದಗಿಸುವುದು ಮಕ್ಕಳು ಶಾಲೆಯನ್ನು ಮಧ್ಯದಲ್ಲಿ ಬಿಡುವುದನ್ನು ಕಡಿಮೆ ಮಾಡಬಲ್ಲವು (ಪ್ರಶಾಂತ ಹೆಚ್.ಡಿ., ೨೦೦೫; ೨೦೦೬). ಆವರ್ತನ ರೀತಿಯ ವಲಸೆಯು ವ್ಯಾಪಕವಾಗಿರುವ ಪ್ರದೇಶಗಳಲ್ಲಿ ಉದ್ಯೋಗ ಭದ್ರತೆಯ

ಪಾತ್ರ ತುಂಬಾ ಮುಖ್ಯವಾಗುತ್ತದೆ. ಈ ಸಮಸ್ಯೆಯು ದಲಿತ ಮಕ್ಕಳಲ್ಲಿ ಅಧಿಕವಾಗಿರುವುದು ಅಚ್ಚರಿಯ ಸಂಗತಿಯೇನಲ್ಲ. ಹಾಗೆಯೇ ಗಂಡುಮಕ್ಕಳಿಗಿಂತ ಹೆಣ್ಣುಮಕ್ಕಳಲ್ಲಿ ಅಧಿಕವಾಗಿರುವುದು ಅಚ್ಚರಿಯ ಸಂಗತಿಯೇನಲ್ಲ. ಹಾಗೆಯೇ, ಗಂಡುಮಕ್ಕಳಿಗಿಂತ ಹೆಣ್ಣುಮಕ್ಕಳು ಶಾಲೆಯನ್ನು ಮಧ್ಯದಲ್ಲಿ ಬಿಡುವುದು ಅಧಿಕ. ಹೀಗೆ ಶಾಲೆಯನ್ನು ಮಧ್ಯದಲ್ಲಿ ಬಿಡುವ ಮಕ್ಕಳಿಗೆ ಸಂಬಂಧಿಸಿದ ಸಮಸ್ಯೆಗೆ ಅನೇಕ ಮುಖಗಳಿವೆ. ಇದಕ್ಕೆ ಸ್ಥಳೀಯ ಕಾರಣ, ಬೋಧನಾ ವಿಧಾನ, ಪಠ್ಯಕ್ರಮದಲ್ಲಿ ಸ್ಥಳೀಯ ಪರಿಸರದ ಅಂಶಗಳ ಕೊರತೆ, ಇದಕ್ಕೆ ಮೇಲಿನಿಂದ ಕೆಳಕ್ಕೆ ಹರಿದು ಬರುವ ಶೈಕ್ಷಣಿಕ ಅಭಿವೃದ್ಧಿ ಕಾರ್ಯಕ್ರಮಗಳು ಕೂಡ ಕಾರಣವಾಗಿವೆ (ಪ್ರೋಬ್, ೧೯೯೮; ವಿಮಲಾ ರಾಮಚಂದ್ರನ್, ೨೦೦೩; ಪ್ರಶಾಂತ್ ಹೆಚ್.ಡಿ. ೨೦೦೬).

ಅಧ್ಯಯನ ಮಾಡಿದ ಕ್ಷೇತ್ರಗಳಲ್ಲಿ ತುಮಕೂರು ಜಿಲ್ಲೆಯ ಕೊರಟಗೆರೆ ಪಟ್ಟಣ ಪಂಚಾಯಿತಿಯನ್ನು ಬಳ್ಳಾರಿ ಜಿಲ್ಲೆಯ ಕಮಲಾಪುರ ಪಟ್ಟಣ ಪಂಚಾಯಿತಿಯನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಕೊರಟಗೆರೆ ಪಟ್ಟಣ ಪಂಚಾಯಿತಿಯಲ್ಲಿ ೧ನೇ ತರಗತಿಯಿಂದ ೪ನೇ ತರಗತಿಯವರೆಗೂ ಇಬ್ಬರು ಗಂಡುಮಕ್ಕಳು ಶಾಲೆ ಬಿಟ್ಟಿದ್ದಾರೆ. ೫ನೇ ತರಗತಿಯಿಂದ ೭ನೇ ತರಗತಿಯವರೆಗೂ ನಾಲ್ಕು ಗಂಡುಮಕ್ಕಳು ಮತ್ತು ಏಳು ಹೆಣ್ಣುಮಕ್ಕಳು ಶಾಲೆ ಬಿಟ್ಟಿದ್ದಾರೆ. ಅದೇ ರೀತಿ ಮತ್ತೊಂದು ಕಮಲಾಪುರ ಪಟ್ಟಣ ಪಂಚಾಯಿತಿಯಲ್ಲಿ ೧ನೇ ತರಗತಿಯಿಂದ ೪ನೇ ತರಗತಿಯವರೆಗೂ ಎಂಟು ಗಂಡುಮಕ್ಕಳು ಮತ್ತು ಹದಿನೆಂಟು ಹೆಣ್ಣುಮಕ್ಕಳು ಶಾಲೆಯಿಂದ ಹೊರಗುಳಿದಿದ್ದಾರೆ. ೫ನೇ ತರಗತಿಯಿಂದ ೭ನೇ ತರಗತಿಯವರೆಗೂ ಹತ್ತೊಂಭತ್ತು ಗಂಡುಮಕ್ಕಳು ಮತ್ತು ಹತ್ತೊಂಭತ್ತು ಹೆಣ್ಣುಮಕ್ಕಳ ಶಾಲೆಬಿಟ್ಟಿದ್ದಾರೆ.

ಒಟ್ಟಾರೆಯಾಗಿ ಎರಡು ಕ್ಷೇತ್ರಗಳನ್ನು ತುಲನಾತ್ಮಕವಾಗಿ ನೋಡಿದಾಗ ಕೊರಟಗೆರೆಯಲ್ಲಿ ಒಟ್ಟು ೧ನೇ ತರಗತಿಯಿಂದ ೭ನೇ ತರಗತಿಯವರೆಗೂ ಹದಿಮೂರು ಮಕ್ಕಳು ಶಾಲೆಯಿಂದ ಹೊರಗುಳಿದಿದ್ದಾರೆ. ಇದರಲ್ಲಿ ಆರು ಗಂಡುಮಕ್ಕಳು ಮತ್ತು ಏಳು ಹೆಣ್ಣುಮಕ್ಕಳು. ಕಮಲಾಪುರ ಪಟ್ಟಣ ಪಂಚಾಯತಿಯಲ್ಲಿ ೧ನೇ ತರಗತಿಯಿಂದ ೭ನೇ ತರಗತಿಯವರೆಗೂ ಒಟ್ಟು ಅರವತ್ತುನಾಲ್ಕು ಮಕ್ಕಳು ಶಾಲೆಯಿಂದ ಹೊರಗುಳಿದಿದ್ದಾರೆ. ಇವರಲ್ಲಿ ಹೆಣ್ಣುಮಕ್ಕಳ ಸಂಖ್ಯೆ ಮೂವತ್ತೇಳು, ಗಂಡುಮಕ್ಕಳು ಸಂಖ್ಯೆ ಇಪ್ಪತ್ತೇಳು. ಇಲ್ಲಿ ಗಮನಿಸುವ ಅಂಶವೆಂದರೆ ಕೊರಟಗೆರೆ ಪಟ್ಟಣ ಪಂಚಾಯಿತಿಗಿಂತ ಕಮಲಾಪುರ ಪಟ್ಟಣ ಪಂಚಾಯಿತಿಯಲ್ಲಿ ಹೆಚ್ಚು ಮಕ್ಕಳು ಶಾಲೆಯಿಂದ ಹೊರಗುಳಿದಿದ್ದಾರೆ. ಅದರಲ್ಲೂ ಹೆಣ್ಣುಮಕ್ಕಳ ಸಂಖ್ಯೆ ಅಧಿಕವಾಗಿದೆ. ಇದನ್ನು ಈ ಕೆಳಗಿನ ಕೋಷ್ಟಕದಲ್ಲಿ ನೋಡಬಹುದು.

ಕೋಷ್ಟಕ-೬.೧೧

## ಅಧ್ಯಯನಕ್ಕೊಳಪಡಿಸಿದ ಕ್ಷೇತ್ರದಲ್ಲಿ ಶಾಲೆ ಬಿಟ್ಟ ಮಕ್ಕಳ ವಿವರಗಳು

| ತರಗತಿಗಳು | ಗಂಡು | ಹೆಣ್ಣು | ಒಟ್ಟು |
|---|---|---|---|
| ೧ ರಿಂದ ೪ನೇ ತರಗತಿ | | | |
| ಕೊರಟಗೆರೆ | ೦೨ | — | ೦೨ |
| ಕಮಲಾಪುರ | ೦೮ | ೧೮ | ೨೬ |
| ೫ ರಿಂದ ೭ನೇ ತರಗತಿ | | | |
| ಕೊರಟಗೆರೆ | ೦೪ | ೦೭ | ೧೧ |
| ಕಮಲಾಪುರ | ೧೯ | ೧೯ | ೩೮ |
| ಒಟ್ಟು | ೩೩ | ೪೪ | ೭೭ |

ಮೂಲ : ಕ್ಷೇತ್ರ ಕಾರ್ಯದ ಮಾಹಿತಿ.

### ಶಾಲೆ ಬಿಡಲು ಕಾರಣವಾದ ಅಂಶಗಳು

ಕೊರಟಗೆರೆ ಮತ್ತು ಕಮಲಾಪುರ ಪಟ್ಟಣ ಪಂಚಾಯಿತಿಯಲ್ಲಿ ಒಟ್ಟು ಎಪ್ಪತ್ತೇಳು ಮಕ್ಕಳು ಶಾಲೆ ಬಿಟ್ಟಿದ್ದಾರೆ. ಇದರಲ್ಲಿ ಕೊರಟಗೆರೆ ಪಟ್ಟಣ ಪಂಚಾಯಿತಿಗಿಂತ ಕಮಲಾಪುರದಲ್ಲಿ ಪಟ್ಟಣ ಪಂಚಾಯಿತಿಯಲ್ಲಿ ಹೆಚ್ಚು ಮಕ್ಕಳು ಶಾಲೆ ಬಿಟ್ಟಿದ್ದಾರೆ. ಇದಕ್ಕೆ ಹಲವಾರು ಕಾರಣಗಳಿವೆ. ಅವುಗಳಲ್ಲಿ ಮನೆ ಕೆಲಸಕ್ಕೆಂದು ಶೇಕಡ ೩೦.೯೫ರಷ್ಟು, ಕುಟುಂಬದ ವಲಸೆಗಾಗಿ ಎಂದು ಶೇಕಡ ೪.೭೬ರಷ್ಟು ಎಂದು ಕುಟುಂಬಗಳು ಹೇಳಿದರೆ, ಓದಲು ಆಸಕ್ತಿಯಿಲ್ಲ ಇಲ್ಲ ಶೇಕಡ ೨೦.೨೩ರಷ್ಟು ಹೇಳಿದ್ದಾರೆ. ಅದೇ ರೀತಿ ಇತರೆ ಕಾರಣಗಳೆಂದು ಶೇಕಡ ೨೬.೧೮ರಷ್ಟು ಹೇಳಿದ್ದಾರೆ. ಈ ಎಲ್ಲಾ ಕಾರಣಗಳನ್ನು ಗಮನಿಸಿದಾಗ ಪ್ರಮುಖವಾಗಿ ಮನೆಗೆಲಸ, ಸಣ್ಣಮಕ್ಕಳ ಪಾಲನೆಗಾಗಿ ಹೆಚ್ಚು ಮಕ್ಕಳು ಬಿಟ್ಟಿರುವುದು ನಮ್ಮ ಅಧ್ಯಯನ ಕ್ಷೇತ್ರದಲ್ಲಿ ಕಂಡುಬಂದಿದೆ.

ಕೋಷ್ಟಕ-೬.೧೨

## ಅಧ್ಯಯನಕ್ಕೊಳಪಡಿಸಿದ ಕ್ಷೇತ್ರದಲ್ಲಿ ಶಾಲೆ ಬಿಡಲು ಕಾರಣವಾದ ಅಂಶಗಳು

| ಕಾರಣಗಳು | ಶೇಕಡವಾರು |
|---|---|
| ಮನೆಗೆಲಸ | ೩೦.೯೫ |
| ಕುಟುಂಬದ ವಲಸೆ | ೦೪.೭೬ |
| ಓದಲು ಆಸಕ್ತಿ ಇಲ್ಲದಿರುವುದು | ೨೦.೨೩ |
| ಗ್ರಾಮದಲ್ಲಿ ಶಾಲಾ ಸೌಲಭ್ಯಗಳ ಕೊರತೆ | ೦೨.೩೮ |
| ಇತರೆ | ೨೩.೮೦ |

ಮೂಲ : ಕ್ಷೇತ್ರ ಕಾರ್ಯದ ಮಾಹಿತಿ.

ಇದನ್ನು ತಡೆಗಟ್ಟುವ ಕಾರ್ಯಯೋಜನೆಯೂ ಕೂಡ ಬಹುರೂಪಿಯಾಗಿರಬೇಕಾಗುತ್ತದೆ. ಆದರೆ ಸರ್ಕಾರವು ಶಾಲಾ ಸೌಲಭ್ಯಗಳನ್ನು ಅಧಿಕಗೊಳಿಸುವುದರ ಮತ್ತು ಅದನ್ನು ಉತ್ತಮಪಡಿಸುವುದರ ಮೂಲಕ ಸಮಸ್ಯೆಯನ್ನು ತಡೆಗಟ್ಟಬಹುದೆಂದು ತಿಳಿದಿರುವಂತಿದೆ. ಆದರೆ ಅವಕಾಶಗಳನ್ನು ಒಂದು ಕಡೆ ವಿಸ್ತರಿಸಿದಂತೆ ಇನ್ನೊಂದು ಕಡೆ ಅವುಗಳನ್ನು ಧಾರಣೆ ಮಾಡಿಕೊಳ್ಳಲು ಅವಶ್ಯಕವಾದ ಜನರ ಸಾಮರ್ಥ್ಯವನ್ನು ಉತ್ತಮಪಡಿಸಬೇಕಾಗುತ್ತದೆ. ದಲಿತರು ಹಾಗೂ ಹಿಂದುಳಿದ ವರ್ಗಗಳ ವಿಷಯದಲ್ಲಿ ಇದು ಬಹಳ ಮುಖ್ಯವಾಗಿದೆ. ಈ ಕುರಿತು ಹೆಚ್ಚಿನ ಚರ್ಚೆ ಹಾಗೂ ಹೆಚ್ಚು ಗಂಭೀರವಾದ ಸಂಶೋಧನೆಗಳನ್ನು ನಡೆಸಲು ಕ್ರಮ ಕೈಗೊಳ್ಳಬೇಕಾಗಿದೆ.

## ಆಕರಗ್ರಂಥಗಳು

ಅನ್ನಪೂರ್ಣೇಶ್ವರಿ, (೨೦೦೨), ಮಹಿಳಾ ಮತ್ತು ಅಭಿವೃದ್ಧಿ, ಮಾನವ ಅಭಿವೃದ್ಧಿಗಳ ಅಧ್ಯಯನ ಕೇಂದ್ರ, ರಾಮಕೃಷ್ಣ ನಗರ, ಮೈಸೂರು.

ಕರ್ನಾಟಕದ ಮಾನವ ಅಭಿವೃದ್ಧಿ ವರದಿ., (೨೦೦೫), ಯೋಜನಾ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು.

ಚಂದ್ರಶೇಖರ್ ಟಿ.ಆರ್., (೧೯೯೯), ಅಮರ್ತ್ಯಸೇನ್ ಅಭಿವೃದ್ಧಿ ಅಧ್ಯಯನಗಳು, ಕ್ರೈಸ್ಟ್ ಕಾಲೇಜ್, ಬೆಂಗಳೂರು.

ಚಂದ್ರಶೇಖರ್ ಟಿ.ಆರ್., (೨೦೦೩), ಕರ್ನಾಟಕ ಅಭಿವೃದ್ಧಿಯ ಸಾಮಾಜಿಕ ನೆಲೆಗಳು, ಸಿ.ವಿ.ಜಿ. ಪ್ರಕಾಶನ, ಬೆಂಗಳೂರು.

ಜನಾರ್ದನ್, (೨೦೦೩), ಕರ್ನಾಟಕ ತಾಲ್ಲೂಕುವಾರು ಜನಸಂಖ್ಯೆ ಅಕ್ಷರಸ್ಥರು ಮತ್ತು ಸಾಕ್ಷರತೆ ೨೦೦೧, ಅಭಿವೃದ್ಧಿ ಅಧ್ಯಯನ ಪತ್ರಿಕೆ, ಸಂಪುಟ ೨ ಸಂಚಿಕೆ ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಡಿಸ್ಟ್ರಿಕ್ಟ್ ಪಾಪುಲೇಶನ್ ಬುಕ್‌ಲೇಟ್-೨೦೦೧ ತುಮಕೂರು, ಜಿಲ್ಲಾ ಅಂಕಿ-ಅಂಶಗಳ ಸಂಗ್ರಹಣಾಧಿಕಾರಿಗಳ ಕಚೇರಿ, ಬೆಂಗಳೂರು.

ನರಸಿಂಹಾಚಾರ್, (೨೦೦೬), ಉದಯೋನ್ಮುಖ ಭಾರತದಲ್ಲಿ ಶಿಕ್ಷಣ, ಭಾರತಿ ಪ್ರಕಾಶನ, ಸರಸ್ವತಿಪುರಂ, ಮೈಸೂರು.

ಪ್ರಶಾಂತ್ ಎಚ್.ಡಿ., (೨೦೦೫), ಈಶಾನ್ಯ ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣ ಮತ್ತು ಸಮಾಜ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಪ್ರಶಾಂತ್ ಎಚ್.ಡಿ., (೨೦೦೬), ಹೆಣ್ಣುಮಕ್ಕಳ ಶಿಕ್ಷಣ : ಒಂದು ಸ್ಥೂಲನೋಟ, ಅಭಿವದ್ಧಿ ಅಧ್ಯಯನ ಪತ್ರಿಕೆ, ಸಂಪುಟ ೫, ಸಂಚಿಕೆ ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಪ್ರೋಬ್, (೧೯೯೮), ಪಬ್ಲಿಕ್ ರಿಪೋರ್ಟ್ ಆನ್ ಬೆಸಿಕ್ ಎಜ್ಯುಕೇಷನ್ ಇನ್ ಇಂಡಿಯಾ, ಆಕ್ಸ್‌ಫರ್ಡ್ ಯುನಿವರ್ಸಿಟಿ, ನ್ಯೂಡೆಲ್ಲಿ.

ರಾಮಚಂದ್ರನ್ ವಿಮಲಾ, (೨೦೦೩ ಬಿ.), ಗೇಟಿಂಗ್ ಚಿಲ್ಡ್ರನ್ ಬ್ಯಾಕ್ ಟು ಸ್ಕೂಲ್ : ಕೇಸ್ ಸ್ಟಡಿ ಇನ್ ಪ್ರೈಮರಿ ಎಜ್ಯುಕೇಷನ್, ಸೇಜ್ ಪಬ್ಲಿಕೇಷನ್, ನ್ಯೂಡೆಲ್ಲಿ.

ಸೆನ್ಸಸ್ ಆಫ್ ಇಂಡಿಯಾ, (೨೦೦೧), ಪ್ರೈಮರಿ ಸೆನ್ಸಸ್ ಅಬ್‌ಸ್ಟ್ರಾಕ್ ಕರ್ನಾಟಕ, ಡೈರೆಕ್ಟರ್ ಜನರಲ್ ಪಾಪುಲೇಶನ್, ಡೈರಕ್ಟರೇಟ್ ಆಫ್ ಸೆನ್ಸಸ್ ಆಪರೇಶನ್, ಬೆಂಗಳೂರು.

• • •

# ಅಧ್ಯಾಯ ಏಳು

# ಶಾಲಾ ಶಿಕ್ಷಣದ ಸಾರ್ವತ್ರೀಕರಣಕ್ಕೆ ಸರ್ಕಾರಗಳು ಜಾರಿಗೊಳಿಸಿದ ಕಾರ್ಯಕ್ರಮಗಳು

೨೦೦೧ನೇ ಜನಗಣತಿ ಪ್ರಕಾರ ಭಾರತದ ಜನಸಂಖ್ಯೆಯಲ್ಲಿ ಅರ್ಧದಷ್ಟು ಮಹಿಳೆಯರಿದ್ದು, ದೇಶದ ಒಟ್ಟು ಜನಸಂಖ್ಯೆಯಲ್ಲಿ ಶೇಕಡ ೪೮ರಷ್ಟು ಮಹಿಳೆಯರು ಕಂಡುಬರುತ್ತಾರೆ. ಸ್ವಾತಂತ್ರ್ಯನಂತರ ಭಾರತದ ಶಿಕ್ಷಣ ನೀತಿಯ ಮುಖ್ಯ ಉದ್ದೇಶ ಲಿಂಗ ಸಮಾನತೆ ಸಾಧಿಸುವುದು ಮತ್ತು ಮಹಿಳೆಯರ ಹಕ್ಕುಗಳನ್ನು ರಕ್ಷಿಸುವುದಾಗಿರುತ್ತದೆ. ಇದಕ್ಕೆ ಸಮಾನ ಶಿಕ್ಷಣವು ಅಗತ್ಯವಾಗಿದೆ. ನಮ್ಮ ಸಂವಿಧಾನವು ಮಹಿಳೆಯರನ್ನು ಪುರುಷರೊಂದಿಗೆ ಸಮಾನ ಅವಕಾಶಗಳನ್ನು ಒದಗಿಸುವುದಕ್ಕಾಗಿ ಹಲವಾರು ಲಿಖಿತ ವಿಧಿಗಳನ್ನು ಜಾರಿಗೊಳಿಸಿದೆ. ಆದರೆ ಮಹಿಳೆಯರು, ದೇಶವು ಸ್ವತಂತ್ರಗೊಂಡು ೬೦ ವರ್ಷ ದಾಟಿದರೂ ಬಹುಸಂಖ್ಯಾತ ಮಹಿಳೆಯರು ಶಿಕ್ಷಣದಿಂದ ವಂಚಿತರಾಗಿದ್ದಾರೆ. ಇದಕ್ಕೆ ಪ್ರಮುಖ ಕಾರಣಗಳು ಬಡತನ, ಸಾಮಾಜಿಕ ಮತ್ತು ಆರ್ಥಿಕ ಅಂಶಗಳು, ಮೂಢನಂಬಿಕೆಗಳು ಮತ್ತು ಹೆಣ್ಣುಮಕ್ಕಳ ಬಗ್ಗೆ ಪೋಷಕರಿಗೆ ಇರುವ ಮನೋಭಾವ ಇತ್ಯಾದಿ. ಇತ್ತೀಚಿನ ವರ್ಷಗಳಲ್ಲಿ ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ಮಹಿಳೆಯರ ಶಿಕ್ಷಣಕ್ಕೆ ಹೆಚ್ಚಿನ ಮಹತ್ವ ದೊರಕುತ್ತಿದೆ. ಈ ಹಿನ್ನೆಲೆಯಲ್ಲಿ ಸರ್ಕಾರಗಳು ಶಿಕ್ಷಣದ ಸಾರ್ವತ್ರೀಕರಣಕ್ಕಾಗಿ ಹಲವಾರು ಯೋಜನೆಗಳನ್ನು ಜಾರಿಗೆ ತಂದಿವೆ. ಅವುಗಳನ್ನು ಇಲ್ಲಿ ಚರ್ಚಿಸಲಾಗಿದೆ.

### ೬.೧. ಜಿಲ್ಲಾ ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮ (ಡಿ.ಪಿ.ಇ.ಪಿ)

೧೯೮೬ರಲ್ಲಿ ಕೇಂದ್ರಿಯ ಶಿಕ್ಷಣ ಸಲಹಾ ಮಂಡಳಿಯು ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯನ್ನು ಪುನರ್ ವಿಮರ್ಶಿಸಿ, ಪ್ರಾಥಮಿಕ ಶಿಕ್ಷಣದ ಬೆಳವಣಿಗೆಗೆ ಜಿಲ್ಲಾ ಮಟ್ಟದಲ್ಲಿ ಗಮನ ಕೇಂದ್ರೀಕರಿಸಿ ಸಮನ್ವಯ ಕ್ರಮ ಕೈಗೊಳ್ಳುವ ಅಗತ್ಯವನ್ನು ಒತ್ತಿ ಹೇಳಿತು. ಇದರ ಪರಿಣಾಮವೇ ಜಿಲ್ಲಾ ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮ. ಇದು ಪ್ರಾಥಮಿಕ ಶಾಲೆಗಳಲ್ಲಿ ದಾಖಲಾತಿ, ಉಳಿಕೆ ಮತ್ತು ಗುಣಮಟ್ಟ ಹೆಚ್ಚಿಸಲು ಕೇಂದ್ರ ಸರ್ಕಾರವು ಕೈಗೊಂಡ ಅತ್ಯಂತ ತೀವ್ರ ತರದ ಪ್ರಯತ್ನ ವಾಗಿದೆ. ಈ ಕಾರ್ಯಕ್ರಮವು ಹೆಣ್ಣುಮಕ್ಕಳ ಸಾಕ್ಷರತೆಯು ಪುರುಷರ ಸಾಕ್ಷರತೆಯ ಸರಾಸರಿಗಿಂತ ಕಡಿಮೆ ಇರುವ ಜಿಲ್ಲೆಗಳಲ್ಲಿ ಹಣತೊಡಗಿಸುವ ಗುರಿ ಹೊಂದಿದ್ದು, ಜೊತೆಗೆ ಜನತೆಯ ಸಹಭಾಗಿತ್ವ ಉತ್ತೇಜಿಸುವುದಕ್ಕಾಗಿ ಯೋಜನೆಗಳನ್ನು ಜಿಲ್ಲಾ ಮಟ್ಟಕ್ಕೆ ವಿಕೇಂದ್ರಿಕರಿಸಲಾಯಿತು.

ಡಿ.ಪಿ.ಇ.ಪಿ. ಯೋಜನೆಯು ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣಕ್ಕೆ ವಿಶೇಷ ಮಹತ್ವ ನೀಡುವುದಕ್ಕಾಗಿ ಕೇಂದ್ರ ಸರ್ಕಾರ ಪ್ರಾಯೋಜಿಸಿದ ಯೋಜನೆಯಾಗಿದೆ. ಹೆಣ್ಣುಮಕ್ಕಳ ಮತ್ತು ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗದ ಮಕ್ಕಳ ಶಿಕ್ಷಣಕ್ಕಾಗಿ ಸೌಲಭ್ಯಗಳು ಇತ್ಯಾದಿಗಳಿಗಾಗಿ ಮಾಡಿರುವ ಹೆಚ್ಚುವರಿ ಅನುಕೂಲತೆಗಳನ್ನು ಒದಗಿಸಲು ಈ ಕಾರ್ಯಕ್ರಮ ಜಾರಿಯಲ್ಲಿದೆ.

ಡಿ.ಪಿ.ಇ.ಪಿ.ಯು ಮೊದಲ ಹಂತದಲ್ಲಿ ಬಂದ ಜಿಲ್ಲೆಗಳಲ್ಲಿ ಹೆಣ್ಣುಮಕ್ಕಳ ಶಾಲಾ ಭಾಗವಹಿಸುವಿಕೆಯು ಅಗಾಧ ಪ್ರಮಾಣದಲ್ಲಿ ಪ್ರಗತಿ ಕಂಡಿದೆ (ಅಗರ್‌ವಾಲ್, ೨೦೦೦). ೧೯೯೫-೯೬ರಲ್ಲಿ ಶೇಕಡ ೪೫.೫೫ರಷ್ಟಿದ್ದ ಹೆಣ್ಣುಮಕ್ಕಳ ಶಾಲಾ ದಾಖಲಾತಿ ಪ್ರಮಾಣವು ೧೯೯೯-೨೦೦೦ ಅವಧಿಗೆ ಶೇಕಡ ೬೭.೮೪ಕ್ಕೆ ಹೆಚ್ಚಳಗೊಂಡಿತು. ಮೊದಲ ಹಂತದಲ್ಲಿ ಈ ಕಾರ್ಯಕ್ರಮ ಜಾರಿಗೆ ಬಂದ ೪೨ ಜಿಲ್ಲೆಗಳಲ್ಲಿ ಸುಮಾರು ೨೧ ಜಿಲ್ಲೆಗಳಲ್ಲಿ ಲಿಂಗ-ಸಂಬಂಧಿ ಸೂಚಕವು ೯೫ಕ್ಕೆ ಹೆಚ್ಚಳಗೊಂಡಿತು. ಇನ್ನು ಉಳಿದ ೧೬ ಜಿಲ್ಲೆಗಳಲ್ಲಿನ ಲಿಂಗಸಂಬಂಧಿ ಸೂಚಕವು ೮೫ ರಿಂದ ೯೫ರ ನಡುವೆ ಇರುವುದು ತಿಳಿದುಬರುತ್ತದೆ. ವಿಶೇಷವೆಂದರೆ, ಮಧ್ಯಪ್ರದೇಶದ ಐದು ಜಿಲ್ಲೆಗಳಾದ ಗುನ, ತಿಕ್ಮಗರ್, ಸಿದ್ಧಿ, ಧಾವ್ ಮತ್ತು ರಾಜ್‌ಘುಡಗಳ ಗಂಡುಮಕ್ಕಳು ಮತ್ತು ಹೆಣ್ಣುಮಕ್ಕಳ ಶಾಲಾ ಭಾಗವಹಿಸುವಿಕೆಯ ಅಂತರವನ್ನು ಕಡಿಮೆಗೊಳಿಸಲು ವಿಶೇಷ ಪ್ರಯತ್ನಗಳನ್ನು ಮಾಡಲಾಗಿದೆ. ಶೈಕ್ಷಣಿಕವಾಗಿ ಹಿಂದುಳಿದ ಹಾಗೂ ಬುಡಕಟ್ಟು ಜನರೇ ಹೆಚ್ಚಾಗಿರುವ ಜಿಲ್ಲೆಗಳಲ್ಲಿ ಲಿಂಗ-ಸಂಬಂಧಿ ಅಸಮಾನತೆಯನ್ನು ಹೋಗಲಾಡಿಸಲು ಪರ್ಯಾಯ ಶಾಲಾ ವ್ಯವಸ್ಥೆಯನ್ನು ರೂಪಿಸಿ ಜಾರಿಗೆ ತರಲಾಗಿದೆ. ಮಹಿಳೆಯರ ಸಾಕ್ಷರತೆ ಕಡಿಮೆ ಇರುವ ಜಿಲ್ಲೆಗಳಲ್ಲಿ, ಲಿಂಗಸಂಬಂಧಿ ಅಸಮಾನತೆ ಹೋಗಲಾಡಿಸುವ ದೃಷ್ಟಿಯಿಂದ ಅನೇಕ ಶೈಕ್ಷಣಿಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಡಿ.ಪಿ.ಇ.ಪಿ. ಯೋಜನೆಯ ಮೂಲಕ ಜಿಲ್ಲೆಗಳಲ್ಲಿ ಜಾರಿಗೆ ತರಲಾಯಿತು. ಇದರ ಫಲವಾಗಿ ಮಹಿಳಾ ಸಾಕ್ಷರತೆಯಲ್ಲಿ ಸ್ವಲ್ಪಮಟ್ಟಿನ ಪ್ರಗತಿ ಕಂಡುಬಂದಿದೆ.

ಡಿ.ಪಿ.ಇ.ಪಿ. ಯೋಜನೆಯ ಪ್ರಮುಖ ಗುರಿ, ಈ ಯೋಜನೆಯ ಅವಧಿ ಮುಗಿಯುವ ವೇಳೆಗೆ, ವಿವಿಧ ಸಾಮಾಜಿಕ ಗುಂಪುಗಳ ನಡುವೆ ಹಾಗೂ ಲಿಂಗ-ಸಂಬಂಧಿ ಶೈಕ್ಷಣಿಕ ಅಸಮಾನತೆಯನ್ನು ಶೇಕಡ ಮೂರಕ್ಕಿಂತ ಕಡಿಮೆ ಮಾಡುವುದಾಗಿತ್ತು. ಆದರೂ, ಈ ಯೋಜನೆಯ ಅನುಭವದಿಂದ ಹೆಣ್ಣುಮಕ್ಕಳಲ್ಲಿ ಶಾಲಾ ಭಾಗವಹಿಸುವಿಕೆಯನ್ನು ಹಾಗೂ ಶಾಲೆಯನ್ನು ಮಧ್ಯದಲ್ಲಿಯೇ ಬಿಡದಂತೆ ಹೆಣ್ಣುಮಕ್ಕಳಲ್ಲಿ ಶೇಕಡ ೧೦೦ ರಷ್ಟು ಶೈಕ್ಷಣಿಕ ಭಾಗವಹಿಸುವಿಕೆಯನ್ನು ಹೆಚ್ಚಿಸಲು, ಸಾಮಾಜಿಕವಾಗಿ, ಆರ್ಥಿಕವಾಗಿ ಸಾಕಷ್ಟು ಕೊರತೆಗಳು ಇವೆ. ಅವುಗಳನ್ನು ಎದುರಿಸಲು ಇನ್ನೂ ಸಾಕಷ್ಟು ಪ್ರಯತ್ನಗಳನ್ನು ಮಾಡಲು ಕ್ರಮ ಕೈಗೊಳ್ಳಬೇಕಾಗಿದೆ ಎಂಬುದು ತಿಳಿದುಬಂದಿತು. ಡಿ.ಪಿ.ಇ.ಪಿ. ಅನುಭವ ಆಧಾರ ದಲ್ಲಿ, ಶೈಕ್ಷಣಿಕ ಕ್ಷೇತ್ರದಲ್ಲಿ ತೊಡಕುಗಳನ್ನು ಕುರಿತು ಅನೇಕ ಸಂಶೋಧನೆಗಳು ನಡೆಸಿ, ಹೆಣ್ಣುಮಕ್ಕಳ ಶೈಕ್ಷಣಿಕ ಪ್ರಗತಿಗೆ ತೊಡಕಾಗಿರುವ ಸಮಸ್ಯೆಗಳಿಗೆ ಕಾರ್ಯಕಾರಣ ಸಂಬಂಧಗಳನ್ನು ಗುರುತಿಸುವ ಪ್ರಯತ್ನವನ್ನು ಮಾಡಲಾಯಿತು.

ಈ ಹಿನ್ನೆಲೆಯಲ್ಲಿ ಸಣ್ಣ-ಸಣ್ಣ ಜನವಸತಿ ನೆಲೆ ಹಾಗೂ ಜನವಸತಿ ಸ್ಥಳಗಳಿಗೆ, ಅದರಲ್ಲಿಯೂ ಪರಿಶಿಷ್ಟ ಜನವರ್ಗದ ಜನಸಮುದಾಯಕ್ಕೆ ಸೇರಿದ ಜನರು ಹೆಚ್ಚಾಗಿರುವ ಸ್ಥಳಗಳಿಗೆ ಶೈಕ್ಷಣಿಕ ಮೂಲ ಸೌಲಭ್ಯಗಳನ್ನು ವಿಸ್ತರಿಸುವ ಮೂಲಕ, ಆ ಜನಸಮುದಾಯಕ್ಕೆ ಸೇರಿದ ಹೆಣ್ಣು ಮಕ್ಕಳ ಶಾಲಾ ಭಾಗವಹಿಸುವಿಕೆಗೆ ಹೆಚ್ಚಿನ ಸೌಲಭ್ಯ ಒದಗಿಸಲಾಯಿತು. ಹಾಗೆಯೇ, ಬಾಲಕಾರ್ಮಿಕರಾಗಿ ದುಡಿಯುತ್ತಿರುವ ಮಕ್ಕಳಿಗೆ, ದೈಹಿಕ ಅಸಹಾಯಕ ಮಕ್ಕಳಿಗೆ, ವಿಶೇಷ ಯೋಜನೆ ರೂಪಿಸಲಾಯಿತು. ಇದರ ಜೊತೆ ಜೊತೆಗೆ ಸ್ಥಳೀಯ ಪರಿಸರಕ್ಕೆ ಅನುಗುಣವಾಗುವ ಪಠ್ಯಕ್ರಮ ಹಾಗೂ ಶಿಕ್ಷಕರಿಗೆ ತರಬೇತಿಗಳನ್ನು ಆಚರಣೆಗೆ ತರುವ ಪ್ರಯತ್ನದ ಮೂಲಕ ಶಾಲಾ ಶಿಕ್ಷಣಕ್ಕೆ ಬಂದ ಮೊದಲ ತಲೆಮಾರಿನ ಕುಟುಂಬದ ಸದಸ್ಯರಿಗೆ ಶೈಕ್ಷಣಿಕ ಆಸಕ್ತಿ ಹೆಚ್ಚಿಸುವ ಪ್ರಯತ್ನ ಮಾಡಲಾಯಿತು. ಈ ತಲೆಮಾರಿಗೆ ಸೇರಿದ ಜನರ ಜೊತೆ ಶೈಕ್ಷಣಿಕ ಸಂವಾದಗಳನ್ನು ನಡೆಸುವ ಮೂಲಕ ಶಾಲೆ ಮತ್ತು ಸ್ಥಳೀಯ ಸಮುದಾಯದ ನಡುವೆ ಆಗಿಂದಾಗ್ಗೆ ಸಭೆಗಳನ್ನು ನಡೆಸಲು ಗ್ರಾಮ ಶಿಕ್ಷಣ ಸಮಿತಿ, ಮಹಿಳಾ ಸಂಘಗಳು ಮತ್ತು ಇತರ ಸಮುದಾಯ ಆಧಾರಿತ ಸಂಘ-ಸಂಸ್ಥೆಗಳನ್ನು ಸ್ಥಾಪಿಸಲಾಯಿತು. ಒಟ್ಟಾರೆ ಶೈಕ್ಷಣಿಕ ಅಭಿವೃದ್ಧಿ, ನಿರ್ದಿಷ್ಟವಾಗಿ ಹೆಣ್ಣುಮಕ್ಕಳ ಶೈಕ್ಷಣಿಕ ಅಭಿವೃದ್ಧಿಗೆ ಈ ಮೇಲಿನ ಸಂಸ್ಥೆಗಳನ್ನು ಅಭಿವೃದ್ಧಿ ಪಡಿಸುವ ಅವಶ್ಯಕತೆಯನ್ನು ಡಿ.ಪಿ.ಇ.ಪಿ.ಯ ಅನುಭವಗಳು ಸೂಚಿಸಿದವು. ಅಂದರೆ ಸಮುದಾಯ ಪ್ರಾತಿನಿಧಿಕ ಸಂಸ್ಥೆಗಳನ್ನು ಅಭಿವೃದ್ಧಿಪಡಿಸಲು ತೀರ್ಮಾನಿಸಲಾಯಿತು.

ಡಿ.ಪಿ.ಇ.ಪಿ. ಕುರಿತು ಶ್ರೀವಾಸ್ತವ (೧೯೯೭), ಅವರು ನಡೆಸಿರುವ ಅಧ್ಯಯನದ ಪ್ರಕಾರ, ಈ ಯೋಜನೆಯು ಮೊದಲ ಹಂತದಲ್ಲಿ ಜಾರಿಗೆ ಬಂದ ೪೦ ಜಿಲ್ಲೆಗಳಲ್ಲಿ ಲಿಂಗ-ಸಂಬಂಧಿ ಅಸಮಾನತೆ, ಇತರ ಸಾಮಾನ್ಯ ಶೈಕ್ಷಣಿಕ ಅಸಮಾನತೆ ಸ್ವಲ್ಪಮಟ್ಟಿಗೆ ಕಡಿಮೆಯಾಗಿದೆ. ೨೪ ಜಿಲ್ಲೆಗಳಲ್ಲಿ ಹೆಣ್ಣುಮಕ್ಕಳಿಗೆ ಸಂಬಂಧಿಸಿದಂತೆ ಕಲಿಕಾ ಸಾಮರ್ಥ್ಯದ ಪ್ರಮಾಣವು ಗಂಡುಮಕ್ಕಳ ಜೊತೆಗೆ ತುಲನೆ ಮಾಡಿದಾಗ ಕಲಿಕಾ ಸಹ ಸಾಮರ್ಥ್ಯದಲ್ಲಿನ ವ್ಯತ್ಯಾಸಗಳು ಮೂರು ಅಂಶಗಳಿಗಿಂತ ಕಡಿಮೆ ಇರುವುದು ತಿಳಿದುಬರುತ್ತದೆ. ಆದರೆ ೧೪ ಜಿಲ್ಲೆಗಳಲ್ಲಿ ಹೆಣ್ಣುಮಕ್ಕಳ ಶಾಲಾ ಭಾಗವಹಿಸುವಿಕೆ ಹಾಗೂ ಕಲಿಕಾ ಸಾಮರ್ಥ್ಯವು ಗಂಡುಮಕ್ಕಳಿಗಿಂತ ಬಹಳ ಕಡಿಮೆ ಇದೆ. ಈ ೧೪ರಲ್ಲಿ ೧೦ ಜಿಲ್ಲೆಗಳು ಮಧ್ಯಪ್ರದೇಶದಲ್ಲಿಯೇ ಇವೆ ಎಂದು ಗುರುತಿಸಿದ್ದಾರೆ. ಇದರ ಜೊತೆಗೆ ರೈಸಿನ್ ಮತ್ತು ರೇವಾ ಈ ಜಿಲ್ಲೆಗಳಲ್ಲಿ, ಹೆಣ್ಣುಮಕ್ಕಳ ಕಲಿಕಾ ಸಾಮರ್ಥ್ಯವು ಗಂಡುಮಕ್ಕಳಿಗಿಂತ ಹೆಚ್ಚಾಗಿರುವುದನ್ನು ಅಧ್ಯಯನಕಾರರು ತಿಳಿಸಿದ್ದಾರೆ. ಈ ಯೋಜನೆ ಜಾರಿಗೆ ಬಂದ ೪೦ ಜಿಲ್ಲೆಗಳಲ್ಲಿ ಶಾಲೆ ಬಿಡುವ ಮಕ್ಕಳ ಬಗ್ಗೆ ಅಧ್ಯಯನ ನಡೆಸಿರುವ ಶ್ರೀವಾಸ್ತವ ಅವರು, ೨೫ ಜಿಲ್ಲೆಗಳಲ್ಲಿ ಗಂಡು ಮಕ್ಕಳಿಗಿಂತ ಹೆಣ್ಣು ಮಕ್ಕಳಲ್ಲಿ ಶಾಲೆ ಬಿಡುವ ಮಕ್ಕಳ ಪ್ರಮಾಣ ಹೆಚ್ಚಾಗಿದ್ದರೆ, ಐದು ಜಿಲ್ಲೆಗಳಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಸಮಾನವಾಗಿದ್ದರೆ, ಹತ್ತು ಜಿಲ್ಲೆಗಳಲ್ಲಿ ಗಂಡುಮಕ್ಕಳಿಗಿಂತ ಹೆಣ್ಣುಮಕ್ಕಳಲ್ಲಿ ಶಾಲೆ ಬಿಡುವ ಪ್ರಮಾಣ ಕಡಿಮೆ ಇರುವುದು ತಿಳಿದುಬರುತ್ತದೆ. ಒಟ್ಟು ೪೦ ಜಿಲ್ಲೆಗಳ ಪೈಕಿ ಕೇವಲ ೧೧ ಜಿಲ್ಲೆಗಳಲ್ಲಿ ಮಾತ್ರ ಹೆಣ್ಣುಮಕ್ಕಳಲ್ಲಿ ಶಾಲೆಯನ್ನು ಮಧ್ಯದಲ್ಲಿ ಬಿಡುವ ಪ್ರಮಾಣವು ಶೇಕಡ ೫.೦ ಅಥವಾ ಅದಕ್ಕಿಂತಲೂ ಹೆಚ್ಚಾಗಿರುವುದನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ.

ಡಿ.ಪಿ.ಇ.ಪಿ. ಯೋಜನೆ ಮೊದಲ ಹಂತದಲ್ಲಿ ಜಾರಿಗೆ ಬಂದ ಜಿಲ್ಲೆಗಳಲ್ಲಿ ೧೯೯೭ರಲ್ಲಿ ಎನ್.ಸಿ.ಇ.ಆರ್.ಟಿ ಇವರು ನಡೆಸಿದ ಮಧ್ಯಂತರ ಕಲಿಕಾ ಪರಿಶೀಲನಾ ಸಮೀಕ್ಷೆಯು ಸೂಚಿಸುವಂತೆ, ಭಾಷೆಯ ಹಾಗೂ ಗಣಿತದ ಕಲಿಕೆಯಲ್ಲಿ ಸಾಕಷ್ಟು ಪ್ರಗತಿಯಾಗಿರುವುದು ತಿಳಿಯುತ್ತದೆ. ಹಾಗೆಯೇ ಈ ಕ್ಷೇತ್ರಗಳಲ್ಲಿ ಇನ್ನೂ ಅನೇಕ ಪ್ರಯತ್ನ ಮಾಡಬೇಕಾಗಿರುವುದನ್ನು ಈ ಸಮೀಕ್ಷೆ ಸೂಚಿಸುತ್ತದೆ. ಡಿ.ಪಿ.ಇ.ಪಿ. ಯೋಜನೆಯ ಪ್ರಮುಖ ಗುರಿ ಲಿಂಗ-ಸಂಬಂಧಿ ಅಂತರವನ್ನು ಕನಿಷ್ಠಮಟ್ಟಕ್ಕೆ ಇಳಿಸಬೇಕು ಎನ್ನುವುದರಲ್ಲಿ ಸಾಕಷ್ಟು ಪ್ರಮಾಣದಲ್ಲಿ ಕಡಿಮೆಯಾಗಿದ್ದು ಅದು ೪೪ ಅಂಕಗಳನ್ನು ತಲುಪಿದೆ. ಆದರೆ ಈ ವಿಷಯದಲ್ಲಿ ವಿವಿಧ ಸಾಮಾಜಿಕ ಗುಂಪುಗಳಿಗೆ ಪರಿಣಾಮಕಾರಿಯಾದ ಪ್ರೇರಣಾತ್ಮಕ ಅಂಶಗಳು ಕಂಡುಬರುತ್ತಿಲ್ಲವೆಂದು ಈ ಸಮೀಕ್ಷೆ ತಿಳಿಸುತ್ತದೆ.

ಹೆಣ್ಣುಮಕ್ಕಳ ಶಾಲಾ ಶೈಕ್ಷಣಿಕ ಭಾಗವಹಿಸುವಿಕೆಯನ್ನು ಹೆಚ್ಚಿಸಿ, ಸಾಮಾಜಿಕ ಅಭಿವೃದ್ಧಿಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ದೇಶದ ವಿವಿಧ ರಾಜ್ಯಗಳಲ್ಲಿ ವಿಭಿನ್ನ ಮಾದರಿಯ ಶೈಕ್ಷಣಿಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ರೂಪಿಸಿ ಜಾರಿಗೆತರಲಾಗಿದೆ. ಅವುಗಳಲ್ಲಿ ಕೆಲವು ಪ್ರಮುಖವಾದವುಗಳನ್ನು ಮಾತ್ರ ಇಲ್ಲಿ ದಾಖಲಿಸಲು ಪ್ರಯತ್ನ ಮಾಡಲಾಗಿದೆ.

ಕರ್ನಾಟಕದಲ್ಲಿ ಮೊದಲ ಬಾರಿಗೆ ನಾಲ್ಕು ಜಿಲ್ಲೆಗಳಾದ ಕೋಲಾರ, ಮಂಡ್ಯ, ರಾಯಚೂರು ಮತ್ತು ಬೆಳಗಾವಿಯಲ್ಲಿ ೧೯೯೪ರ ಜನವರಿ ೨೬ರಂದು ಡಿ.ಪಿ.ಇ.ಪಿ. ಕಾರ್ಯಕ್ರಮ ಔಪಚಾರಿಕವಾಗಿ ಆರಂಭವಾಯಿತು. ಅಲ್ಲಿಂದ ಮುಂದೆ, ೧೯೯೬-೯೭ರಲ್ಲಿ ಇನ್ನು ಏಳು ಜಿಲ್ಲೆಗಳಿಗೆ ವಿಸ್ತರಿಸಲಾಯಿತು. ಆ ಜಿಲ್ಲೆಗಳು ಯಾವುವೆಂದರೆ, ಬೆಂಗಳೂರು, ಬೀದರ್, ಬಳ್ಳಾರಿ, ಧಾರವಾಡ, ಗುಲ್ಬರ್ಗಾ ಮತ್ತು ಮೈಸೂರು ಒಟ್ಟು ೧೬ ಜಿಲ್ಲೆಗಳಲ್ಲಿ ಡಿ.ಪಿ.ಇ.ಪಿ. ಕಾರ್ಯಕ್ರಮ ಅನುಷ್ಠಾನಕ್ಕೆ ಬಂದಿತು. ಕರ್ನಾಟಕದಲ್ಲಿ ಡಿ.ಪಿ.ಇ.ಪಿ. ಯೋಜನೆಯು ಅತಿಕಡಿಮೆ ಪ್ರಮಾಣದ ಹೆಣ್ಣುಮಕ್ಕಳ ಸಾಕ್ಷರತೆಯ ಆಧಾರದ ಮೇಲೆ ಜಿಲ್ಲೆಗಳನ್ನು ಆಯ್ಕೆ ಮಾಡಲಾಯಿತು. ಕಡಿಮೆ ಮಟ್ಟದ ಮಹಿಳಾ ಸಾಕ್ಷರತೆಯಲ್ಲದೆ, ಎರಡನೆಯ ಹಂತದ ಜಿಲ್ಲೆಗಳಲ್ಲಿ ಶಿಶುಮರಣದ ದರ ಹಾಗೂ ತಾಯಿಯರ ಮರಣ ದರಗಳನ್ನು ಹೆಚ್ಚಾಗಿರುವುದು ಲಿಂಗ ಪ್ರಮಾಣದಲ್ಲಿ ಹೆಚ್ಚಿನ ವೈಪರೀತ್ಯ ಹಾಗೂ ಅತಿಕಡಿಮೆ ತಲಾ ಆದಾಯಗಳೂ ಕಂಡುಬಂದವು. ಡಿ.ಪಿ.ಇ.ಪಿ. ಯೋಜನೆಯ ಪ್ರಮುಖ ಗುರಿ, ಈ ಯೋಜನೆಯ ಅವಧಿ ಮುಗಿಯುವ ವೇಳೆಗೆ, ವಿವಿಧ ಸಾಮಾಜಿಕ ಗುಂಪುಗಳ ನಡುವೆ ಹಾಗೂ ಲಿಂಗ-ಸಂಬಂಧಿ ಶೈಕ್ಷಣಿಕ ಅಸಮಾನತೆಯನ್ನು ಶೇಕಡ ೫ಕ್ಕಿಂತ ಕಡಿಮೆ ಮಾಡುವುದಾಗಿತ್ತು. ಆದರೂ ಈ ಯೋಜನೆಯ ಅನುಷ್ಠಾನದಿಂದ ಹೆಣ್ಣುಮಕ್ಕಳಲ್ಲಿ ಶಾಲಾ ಭಾಗವಹಿಸುವಿಕೆಯನ್ನು ಮತ್ತು ಶಾಲೆಯನ್ನು ಮಧ್ಯದಲ್ಲಿ ಬಿಡದಂತೆ ನೋಡಿಕೊಳ್ಳಲು ಸಾಮಾಜಿಕವಾಗಿ, ಆರ್ಥಿಕವಾಗಿ ಸಾಕಷ್ಟು ಕೊರತೆಗಳು ಇವೆ. ಇವುಗಳನ್ನು ಸುಧಾರಿಸಲು ಇನ್ನೂ ಅನೇಕ ಕ್ರಮ ಕೈಗೊಳ್ಳಬೇಕಾಗಿದೆ. ಡಿ.ಪಿ.ಇ.ಪಿ. ಅನುಭವ ಆಧಾರದಲ್ಲಿ ಶೈಕ್ಷಣಿಕ ಕ್ಷೇತ್ರದಲ್ಲಿ ತೊಡಕುಗಳನ್ನು ಕುರಿತು ಅನೇಕ ಸಂಶೋಧನೆಗಳು ನಡೆಸಿ,

ಹೆಣ್ಣುಮಕ್ಕಳ ಶೈಕ್ಷಣಿಕ ಪ್ರಗತಿಗೆ ತೊಡಕಾಗಿರುವ ಸಮಸ್ಯೆಗಳಿಗೆ ಕಾರ್ಯಕಾರಣ ಸಂಬಂಧಗಳನ್ನು ಗುರುತಿಸುವ ಪ್ರಯತ್ನವನ್ನು ಮಾಡಲಾಗುತ್ತಿದೆ.

**೭.೨. ಶಿಕ್ಷಕರ್ಮಿ ಕಾರ್ಯಕ್ರಮ**

ಈ ಯೋಜನೆಯನ್ನು ೧೯೮೭ರಲ್ಲಿ ಇತರರ ಸಹಯೋಗದೊಂದಿಗೆ ರಾಜಸ್ಥಾನ ಸರ್ಕಾರ ಪ್ರಾರಂಭಿಸಿತು. ಈ ಕಾರ್ಯಕ್ರಮವು ಸಮುದಾಯ ಆಧಾರಿತ ಪ್ರಯೋಗಾತ್ಮಕ ಯೋಜನೆ ಆಗಿದೆ. ಇದು ದೂರದ ಗ್ರಾಮಗಳಲ್ಲಿ ನಿರ್ದಿಷ್ಟ ಶೈಕ್ಷಣಿಕ ಅವಧಿಯ ದಿನಗಳಲ್ಲಿ ಕಾರ್ಯನಿರ್ವಹಿಸದ ಶಾಲೆಗಳು ಮತ್ತು ಮೇಲಿಂದ ಮೇಲೆ ಗೈರುಹಾಜರಿ ಹಾಗೂ ಶಿಕ್ಷಕರ ಕೊರತೆ ಇರುವುದಕ್ಕೆ ಸಂಬಂಧಿಸಿದ್ದಾಗಿದೆ. ಈ ಯೋಜನೆಯ ಮೂಲಕ, ಪೂರ್ಣಪ್ರಮಾಣ ಶೈಕ್ಷಣಿಕ ತರಬೇತಿ ಪಡೆದ ಶಿಕ್ಷಕರ ಕೊರತೆ ಇರುವ ಪ್ರದೇಶ/ಸ್ಥಳಗಳಲ್ಲಿ, ಸ್ಥಳೀಯ ಶಿಕ್ಷಕರನ್ನು ನೇಮಕ ಮಾಡಲಾಗಿದೆ. ಈ ಪ್ರಕ್ರಿಯೆಯಲ್ಲಿ ನೇಮಕಗೊಂಡ ಶಿಕ್ಷಕರ ಶೈಕ್ಷಣಿಕ ಮಟ್ಟವನ್ನು ಉತ್ತಮಪಡಿಸಲು, ಪೂರ್ವ ತರಬೇತಿಗಳು, ಸೇವೆಗೆ ಸೇರಿದ ನಂತರ ಪುನರ್ಮನನ ತರಬೇತಿಗಳನ್ನು ಕೊಡಲಾಗಿದೆ. ಪ್ರಾಥಮಿಕ ಶಾಲೆಗಳಲ್ಲಿ ಹಾಗೂ ಸಂಜೆ ಕಲಿಕಾ ಕೇಂದ್ರಗಳನ್ನು ನೋಡಿಕೊಳ್ಳುವುದಕ್ಕೆ ಇರಬೇಕಾದ ಕುಶಲತೆಯು ಶಿಕ್ಷಕರ್ಮಿ ತರಬೇತಿಗಳ ಮೂಲಕ ನೀಡಲಾಗಿದೆ. ಮತ್ತೊಂದು ಕಡೆ, ಶಾಲಾ ಮೂಲ ಸೌಲಭ್ಯಗಳಲ್ಲಿ ಪ್ರಗತಿ, ಮಕ್ಕಳ ಶಾಲಾ ದಾಖಲಾತಿ-ಹಾಜರಾತಿ ಮತ್ತು ಶಾಲೆಗಳಲ್ಲಿ ಕಲಿಕೆಯನ್ನು ಮುಂದುವರಿಸುವ ಮಕ್ಕಳ ಸಂಖ್ಯೆಯಲ್ಲಿ ಪ್ರಗತಿ ಕಂಡುಬಂದರೂ, ಸಾಕ್ಷರತೆಯಲ್ಲಿ ಅತ್ಯಂತ ಹಿಂದುಳಿದ ವಲಯಗಳಲ್ಲಿ ನಿರೀಕ್ಷಿತ ಮಟ್ಟವನ್ನು ಸಾಧಿಸುವುದು ಕಷ್ಟದಾಯಕವಾಗಿದೆ. ತಳಮಟ್ಟದಲ್ಲಿ ಶಿಕ್ಷಕರ್ಮಿ ಕಾರ್ಯಕರ್ತರು ಪಂಚಾಯತಿ ಸಮಿತಿ ಸದಸ್ಯರ ಸಹಯೋಗ ಹೊಂದಿದೆ, ಸರ್ಕಾರೇತರ ಸಂಘ ಸಂಸ್ಥೆಗಳು ಹಾಗೂ ಗ್ರಾಮ ಸಮಿತಿಗಳನ್ನು ತೊಡಗಿಸಿಕೊಂಡು ಶೈಕ್ಷಣಿಕ ಅಭಿವೃದ್ಧಿಗೆ ಪ್ರಯತ್ನ ನಡೆಸಿದ್ದಾರೆ. ಯಾವ ಮಕ್ಕಳು ಯಾವುದೇ ಕಾರಣದಿಂದಾಗಿ ಅಥವಾ ಬೇರೆ ಯಾವುದೇ ಉದ್ದೇಶದಿಂದ ಶಾಲೆಗಳಿಗೆ ಬಾರದೆ ಇದ್ದರೆ ಅಂಥ ಮಕ್ಕಳಿಗೋಸ್ಕರ ವಿಭಿನ್ನ ರೀತಿಯ ಪಠ್ಯಕ್ರಮ ಹಾಗೂ ಸಂಜೆ ಶಾಲೆಯನ್ನು ಪ್ರಾರಂಭಿಸಲಾಗಿದೆ.

ಶಿಕ್ಷಕರ್ಮಿ ಕಾರ್ಯಕ್ರಮಕ್ಕೆ ಶಿಕ್ಷಕರ ನೇಮಕಾತಿ ಬಗ್ಗೆ ನಡೆಸಿರುವ ಪ್ರಕ್ರಿಯೆ ಬಗ್ಗೆ ಅನೇಕ ಟೀಕೆಗಳಿವೆ, ಇದರಿಂದ ಬೋಧನೆ ಮತ್ತು ಕಲಿಕೆಯ ಗುಣಮಟ್ಟಕ್ಕೆ ಧಕ್ಕೆಯಾಗಿದೆ ಎನ್ನುವ ಅಭಿಪ್ರಾಯ ಕೂಡ ಶೈಕ್ಷಣಿಕ ಸಂಶೋಧನಾ ವಲಯದಲ್ಲಿ ಪ್ರಬಲವಾಗಿದೆ. ಆದರೆ ಈ ಕಾರ್ಯಕ್ರಮದಿಂದ ಗ್ರಾಮೀಣ ಪ್ರದೇಶದ ಜನರಲ್ಲಿ ಶೈಕ್ಷಣಿಕ ಆಸಕ್ತಿ ಅಗಾಧವಾದ ಪ್ರಮಾಣದಲ್ಲಿ ಹೆಚ್ಚಳವಾಗಿದೆ. ಉದಾಹರಣೆಗೆ ಶಿಕ್ಷಕರ್ಮಿ ಕಾರ್ಯಕ್ರಮ ಜಾರಿಗೆ ಬಂದ ಹಳ್ಳಿಗಳಲ್ಲಿ ೫ನೇ ತರಗತಿಯಲ್ಲಿ ಉತ್ತೀರ್ಣವಾದ ಹೆಣ್ಣುಮಕ್ಕಳ ಬ್ಯಾಚ್‌ಗಳಿವೆ. ಆ ಬ್ಯಾಚ್‌ಗಳ ಮಾರ್ಗದರ್ಶನದಲ್ಲಿಯೇ ಮಾಧ್ಯಮಿಕ ಶಾಲೆಗಳನ್ನು ತೆರೆಯುವ ಪ್ರಯತ್ನ ಮಾಡಲಾಗಿದೆ. ಹಾಗೆಯೇ ಇದು ಪ್ರೌಢ ಶಾಲೆ ಹಂತಕ್ಕೆ ಅನ್ವಯ

ವಾಗುತ್ತದೆ. ವಿಶೇಷವೆಂದರೆ, ಈ ಯೋಜನೆಯ ಮೂಲಕ ಶಾಲಾ ಶಿಕ್ಷಣದ ಮುಖ್ಯವಾಹಿನಿಗೆ ಸೇರಿದ ಬಹುತೇಕ ಮಕ್ಕಳು (ಅಂದಾಜು ೨೯ ಜಿಲ್ಲೆಗಳಲ್ಲಿ ೧೨೫ ಬ್ಲಾಕ್‌ಗಳಲ್ಲಿ ೧೬೫,೦೦೦ ಮಕ್ಕಳು) ಅವರ ಕುಟುಂಬದಲ್ಲಿ ಶಿಕ್ಷಣ ಕಲಿತ ಮೊದಲ ತಲೆಮಾರಿಗೆ ಸೇರಿದವರು ಎನ್ನುವುದು ಈ ಕಾರ್ಯಕ್ರಮದಿಂದಾದ ಪ್ರಯೋಜನ.

ಶಾಲಾ ಶಿಕ್ಷಣದಲ್ಲಿ ಹೆಣ್ಣುಮಕ್ಕಳ ಭಾಗವಹಿಸುವಿಕೆಯನ್ನು ಹೆಚ್ಚಳ ಮಾಡುವ ಉದ್ದೇಶದಿಂದ, ಅನೇಕ ಕಾರ್ಯಕ್ರಮಗಳನ್ನು ವಿವಿಧ ರಾಜ್ಯಗಳು ವಿವಿಧ ಕಾರ್ಯಕ್ರಮದ ಮೂಲಕ ಜಾರಿಗೆ ತಂದಿವೆ. ಅವುಗಳಲ್ಲಿ ಪ್ರಮುಖವಾದವುಗಳನ್ನು ಹೆಸರಿಸಲಾಗಿದೆ. ಅವೆಂದರೆ, ಲೋಕಜಂಬಿಷ್, ಬಿಹಾರ ಶಿಕ್ಷಣ ಕಾರ್ಯಕ್ರಮ; ಶಿಕ್ಷಕರ ನೇಮಕಾತಿಯಲ್ಲಿ ಮಹಿಳಾ ಶಿಕ್ಷಕರಿಗೆ ಹೆಚ್ಚಿನ ಆದ್ಯತೆ ನೀಡುವ ಕಾರ್ಯಕ್ರಮ, ಶಾಲೆಯಿಂದ ಹೊರಗೆ ಇರುವ ಹೆಣ್ಣುಮಕ್ಕಳಿಗೆ ವಿಶೇಷ ಕಾರ್ಯಕ್ರಮ. ಹೀಗೆ ಇನ್ನೂ ಮುಂತಾದ ಕಾರ್ಯಕ್ರಮಗಳನ್ನು ೧೯೯೦-೨೦೦೦ ದಶಕದಲ್ಲಿ ಜಾರಿಗೆ ತರಲಾಗಿದೆ.

**೭.೩. ಲೋಕಜಂಬಿಷ್**

ಲೋಕಜಂಬಿಷ್ ಇದೊಂದು ಜನರ ಆಂದೋಲನವಾಗಿ ಮಹತ್ವ ಪಡೆದಿದ್ದು, ಹೆಣ್ಣುಮಕ್ಕಳ ಸಮಾನತೆಗೆ ಶಿಕ್ಷಣವನ್ನು ಒಂದು ಸಾಧನವಾಗಿ ಬಳಸುತ್ತಿದೆ. ಲೋಕಜಂಬಿಷ್ ಕಾರ್ಯಕ್ರಮವು ಶಾಲಾ ಶಿಕ್ಷಣದಲ್ಲಿ ಜನರ ಪಾಲ್ಗೊಳ್ಳುವಿಕೆ, ವಿಕೇಂದ್ರಿಕರಣ, ಲಿಂಗಸಮಾನತೆ, ಶಿಕ್ಷಕರ ಸಾಮರ್ಥ್ಯ ವಿಸ್ತರಣೆಗೆ ಹೆಚ್ಚು ಆದ್ಯತೆ ಹಾಗೂ ಗುಣಮಟ್ಟ ಮತ್ತು ತರಗತಿಯ ಚಟುವಟಿಕೆಗಳು, ಶಾಲಾ ವ್ಯವಸ್ಥೆಯ ಮೌಲ್ಯಮಾಪನ ಮತ್ತು ಅವಲೋಕನವನ್ನು ಒಳಗೊಂಡಿದೆ. ಹೆಣ್ಣುಮಕ್ಕಳಿಗೆ ಶಿಕ್ಷಣ ನೀಡುವ ಮೂಲಕ ಮಹಿಳೆಯರ ಸಬಲೀಕರಣ ಮತ್ತು ಇದರಲ್ಲಿ ಅವರ ಪಾಲ್ಗೊಳ್ಳುವಿಕೆಯನ್ನು ಹೆಚ್ಚಿಸುವುದು ಲೋಕಜಂಬಿಷ್ ಕಾರ್ಯಕ್ರಮದ ಮೂಲ ಆಶಯ.

**೭.೪. ಕಲಿಕೆಯ ಕನಿಷ್ಟ ಮಟ್ಟಗಳು**

ನಮ್ಮ ದೇಶದಲ್ಲಿ ಪ್ರಾಥಮಿಕ ಶಾಲೆಗಳ ಗುಣಮಟ್ಟ ಸುಧಾರಣೆಗಾಗಿ ಹಲವಾರು ಯೋಜನೆಗಳನ್ನು ಹಾಕಿಕೊಂಡು, ಭೌತಿಕ ಹಾಗೂ ಮಾನವೀಯ ಸಂಪನ್ಮೂಲಗಳನ್ನು ಒದಗಿಸುವ ಕಡೆಗೆ ಗಮನ ಹರಿಸಿದ್ದಾರೆ ಹೊರತು ಮಕ್ಕಳ ಕಲಿಕಾ ಮಟ್ಟದ ಕಡೆಗೆ ಹೆಚ್ಚಿನ ಗಮನ ಹರಿಸಿಲ್ಲ. ಈ ಉದ್ದೇಶದಿಂದ ಪ್ರತಿ ರಾಜ್ಯಕ್ಕೂ ಭಾಷೆ, ಗಣಿತ, ಪರಿಸರ ಅಧ್ಯಯನಗಳಲ್ಲಿ ಕಲಿಸಬೇಕಾದ ಮೂಲ ಸಾಮರ್ಥ್ಯವನ್ನು ಗುರುತಿಸಿ ಬೋಧನೆ ಮಾಡುವುದಕ್ಕೆ 'ಕಲಿಕೆಯ ಕನಿಷ್ಟ ಮಟ್ಟದ' ಕಾರ್ಯಕ್ರಮ ಎನ್ನಲಾಗಿದೆ.

೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯ ನಿರ್ದೇಶನದಂತೆ ೧೯೯೦ರಲ್ಲಿ ಮಾನವ ಸಂಪನ್ಮೂಲ ಅಭಿವೃದ್ಧಿ ಇಲಾಖೆಯು ಪ್ರಾಥಮಿಕ ಹಂತದಲ್ಲಿ ಕಲಿಕೆಯ ಕನಿಷ್ಟ ಮಟ್ಟವನ್ನು ರೂಪಿಸಲು ಒಂದು ಸಮಿತಿಯನ್ನು ರಚಿಸಿತು. ಈ ಸಮಿತಿಯು ೧೯೯೧ರಲ್ಲಿ "ಪ್ರಾಥಮಿಕ ಹಂತದಲ್ಲಿ ಕಲಿಕೆಯ ಕನಿಷ್ಟ

ಮಟ್ಟಗಳು" ಎಂಬ ಶೀರ್ಷಿಕೆಯಡಿ ವರದಿ ಸಲ್ಲಿಸಿತು. ಈ ವರದಿಯಲ್ಲಿ ೧ ರಿಂದ ೫ನೇ ತರಗತಿಯ ಮಕ್ಕಳು ಭಾಷೆ, ಗಣಿತ, ಪರಿಸರ ಅಧ್ಯಯನದಲ್ಲಿ ಗಳಿಸಬೇಕಾದ ಕನಿಷ್ಟ ಕಲಿಕಾ ಮಟ್ಟಗಳನ್ನು ಸೂಚಿಸಿತು.

**ಕನಿಷ್ಟ ಕಲಿಕಾ ಮಟ್ಟದ ಅವಶ್ಯಕತೆಗಳು**

* ಮಕ್ಕಳ ಕಲಿಕೆಯಲ್ಲಿ ಸಮಾನತೆಗೆ ಅವಕಾಶ ಮಾಡಿಕೊಡುವುದು.
* ಗ್ರಾಮ ಮತ್ತು ನಗರದ ಶಾಲೆಗಳಲ್ಲಿ ಓದುತ್ತಿರುವ ಮಕ್ಕಳ ಅಂತರವನ್ನು ಹೋಗಲಾಡಿಸುವುದು.
* ಪ್ರತಿಯೊಂದು ವರ್ಗದ ವಿವಿಧ ವಿಷಯಗಳಲ್ಲಿ ಮಗು ಏನು ಕಲಿಯಬೇಕು ಎಂಬುದನ್ನು ನಿಗದಿಪಡಿಸುವುದು
* ಪ್ರತಿ ವಿಷಯದ ವಿವಿಧ ಕ್ಷೇತ್ರಗಳ ಕಲಿಕಾ ಸಾಮರ್ಥ್ಯಗಳನ್ನು ತಿಳಿಸುವುದು.
* ಮಗು ಸ್ವತಂತ್ರವಾಗಿ ಕಲಿಯಲು ಅವಕಾಶ ಮಾಡಿಕೊಡುವುದು.
* ಶಿಕ್ಷಕರು ಕಲಿಸುವಾಗ ಏನು ಮಾಡಬೇಕು? ಹೇಗೆ ಮಾಡಬೇಕು? ಎಂಬುದರ ಬಗ್ಗೆ ನಿರ್ದಿಷ್ಟತೆಯನ್ನು ಸ್ಪಷ್ಟಪಡಿಸುತ್ತದೆ.

**೭.೫. ಇತರೆ ಯೋಜನೆಗಳು**

ಶಿಕ್ಷಣವನ್ನು ಸಮವರ್ತಿ ಪಟ್ಟಿಯಲ್ಲಿ ಸೇರಿಸಲಾಗಿದ್ದು ಹೆಚ್ಚಿನ ಜವಾಬ್ದಾರಿಯನ್ನು ರಾಜ್ಯ ಸರ್ಕಾರವು ನೋಡಿಕೊಳ್ಳುತ್ತಿದ್ದು ಕೇಂದ್ರ ಸರ್ಕಾರವು ಸಲಹೆ ಮತ್ತು ಮಾರ್ಗದರ್ಶನದೊಂದಿಗೆ ಧನ ಸಹಾಯ ಒದಗಿಸುತ್ತದೆ. ಕೇಂದ್ರ ಸರ್ಕಾರ ಶಿಕ್ಷಣದ ಅಭಿವೃದ್ಧಿಗಾಗಿ ಹಲವಾರು ಯೋಜನೆಗಳನ್ನು ಹಾಕಿಕೊಂಡಿದೆ.

**೭.೬. ಪ್ರಾಥಮಿಕ ಶಿಕ್ಷಣ ಉನ್ನತೀಕರಣ ಕಾರ್ಯಕ್ರಮ**

ಈ ಯೋಜನೆಯನ್ನು ಪ್ರಾಥಮಿಕ ಶಿಕ್ಷಣದಲ್ಲಿನ ದಾಖಲಾತಿ ಮತ್ತು ಹಾಜರಾತಿಯ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಲು ೧೯೯೭ರಲ್ಲಿ ಪ್ರಾರಂಭಿಸಲಾಯಿತು. ಇದರ ಮುಖ್ಯ ಉದ್ದೇಶವೆಂದರೆ ೦೬ ರಿಂದ ೧೪ ವರ್ಷದ ಮಕ್ಕಳಿಗೆ ಕಡ್ಡಾಯ ಪ್ರಾಥಮಿಕ ಶಿಕ್ಷಣ ಒದಗಿಸುವುದರೊಂದಿಗೆ ಅವರು ಶಾಲೆಗೆ ಗೈರುಹಾಜರು ಹಾಗೂ ಮಧ್ಯದಲ್ಲಿಯೇ ಶಾಲೆ ಬಿಡದಂತೆ ನೋಡಿಕೊಳ್ಳುವುದು. ಈ ಯೋಜನೆಗೆ ಯುನಿಸೆಫ್ ಹಣಕಾಸು ಸಹಾಯ ಒದಗಿಸಿತು.

**೭.೭. ಶಿಕ್ಷಣ ಗ್ಯಾರಂಟಿ ಯೋಜನೆ ಮತ್ತು ಪರ್ಯಾಯ ಶಿಕ್ಷಣ ಕೇಂದ್ರಗಳು**

ಶಾಲೆಯಿಂದ ಹೊರಗುಳಿದ ೦೬ ರಿಂದ ೧೪ ವರ್ಷದ ಮಕ್ಕಳಿಗೆ ಔಪಚಾರಿಕವಲ್ಲದ ಶಿಕ್ಷಣ ಒದಗಿಸಲು ರೂಪಿಸಿದ ಕ್ರಮವೇ ಶಿಕ್ಷಣ ಗ್ಯಾರಂಟಿ ಯೋಜನೆ. ಸರ್ವಶಿಕ್ಷಣ ಅಭಿಯಾನದ

ಅಂಗಗಳಾದ ಇ.ಜಿ.ಎಸ್. ಮತ್ತು ಎ.ಐ.ಇ.ಗಳು ಶಿಕ್ಷಣ ಸಾರ್ವತ್ರೀಕರಣಕ್ಕಾಗಿ ಕೆಳಗಿನ ಮೂರು ಕಾರ್ಯಕ್ರಮಗಳಿಗೆ ಸಹಾಯ ಸೂಚಿಸುತ್ತದೆ.

* ವಾಸ ಸ್ಥಳಗಳಲ್ಲಿ ಶಾಲೆಗಳ ಸ್ಥಾಪನೆ.

* ಶಾಲೆಯಿಂದ ಹೊರಗುಳಿದ ಮಕ್ಕಳನ್ನು ಶಾಲೆಗೆ ಮರಳುವಂತೆ ಮಾಡುವುದು. ಉದಾ. ಬಾ ಮರಳಿ ಶಾಲೆಗೆ, ಕೂಲಿಯಿಂದ ಶಾಲೆಗೆ ಇನ್ನು ಮುಂತಾದ ಶಿಬಿರಗಳನ್ನು ಏರ್ಪಡಿಸುವುದು.

* ನೂತನ ಮಾರ್ಗೋಪಾಯಗಳನ್ನು ರೂಪಿಸುವುದು.

**೭.೮. ಮಧ್ಯಾಹ್ನದ ಬಿಸಿಯೂಟದ ಯೋಜನೆ**

ಪ್ರಾಥಮಿಕ ಶಾಲೆಗಳಿಗೆ ಬರುವ ಮಕ್ಕಳಿಗೆ ಮಧ್ಯಾಹ್ನದ ವೇಳೆಯಲ್ಲಿ ಉಚಿತವಾಗಿ ಊಟ ಕೊಡಲಾಗುವುದು. ಗ್ರಾಮೀಣ ಪ್ರದೇಶಗಳಲ್ಲಿ ಶಾಲೆಗೆ ಬರುವ ಹೆಚ್ಚು ಮಕ್ಕಳ ಪೋಷಕರು ಬಡತನ ಹಾಗೂ ಮೂಢನಂಬಿಕೆಗೆ ಒಳಗಾಗಿರುತ್ತಾರೆ. ಊಟ ಮಾಡದೇ ಶಾಲೆಗೆ ಬರುವ ಮಕ್ಕಳು ಹಸಿವಿನಿಂದ ಬಳಲುವವರು ಮತ್ತು ಮಕ್ಕಳು ಬೌದ್ಧಿಕವಾಗಿಯೂ ದುರ್ಬಲರಾಗುವರು. ಸತ್ವಯುತ ಆಹಾರವಿಲ್ಲ ದಿದ್ದಾಗ, ಅನ್ನಾಂಗದ ಕೊರತೆಯಿಂದ ಹಲವಾರು ರೋಗರುಜಿನಗಳಿಗೆ ಒಳಗಾಗುವ ಸಾಧ್ಯತೆಯೇ ಹೆಚ್ಚು. ಇದನ್ನು ತಪ್ಪಿಸಲಿಕ್ಕಾಗಿ ಸರ್ಕಾರ ಈ ಯೋಜನೆ ಜಾರಿಗೆ ತಂದಿತು.

ಇತ್ತೀಚೆಗೆ ಸರ್ವೋಚ್ಚ ನ್ಯಾಯಾಲಯವು ಬೇಸಿಗೆ ರಜಾ ದಿನಗಳಲ್ಲೂ ಶಾಲಾ ಮಕ್ಕಳಿಗೆ ಮಧ್ಯಾಹ್ನದ ಬಿಸಿಯೂಟವನ್ನು ನೀಡಬೇಕೆಂದು ನಿರ್ದೇಶಿಸಿದೆ. ಇದೊಂದು ಮಹತ್ವವುಳ್ಳ ಯೋಜನೆ ಯಾಗಿದೆ. ಪ್ರಾಥಮಿಕ ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸುವಲ್ಲಿ ಈ ಯೋಜನೆಯು ಹೆಚ್ಚು ಉಪಯುಕ್ತ ಹಾಗೂ ಆಕರ್ಷಣೀಯವಾಗಿದೆ.

ಪ್ರಾಥಮಿಕ ಹಂತದ ಮಕ್ಕಳು ಗೈರು ಹಾಜರಾಗದಂತೆ ನೋಡಿಕೊಳ್ಳಲು ವಿಶೇಷವಾಗಿ ಹಮ್ಮಿಕೊಂಡ ಕಾರ್ಯಕ್ರಮವೇ ಮಧ್ಯಾಹ್ನ ಊಟದ ಯೋಜನೆ. ಇದರ ಪ್ರಮುಖ ಉದ್ದೇಶಗಳು.

* ಮಗುವಿಗೆ ಪೌಷ್ಟಿಕ ಆಹಾರವನ್ನು ಒದಗಿಸಿ, ಮಗುವಿನ ಬೆಳವಣಿಗೆ ಮತ್ತು ಆರೋಗ್ಯ ಸುಧಾರಿಸುವುದು.

* ಮಗು ಗೈರು ಹಾಜರಾಗದಂತೆ ನೋಡಿಕೊಳ್ಳುವುದು.

* ಮಕ್ಕಳ ದಾಖಲಾತಿ ಹೆಚ್ಚಿಸಿ, ಶಾಲೆ ಬಿಡುವುದನ್ನು ತಡೆಯುವುದು.

* ಪೋಷಕರ ಆರ್ಥಿಕ ಹೊರೆಯನ್ನು ಸ್ವಲ್ಪಮಟ್ಟಿಗಾದರೂ ಕಡಿಮೆಗೊಳಿಸುವುದು.

* ಬಾಲಕಾರ್ಮಿಕತೆಯನ್ನು ಕಡಿಮೆ ಮಾಡಿ ತಡೆಗಟ್ಟುವುದು.

೭.೯. ಬಾಲಕಿಯರ ಶಿಕ್ಷಣಕ್ಕಾಗಿ ಸರ್ಕಾರ ಕೈಗೊಂಡ ಪ್ರೋತ್ಸಾಹಕ ಕ್ರಮಗಳು

* ಬಾಲಕಿಯರ ಶಿಕ್ಷಣವನ್ನು ಉತ್ತೇಜಿಸಲು ಅನೇಕ ಬಾಲಿಕಾ ಶಾಲೆಗಳನ್ನು ತೆರೆಯಲಾಗಿದೆ.
* ವಿದ್ಯಾರ್ಥಿ ನಿಲಯಗಳ ಸ್ಥಾಪನೆ.
* ಬಾಲಕಿಯರಿಗಾಗಿ ಶಾಲೆಗಳಲ್ಲಿ ಶುಲ್ಕ ರಿಯಾಯಿತಿ.
* ಬಾಲಕಿಯರಿಗಾಗಿ ಶಿಷ್ಯ ವೇತನಗಳು.
* ಬಾಲಕಿಯರಿಗಾಗಿ ಹೋಲಿಗೆ, ಕಸೂತಿ ಕಲೆಗಳ ತರಬೇತಿ.
* ಬಾಲಕಿಯರ ಅಗತ್ಯಕ್ಕೆ ತಕ್ಕಂತೆ ಶಾಲಾ ವೇಳೆಯ ಹೊಂದಾಣಿಕೆ.
* ಶಿಕ್ಷಕಿಯರ ನೇಮಕಾತಿಗೆ ಆದ್ಯತೆ.
* ಶಾಲಾ ಕಟ್ಟಡಗಳ ಸುಧಾರಣೆ (ಬಾಲಕಿಯರ ಮೂಲಭೂತ ಸೌಲಭ್ಯಗಳ ಒದಗಿಸುವಿಕೆ).
* ಲಿಂಗಸಮಾನತೆ ತರುವ ಪಠ್ಯಕ್ರಮ ಹಾಗೂ ಪಠ್ಯಪುಸ್ತಕಗಳು.
* ಉಚಿತ ಸಮವಸ್ತ್ರ, ಪಠ್ಯಪುಸ್ತಕ, ಬಿಸಿಯೂಟ, ಸೈಕಲ್ ವಿತರಣೆ ಇತ್ಯಾದಿ.
* ಬಾಲಕಿಯರನ್ನು ಶಿಕ್ಷಣದ ಮುಖ್ಯವಾಹಿನಿಗೆ ತರುವುದಕ್ಕಾಗಿ 'ಬಾ ಬಾಲೆ ಶಾಲೆಗೆ'.
* ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ ೫ ರಿಂದ ೧೦ನೇ ತರಗತಿಯವರೆಗಿನ ಎಲ್ಲಾ ಬಾಲಕಿಯರಿಗೆ ಹಾಜರಾತಿ, ಶಿಷ್ಯವೇತನ ಇತ್ಯಾದಿ.

ಮಕ್ಕಳು ಶಾಲೆಗೆ ತಪ್ಪದೇ ಹಾಜರಾಗುವಂತೆ ಮತ್ತು ಕನಿಷ್ಟ ಮಟ್ಟದ ಕಲಿಕಾ ಚಟುವಟಿಕೆಗಳನ್ನು ಸಾಧಿಸಿಕೊಳ್ಳುವ ಉದ್ದೇಶದಿಂದ ಪ್ರೋತ್ಸಾಹದಾಯಕ ಕಾರ್ಯಕ್ರಮಗಳನ್ನು ಸರ್ಕಾರವು ಬೇರೆ ಬೇರೆ ರೂಪದಲ್ಲಿ ಜಾರಿಗೆ ತರುತ್ತಿದೆ. ಈಗಾಗಲೇ ಅವುಗಳನ್ನು ಗುರುತಿಸಲಾಗಿದೆ. ಅಧ್ಯಯನದ ಈ ಭಾಗದಲ್ಲಿ ಶಿಷ್ಯವೇತನ, ಪಠ್ಯಪುಸ್ತಕಗಳು, ಉಚಿತ ಸಮವಸ್ತ್ರಗಳು ಹಾಗೂ ಮಧ್ಯಾಹ್ನದ ಬಿಸಿಯೂಟದ ಬಗ್ಗೆ ವಿವರಿಸಲಾಗಿದೆ. ಇವುಗಳು ಎಷ್ಟರಮಟ್ಟಿಗೆ ಅನುಷ್ಠಾನಗೊಂಡಿವೆ. ಅವುಗಳಿಂದ ಹೆಣ್ಣುಮಕ್ಕಳ ಶಿಕ್ಷಣ ಹೇಗೆ ಅಭಿವೃದ್ಧಿ ಆಗಿದೆ ಎಂಬುದನ್ನು ಚರ್ಚಿಸಿ ನಂತರದಲ್ಲಿ ಅವುಗಳು ಪರಿಣಾಮಕಾರಿಯಾಗಿ ಜಾರಿಯಾಗದಿರಲು ಇರುವ ವಿಷಯಗಳನ್ನು ಚರ್ಚಿಸಲು ಪ್ರಯತ್ನಿಸಲಾಗಿದೆ.

೭.೧೦. ಶಿಷ್ಯವೇತನ

ಶಾಲೆಗಳಲ್ಲಿ ಮಕ್ಕಳು ಕಲಿಯುವಂತಹ ಸಮಯದಲ್ಲಿ ಎದುರಾಗುವಂತಹ ಆರ್ಥಿಕ ತೊಂದರೆಗಳಿಗೆ ಪರಿಹಾರ ಕಂಡುಕೊಳ್ಳಲು ಶಿಷ್ಯವೇತನವನ್ನು ಶಾಲಾ ಮಟ್ಟದಲ್ಲಿ ಕೊಡಲಾಗುತ್ತದೆ. ಈ ಪದ್ಧತಿಯನ್ನು ಹಿಂದಿನಿಂದಲೂ ಅನುಷ್ಠಾನಗೊಳಿಸಲಾಯಿತು. ಆದರೆ ಇದು ಸ್ಥಳೀಯ ಮತ್ತು ರಾಜ್ಯ ಸಂಸ್ಥಾನಗಳ

ಆಡಳಿತದಲ್ಲಿಯೇ ಜಾರಿಗೊಂಡಿರುವುದು ನಮಗೆ ತಿಳಿದುಬರುತ್ತದೆ. ಮೈಸೂರು ಸಂಸ್ಥಾನದಲ್ಲಿ ವಿಠಲ್‌ರಾವ್ ಗಾಯಕ್‌ವಾಡ್ ಅವರ ಅವಧಿಯಲ್ಲಿ ಪ್ರಾಥಮಿಕ ಶಿಕ್ಷಣಕ್ಕೆ ಪ್ರಾಮುಖ್ಯತೆ ಕೊಟ್ಟು, ಉತನ್ನ ಶಿಕ್ಷಣಕ್ಕೆ ಹೆಚ್ಚು ಆದ್ಯತೆ ನೀಡಲಾಗಿತ್ತು. ಈ ಸಮಯದಲ್ಲಿ ಶಿಷ್ಯವೇತನಗಳನ್ನು ವಿದ್ಯಾರ್ಥಿಗಳಿಗೆ ನೀಡಲಾಗುತ್ತಿತ್ತು. ಸ್ವತಂತ್ರ್ಯ ನಂತರದಲ್ಲಿ ಸಮಾಜದ ಹಂಚಿನಲ್ಲಿರುವವರಿಗೆ ಮತ್ತು ಶಾಲಾ ಭಾಗವಹಿಸುವಿಕೆಯನ್ನು ಹೆಚ್ಚಿಸುವುದಕ್ಕಾಗಿ ಕೊಡಲಾಗುತ್ತಿತ್ತು.

ಪ್ರಾಥಮಿಕ ಶಾಲಾ ಹಂತದಲ್ಲಿ ಶಿಕ್ಷಣವನ್ನು ಸಾರ್ವತ್ರೀಕರಣ ಗೊಳಿಸುತ್ತಿರುವುದರಿಂದ ಅರ್ಹ ಬಡ ಮಕ್ಕಳಿಗೆ, ಶಾಲಾ ಶಿಕ್ಷಣ ಪೂರೈಸುವಂತೆ ಮಾಡಲು ಶಿಷ್ಯವೇತನ ನೀಡಲಾಗಿದೆ. ಅದರಲ್ಲೂ ಗ್ರಾಮೀಣ ಪರಿಸರದಿಂದ ಬರುವ ಬಾಲಕಿಯರು, ಪ್ರತಿಭಾವಂತ ಮಕ್ಕಳು, ಪರಿಶಿಷ್ಟ ಜಾತಿ ಹಾಗೂ ಪಂಗಡದ ಮಕ್ಕಳಿಗೆ ಕೊಡಲಾಗಿದೆ. ಕೆಲವರಿಗೆ ಅವರು ತೆಗೆಯುವ ಅಂಕಗಳ ಆಧಾರದ ಮೇಲೆ ಗುರುತಿಸಿ ಕೊಟ್ಟರೆ, ಇನ್ನು ಕೆಲವರಿಗೆ ಅವರ ಸಾಮಾಜಿಕ ಪರಿಸ್ಥಿತಿಯನ್ನು (ಜಾತಿ, ಧರ್ಮ) ಗಮನದಲ್ಲಿಟ್ಟುಕೊಂಡು ನೀಡಲಾಗಿದೆ. ಹೀಗೆ ನೀಡುತ್ತಿರುವ ಶಿಷ್ಯವೇತನ ಪ್ರಮುಖವಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದವರಿಗೆ ಆದ್ಯತೆ ನೀಡಿದರೂ ಸಹ ಇತರೆ ಹಿಂದುಳಿದ ವರ್ಗಗಳ ಮಕ್ಕಳಿಗೂ ಕೊಡಲಾಗುತ್ತದೆ. ಈ ಶಿಷ್ಯವೇತನವು ಕಡಿಮೆ ಮೌಲ್ಯವುಳ್ಳದ್ದಾದರೂ ಒಂದು ಹಂತದಲ್ಲಿ ಮಕ್ಕಳನ್ನು ಕಲಿಕೆಗೆ ಸ್ಫೂರ್ತಿಗೊಳಿಸುತ್ತದೆ.

### ೭.೧೧. ಉಚಿತ ಪಠ್ಯಪುಸ್ತಕಗಳು

ಪಠ್ಯಪುಸ್ತಕಗಳು ಮಕ್ಕಳಿಗೆ ಹಾಗೂ ಶಿಕ್ಷಕರಿಗೆ ಅತ್ಯವಶ್ಯಕವಾದವುಗಳು. ಶಾಲಾ ಮಕ್ಕಳ ಕಲಿಕೆ ನಿರ್ದಿಷ್ಟ ಗುರಿಯೆಡೆಗೆ ಸಾಗಲು, ಅವಶ್ಯಕವಾದ ಜ್ಞಾನ, ಕೌಶಲ್ಯ ಒದಗಿಸಲು ನೆರವಾಗುತ್ತದೆ. ಅದೇ ರೀತಿ ಶಿಕ್ಷಕರು ಯಾವ ವಯಸ್ಸಿನ ಮಕ್ಕಳಿಗೆ ಏನನ್ನು? ಹೇಗೆ? ಕಲಿಸಬೇಕು ಎಂಬುದನ್ನು ತಿಳಿಸುತ್ತವೆ. ಪ್ರಾಥಮಿಕ ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸುವುದರಿಂದ ಸರ್ಕಾರ ಉಚಿತವಾಗಿ ಪಠ್ಯಪುಸ್ತಕಗಳನ್ನು ಶಾಲಾ ಮಕ್ಕಳಿಗೆ ಒದಗಿಸುವ ಯೋಜನೆಯನ್ನು ಜಾರಿಗೆ ತಂದಿದೆ. ಅದರಲ್ಲೂ ಕರ್ನಾಟಕ ಸರ್ಕಾರ ಪರಿಶಿಷ್ಟ ಜಾತಿ ಮತ್ತು ವರ್ಗ, ಬಡವರು ಹಿಂದುಳಿದವರು ಹಾಗೂ ಅಲ್ಪ ಸಂಖ್ಯಾತರ ಮಕ್ಕಳಿಗೆ ಪಠ್ಯಪುಸ್ತಕಗಳನ್ನು ಉಚಿತವಾಗಿ ಶಾಲೆಗಳ ಮೂಲಕ ಕೊಡುತ್ತಿದೆ. ಶಿಕ್ಷಣತಜ್ಞರು ಪಠ್ಯಪುಸ್ತಕಗಳನ್ನು ಮಕ್ಕಳ ವಯಸ್ಸು ಹಾಗೂ ತರಗತಿ ಗಮನದಲ್ಲಿಟ್ಟುಕೊಂಡು ಅವಶ್ಯಕತೆಗೆ ಅನುಗುಣವಾಗಿ ತಯಾರಿಸುವವರು. ಇದೊಂದು ಉತ್ತಮ ಕಾರ್ಯಕ್ರಮವಾಗಿದೆ.

### ೭.೧೨. ಉಚಿತ ಸಮವಸ್ತ್ರಗಳು

ಕರ್ನಾಟಕ ಸರ್ಕಾರವು ಸರ್ಕಾರಿ ಶಾಲೆಗಳಲ್ಲಿ ಕಲಿಯಲು ಬರುವ ಬಡಮಕ್ಕಳಿಗೆ ಉಚಿತ ಸಮವಸ್ತ್ರಗಳನ್ನು ಒದಗಿಸುವ ಯೋಜನೆಯನ್ನು ಜಾರಿಗೆ ತಂದಿದೆ. ಅನೇಕ ಮಕ್ಕಳು ಬಡತನದಿಂದ ಒಳ್ಳೆಯ ಬಟ್ಟೆಯನ್ನು ಹಾಕಿಕೊಂಡು ಶಾಲೆಗೆ ಬರದಿದ್ದಾಗ, ಅವರಲ್ಲಿ ಕೀಳರಿಮೆ, ಅತೃಪ್ತಿ ಉಂಟಾಗಿ

ಶಾಲಾ ಶಿಕ್ಷಣವನ್ನು ಪೂರೈಸಲಾರದೆ ಅರ್ಧದಲ್ಲಿಯೇ ಬಿಡುತ್ತಿದ್ದರು. ಈ ದೋಷವನ್ನು ಹೋಗಲಾಡಿಸಲು ಸರ್ಕಾರ ಶಾಲಾ ಮಕ್ಕಳಲ್ಲಿ ಸಮಾನತೆ ಹಾಗೂ ಶಿಸ್ತು ಉಂಟು ಮಾಡಲು ಉಚಿತವಾಗಿ ಸಮವಸ್ತ್ರಗಳನ್ನು ಶೈಕ್ಷಣಿಕ ವರ್ಷದ ಪ್ರಾರಂಭದಲ್ಲಿಯೇ ವಿತರಿಸುವ ಯೋಜನೆ ಜಾರಿಗೆ ತಂದಿದೆ.

೨೦೦೦-೦೧ನೇ ಸಾಲಿನಿಂದ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಕಲಿಯುತ್ತಿರುವ ಪರಿಶಿಷ್ಟ ಜಾತಿ, ಪಂಗಡದ ಮಕ್ಕಳು ಹಾಗೂ ಬಾಲಕಿಯರಿಗೆ ಉಚಿತವಾಗಿ ಶಾಲಾ ಬ್ಯಾಗ್ ಹಾಗೂ ನೋಟ್‌ಬುಕ್ ಮತ್ತು ಪುಸ್ತಕಗಳನ್ನು ವಿತರಿಸಲಾಗಿದೆ. ಇದಕ್ಕಾಗಿ ಸರ್ಕಾರ ಕೋಟ್ಯಾಂತರ ರೂ.ಗಳನ್ನು ಖರ್ಚು ಮಾಡುತ್ತಿದೆ.

**೭.೧೩. ಸರ್ವಶಿಕ್ಷಣ ಅಭಿಯಾನ (ಎಸ್.ಎಸ್.ಎ.)**

ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣಕ್ಕಾಗಿ ಮೊಟ್ಟಮೊದಲ ರಾಷ್ಟ್ರೀಯ ಕಾರ್ಯಕ್ರಮವನ್ನು ೨೦೦೧ರಲ್ಲಿ ಪ್ರಾರಂಭಿಸಲ್ಪಟ್ಟಿತು ಇದೇ ಸರ್ವಶಿಕ್ಷಣ ಅಭಿಯಾನ. ಶಾಲಾ ವ್ಯವಸ್ಥೆಯನ್ನು ಸಮುದಾಯದ ಒಡೆತನವನ್ನಾಗಿಸಿ, ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸುವುದೇ ಈ ಪ್ರಯತ್ನವಾಗಿದೆ. ದೇಶದಾದ್ಯಂತ ಗುಣಮಟ್ಟದ ಪ್ರಾಥಮಿಕ ಶಿಕ್ಷಣದ ಬೇಡಿಕೆಗೆ ಅನುಕ್ರಿಯೆಯಾಗಿ ಈ ಆಂದೋಳನ ರೂಪುಗೊಂಡಿದೆ. ಎಸ್.ಎಸ್.ಎ. ಕಾರ್ಯಕ್ರಮವು, ಆಂದೋಳನದ ರೂಪದಲ್ಲಿ ಸಮುದಾಯ ಒಡೆತನದ, ಉತ್ತಮ ಗುಣಮಟ್ಟದ ಶಿಕ್ಷಣದ ಮೂಲಕ ಎಲ್ಲ ಮಕ್ಕಳ ಮಾನವ ಸಾಮರ್ಥ್ಯಗಳನ್ನು ಉತ್ತಮಗೊಳಿಸಲು ಅವಕಾಶ ಕಲ್ಪಿಸುವುದೇ ಆಗಿದೆ. ಇದೇ ರೀತಿಯಲ್ಲಿ ಶಾಲಾ ವ್ಯವಸ್ಥೆಯ ನಿರ್ವಹಣಾ ಸಾಮರ್ಥ್ಯವನ್ನು ಉತ್ತಮಪಡಿಸುವ ಪ್ರಯತ್ನವೂ ನಡೆಯುತ್ತಿದೆ. ಲಿಂಗ ಮತ್ತು ಸಾಮಾಜಿಕ ಅಂತರಗಳನ್ನು ನಿವಾರಿಸುವ ಉದ್ದೇಶವೂ ಇದಕ್ಕೆ ಇದೆ.

ಸರ್ವಶಿಕ್ಷಣ ಅಭಿಯಾನ ಎಂದರೆ ಪ್ರಾಥಮಿಕ ಶಿಕ್ಷಣ ಸಾರ್ವತ್ರೀಕರಣಕ್ಕೆ ಸ್ಪಷ್ಟ ಕಾಲಮಿತಿಯುಳ್ಳ ಒಂದು ಕಾರ್ಯಕ್ರಮ. ಇದು ಉತ್ತಮ ಗುಣಮಟ್ಟದ ಮೂಲ ಶಿಕ್ಷಣಕ್ಕೆ ದೇಶಾದ್ಯಂತ ವಿಸ್ತಾರವಾಗಿರುವ ಕಾರ್ಯಕ್ರಮ ಇದಾಗಿದೆ.

**ಸರ್ವಶಿಕ್ಷಣ ಅಭಿಯಾನದ ಗುರಿಗಳು**

೧. ಸಾರ್ವತ್ರಿಕ ದಾಖಲಾತಿ ಸಾಧಿಸುವುದು.

೨. ಪ್ರಾಥಮಿಕ ಶಾಲೆಗಳಲ್ಲಿ ಮಕ್ಕಳು ಶಾಲೆ ಬಿಡುವ ಪ್ರಮಾಣವನ್ನು ಕಡಿಮೆ ಮಾಡುವುದು.

೩. ೨೦೧೦ರ ವೇಳೆಗೆ ಪ್ರಾಥಮಿಕ ಶಿಕ್ಷಣವು ಎಲ್ಲಾ ಮಕ್ಕಳಿಗೆ ತಲುಪಿಸುವುದು.

೪. ೨೦೧೦ರ ವೇಳೆಗೆ ರಾಜ್ಯದಲ್ಲಿ ಪ್ರತಿ ಮಗುವಿಗೆ ಎಂಟು ವರ್ಷಗಳ ಮೂಲಶಿಕ್ಷಣ ಶಿಕ್ಷಣ ದೊರಕುವಂತೆ ಮಾಡುವುದು. ಇದರ ಜೊತೆಗೆ ಇನ್ನು ಹಲವಾರು ಗುರಿಗಳನ್ನು ಇಟ್ಟುಕೊಂಡು ಜಾರಿಗೆ ಬಂದಿತು.

೫. ಶಾಲೆಗಳ ನಿರ್ವಹಣೆಯಲ್ಲಿ ಸಮುದಾಯಗಳು ಸಕ್ರಿಯವಾಗಿ ಪಾಲ್ಗೊಳ್ಳುವಂತೆ ಮಾಡುವುದರೊಂದಿಗೆ, ಸಾಮಾಜಿಕ ಜೆಂಡರ್ ಅಂತರಗಳನ್ನು ಕಡಿಮೆ ಮಾಡುವುದು ಇದರ ಮತ್ತೊಂದು ಗುರಿಯಾಗಿದೆ.

ರಾಜ್ಯದಲ್ಲಿ ಶಾಲೆಯಿಂದ ಹೊರಗುಳಿದಿರುವ ೦೬-೧೪ ವಯೋಮಾನದ ಮಕ್ಕಳನ್ನು ಮನವೊಲಿಸಿ ಮುಖ್ಯವಾಹಿನಿಗೆ ಕರೆತಂದು ಅವರಿಗೆ ಶಿಕ್ಷಣವನ್ನು ನೀಡಲು ಸರ್ಕಾರವು ಶಿಕ್ಷಣ ಇಲಾಖೆಯ ಮೂಲಕ ಈ ಕೆಳಕಂಡ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ.

೧. ಪ್ರತಿ ವರ್ಷವೂ ಮಕ್ಕಳ ಗಣತಿಯನ್ನು ನಡೆಸಿ (೦೬-೧೪ ವಯೋಮಾನದ) ಶಾಲೆಯಿಂದ ಹೊರಗುಳಿದ (೦೬-೧೪ ವಯೋಮಾನದ) ಮಕ್ಕಳನ್ನು ಗುರುತಿಸಿ ಅವರನ್ನು ಶಾಲಾ ಮುಖ್ಯವಾಹಿನಿಗೆ ಕರೆತರಲಾಗುತ್ತಿದೆ.

೨. ದಾಖಲಾತಿ ಆಂದೋಲನ : ಶಾಲೆ ಪ್ರಾರಂಭವಾದ ನಂತರ, ಒಂದು ತಿಂಗಳ ಕಾಲ ನಾನಾ ಕಾರಣಗಳಿಂದ ಶಾಲೆಗೆ ಹಿಂದಿರುಗದೆ ಇರುವ ಮಕ್ಕಳನ್ನು ಪೋಷಕರ ಮನವೊಲಿಸಿ ಶಾಲಾ ವ್ಯಾಪ್ತಿಗೆ ಕರೆತರುವ ಒಂದು ವಿಶಿಷ್ಟ ಕಾರ್ಯಕ್ರಮವಾಗಿದೆ.

೩. ಕೂಲಿಯಿಂದ ಶಾಲೆಗೆ : ೦೬-೧೪ ವಯೋಮಾನದ ಮಕ್ಕಳನ್ನು ದುಡಿಮೆಯಲ್ಲಿ ತೊಡಗಿಸಿಕೊಂಡಿರುವ ಪೋಷಕರು ಮತ್ತು ಮಾಲೀಕರಲ್ಲಿ ಜಾಗೃತಿ ಮೂಡಿಸಿ, ಶಾಲೆಯಿಂದ ಹೊರಗುಳಿದು ದುಡಿಮೆಯಲ್ಲಿ ತೊಡಗಿರುವ ಮಕ್ಕಳನ್ನು ಶೈಕ್ಷಣಿಕ ಮುಖ್ಯವಾಹಿನಿಗೆ ತರುವ ಒಂದು ಕಾರ್ಯಕ್ರಮವಾಗಿದೆ.

೪. ಚಿಣ್ಣರ ಅಂಗಳ : ೦೬-೧೪ ವಯೋಮಾನದ ಶಾಲೆಯಿಂದ ಹೊರಗಿರುವ ಮಕ್ಕಳನ್ನು ನೇರವಾಗಿ ಶಾಲೆಗಳಿಗೆ ಸೇರಿಸುವ ಮುನ್ನ ಮಕ್ಕಳಲ್ಲಿ ಶಾಲಾ ಸಿದ್ಧತೆಯನ್ನು ಉಂಟು ಮಾಡಲು ಬೇಸಿಗೆ ರಜೆಯಲ್ಲಿ ಎರಡು ತಿಂಗಳ ಕಾಲ ನಡೆಸುವ 'ಸೇತುಬಂಧ' ಕಾರ್ಯಕ್ರಮವಾಗಿದೆ. ಈ ಅವಧಿಯಲ್ಲಿ ಮಕ್ಕಳ ಪ್ರಾರಂಭಿಕ ಸಾಮರ್ಥ್ಯಗಳನ್ನು ಗುರುತಿಸಿ, ಚಟುವಟಿಕೆ ಆಧಾರಿತವಾಗಿ ಮತ್ತು ಆನಂದದಾಯಕವಾಗಿ ಕಲಿಸಿ ಔಪಚಾರಿಕವಾಗಿ ಶಾಲೆಯಲ್ಲಿ ಕಲಿಯಲು ಆಸಕ್ತಿ ಮೂಡಿಸುವುದು.

೫. ಬಾ ಬಾಲೆ ಶಾಲೆಗೆ : ಶಿಕ್ಷಣದಿಂದ ವಂಚಿತರಾಗಿರುವ ೦೬-೧೪ ವಯೋಮಾನದ ಹೆಣ್ಣುಮಕ್ಕಳನ್ನು ಶಾಲೆಗೆ ಕರೆತರಲು ಮತ್ತು ಅವರಿಗೆ ಕನಿಷ್ಟ ೮ ವರ್ಷಗಳ ವಿದ್ಯೆ ಸಿಗುವಂತೆ ಮಾಡಲು ಹಾಗೂ ಲಿಂಗ ತಾರತಮ್ಯ ಹೋಗಲಾಡಿಸಲು ರೂಪಿಸಿರುವ ಒಂದು ವಿಶೇಷ ಕಾರ್ಯಕ್ರಮವಾಗಿದೆ.

೬. ಬಾ ಮರಳಿ ಶಾಲೆಗೆ : ಇದನ್ನು ನವೆಂಬರ್-ಡಿಸೆಂಬರ್ ೨೦೦೨ರಲ್ಲಿ ಈ ಕಾರ್ಯಕ್ರಮವನ್ನು ರೂಪಿಸಿ ಶಾಲೆಯ ಶಿಕ್ಷಕರು ಮತ್ತು ಮಕ್ಕಳು ಎಸ್.ಡಿ.ಎಂ.ಸಿ ಸದಸ್ಯರು ಹಾಗೂ ಸಮುದಾಯ ಮುಖಂಡರು ಸೇರಿ ಶಾಲೆ ಬಿಟ್ಟ ಮಕ್ಕಳ ಪೋಷಕರ ಮನೆಗಳಿಗೆ ಭೇಟಿ ನೀಡಿ ಶಿಕ್ಷಣದ ಬಗ್ಗೆ ಅರಿವು ಮೂಡಿಸಿ ಮಕ್ಕಳನ್ನು ಶಾಲೆಗೆ ದಾಖಲು ಮಾಡುವ ಕಾರ್ಯಕ್ರಮ ಇದಾಗಿದೆ.

೭. ಬೀದಿಯಿಂದ ಶಾಲೆಗೆ : ನಗರ ಮತ್ತು ಪಟ್ಟಣ ಪ್ರದೇಶಗಳಲ್ಲಿ ತಂದೆ ತಾಯಿಗಳಿಂದ ದೂರವುಳಿದು ಅನಾಥರಾಗಿ ಬೀದಿ ಪಾಲಾಗಿರುವ ಮತ್ತು ಬೀದಿಗಳಲ್ಲಿ ಭಿಕ್ಷೆ ಬೇಡುತ್ತಿರುವ ೦೬-೧೬ ವಯೋಮಾನದ ಶಾಲೆಯಿಂದ ಹೊರಗುಳಿದ ಮಕ್ಕಳನ್ನು ಸಂಘ ಸಂಸ್ಥೆಗಳ ಮೂಲಕ ಶೈಕ್ಷಣಿಕ ಮುಖ್ಯವಾಹಿನಿಗೆ ಕರೆತರುವ ಉದ್ದೇಶ ಈ ಕಾರ್ಯಕ್ರಮದ್ದು.

೮. ಸದಾ ಶಾಲೆ : ಶಾಲೆಯಿಂದ ಹೊರಗಿರುವ ೦೬-೧೪ ವಯೋಮಾನದ ಅನಿವಾರ್ಯ ಕಾರಣಗಳಿಂದ ದುಡಿಯುತ್ತಿರುವ ಮಕ್ಕಳಿಗೆ ಶಿಕ್ಷಣದ ಅವಕಾಶ ಒದಗಿಸಲು ಅವರ ಸಮಯಕ್ಕೆ ಸರಿ ಹೊಂದುವಂತೆ ಶಾಲೆಗಳನ್ನು ತೆರೆದು ಕಲಿಕೆಯಲ್ಲಿ ಆಸಕ್ತಿ ಮೂಡಿಸಿ ನಂತರ ಔಪಚಾರಿಕ ಶಾಲೆಗಳಿಗೆ ಸೇರಿಸುವ ಕಾರ್ಯಕ್ರಮವಾಗಿದೆ.

೯. ಹೆಣ್ಣು ಮಕ್ಕಳ ಶಿಕ್ಷಣಕ್ಕಾಗಿ ನೂತನ ರಾಷ್ಟ್ರೀಯ ಕಾರ್ಯಕ್ರಮ : ಇದು ಮಹಿಳಾ ಸಾಕ್ಷರತಾ ಪ್ರಮಾಣದಲ್ಲಿ ಉತ್ತಮಪಡಿಸುವ ಹಾಗೂ ಲಿಂಗ ತಾರತಮ್ಯವನ್ನು ನಿವಾರಿಸುವ ಮಹತ್ವದ ಯೋಜನೆ ಇದಾಗಿದೆ.

ಸರ್ಕಾರ ಇಷ್ಟೆಲ್ಲಾ ಯೋಜನೆಗಳನ್ನು ಹಾಕಿಕೊಂಡರೂ ಸಹ ಶಾಲೆಯಿಂದ ಹೊರಗುಳಿದ ಮಕ್ಕಳ ಸಂಖ್ಯೆ ನಾವು ನಿರೀಕ್ಷಿಸಿದಷ್ಟು ಪ್ರಮಾಣದಲ್ಲಿ ಕಡಿಮೆಯಾಗಿಲ್ಲ ಎನ್ನಬಹುದು.

**ಕೋಷ್ಟಕ-೭.೧**

## ಶಾಲೆ ಬಿಡುವವರ ಪ್ರಮಾಣ

| ವಿವರ | ೨೦೦೨-೦೩ | ೨೦೦೩-೦೪ |
|---|---|---|
| ೧-೪ ತರಗತಿ | ೧೨.೩೫ | ೧೦.೯೮ |
| ೫-೭ ತರಗತಿ | ೨೦.೩೮ | ೧೯.೦೧ |
| ೧-೫ ತರಗತಿ | ೦೮.೯೦ | ೦೮.೩೯ |
| ೬-೭ ತರಗತಿ | ೧೨.೯೧ | ೦೫.೦೧ |

ಮೂಲ : ಕರ್ನಾಟಕ ಆರ್ಥಿಕ ಸಮೀಕ್ಷೆ, ೨೦೦೩-೦೪

ಕೋಷ್ಟಕದಲ್ಲಿ ಹೇಳಿರುವಂತೆ ಶಾಲೆ ಬಿಡುವವರ ಪ್ರಮಾಣ ೫ನೇ ತರಗತಿಯಿಂದ ೭ನೇ ತರಗತಿಯವರೆಗೆ ೨೦೦೨-೦೩ರಲ್ಲಿ ೨೦.೩೮ ಇದ್ದು ನಂತರ ೨೦೦೩-೦೪ರಲ್ಲಿ ಸ್ವಲ್ಪ ಪ್ರಮಾಣದಲ್ಲಿ ಮಾತ್ರ ಇಳಿಮುಖವಾಗಿರುವುದನ್ನು ಗಮನಿಸಬಹುದು.

ಸರ್ಕಾರದ ವಿಭಿನ್ನ ಕಾರ್ಯಕ್ರಮಗಳ ಮೂಲಕ ೨೦೦೧ನೇ ಇಸವಿಯಲ್ಲಿ ಆರು ಲಕ್ಷ ಮಕ್ಕಳನ್ನು ಮರಳಿ ಶಾಲೆಗೆ ತರುವಲ್ಲಿ ಯಶಸ್ವಿಯಾಗಿದೆ. ೨೦೦೧ರಲ್ಲಿ ನಡೆಸಲಾದ ಮಕ್ಕಳ

ಸಮೀಕ್ಷೆಯಂತೆ ೦೬-೧೪ ವರ್ಷಗಳ ವಯೋಗುಂಪಿನ ೧೦,೫೩,೭೪೪ ಮಕ್ಕಳು ಶಾಲೆಯಿಂದ ಹೊರಗುಳಿದಿದ್ದಾರೆಂದು ದಾಖಲಿಸಲಾಗಿದೆ. ೨೦೦೩ರಲ್ಲಿ ಅದು ೪.೦೫ಲಕ್ಷಕ್ಕೆ ಇಳಿದಿದೆ (ಮಕ್ಕಳ ಸಮೀಕ್ಷೆ, ೨೦೦೩ ಸಿ.ಪಿ.ಐ ಕರ್ನಾಟಕ). ಆದರೂ ಸಹ ನಿರೀಕ್ಷಿಸಿದಷ್ಟು ಫಲಿತಾಂಶ ಶಿಕ್ಷಣ ಕ್ಷೇತ್ರದಲ್ಲಿ ಆಗಿಲ್ಲ. ರಾಜ್ಯದ ಅದರಲ್ಲಿ ಈಶಾನ್ಯ ಭಾಗದಲ್ಲಿ ಶಾಲೆ ಬಿಡುವವರ ಮಕ್ಕಳ ಸಂಖ್ಯೆ ಹೆಚ್ಚಾಗುತ್ತಿದೆ.

**ಕೋಷ್ಟಕ-೭.೨**

## ಶಾಲೆಯಿಂದ ಹೊರಗುಳಿದ ಮಕ್ಕಳ ಸಂಖ್ಯೆ (%)

| ಪ್ರಾದೇಶಿಕ ಭಾಗಗಳು | ಬಾಲಕರು | ಬಾಲಕಿಯರು | ಒಟ್ಟು |
|---|---|---|---|
| ಕರ್ನಾಟಕ | ೨೨.೭ | ೩೩.೮ | ೨೮.೨ |
| ದಕ್ಷಿಣ ಕರ್ನಾಟಕ | ೨೨.೦ | ೩೦.೫ | ೨೭.೭ |
| ಉತ್ತರ ಕರ್ನಾಟಕ | ೨೩.೪ | ೩೫.೯ | ೨೯.೭ |
| ಹೈದ್ರಾಬಾದ್ ಕರ್ನಾಟಕ | ೨೨.೮ | ೩೮.೦ | ೩೦.೪ |

ಮೂಲ : ಕರ್ನಾಟಕ ಅಂಕಿ-ಅಂಶಗಳ ನೋಟ, ೨೦೦೨-೦೩

ಕೋಷ್ಟಕ-೨ನ್ನು ಗಮನಿಸಿದಾಗ ನಮಗೆ ತಿಳಿದುಬರುವುದೇನೆಂದರೆ ಇತರ ಭಾಗಗಳಿಗಿಂತ ಹೈದ್ರಾಬಾದ್ ಕರ್ನಾಟಕ ಪ್ರದೇಶದಲ್ಲಿ ಹೆಚ್ಚಾಗಿ ಮಕ್ಕಳು ಶಾಲೆಯಿಂದ ಹೊರಗುಳಿದಿದ್ದಾರೆ ಎಂದು ತಿಳಿದುಬರುತ್ತದೆ.

**ಕೋಷ್ಟಕ-೭.೩**

## ತರಗತಿವಾರು ಶಾಲೆಯಿಂದ ಹೊರಗುಳಿಯುವ ಮಕ್ಕಳ ಸಂಖ್ಯೆ

| ಪ್ರಾದೇಶಿಕ ಭಾಗಗಳು | ೧-೫ನೇ ತರಗತಿ | | ೧-೮ನೇ ತರಗತಿ | | ೧-೧೦ನೇ ತರಗತಿ | |
|---|---|---|---|---|---|---|
| | ಬಾಲಕ | ಬಾಲಕಿ | ಬಾಲಕ | ಬಾಲಕಿ | ಬಾಲಕ | ಬಾಲಕಿ |
| ಕರ್ನಾಟಕ | ೩೩.೬೨ | ೩೮.೬೮ | ೪೬.೨೮ | ೫೧.೫೧ | ೫೬.೪೨ | ೬೨.೩೨ |
| ದಕ್ಷಿಣ ಕರ್ನಾಟಕ | ೩೦.೩೮ | ೩೪.೪೧ | ೪೨.೩೯ | ೪೭.೭೧ | ೪೯.೨೭ | ೫೪.೬೨ |
| ಉತ್ತರ ಕರ್ನಾಟಕ | ೩೭.೮೧ | ೪೧.೨೦ | ೪೮.೩೩ | ೫೪.೭೧ | ೫೯.೪೨ | ೬೫.೩೨ |
| ಹೈದ್ರಾಬಾದ್ ಕರ್ನಾಟಕ | ೪೧.೬೨ | ೪೭.೩೧ | ೪೯.೬೨ | ೫೮.೫೩ | ೬೩.೭೧ | ೭೦.೨೮ |

ಮೂಲ : ಅಂಕಿ-ಅಂಶಗಳ ನೋಟ, ೨೦೦೨-೦೩

ಈ ಕೋಷ್ಟಕದಲ್ಲಿ ಯಾವ ತರಗತಿಯಲ್ಲಿ ಶಾಲೆಯಿಂದ ಹೊರಗುಳಿದಿರುವ ಮಕ್ಕಳ ಸಂಖ್ಯೆ ಎಷ್ಟಿದೆ ಎಂಬುದನ್ನು ತಿಳಿಯಬಹುದು. ನಾವು ಲಿಂಗ ಸಂಬಂಧಿ ನೆಲೆಯಲ್ಲಿ ನೋಡುವುದಾದರೆ ಹೈದ್ರಾಬಾದ್ ಕರ್ನಾಟಕದಲ್ಲಿ ೧ ರಿಂದ ೧೦ನೇ ತರಗತಿಯಲ್ಲಿ ಶೇಕಡ ೭೦ರಷ್ಟು ಬಾಲಕಿಯರು ಶಾಲೆಯಿಂದ ಹೊರಗುಳಿದಿರುವುದು ಕಂಡುಬರುತ್ತದೆ. ಇಲ್ಲಿ ಗಂಡುಮಕ್ಕಳಿಗಿಂತ ಹೆಣ್ಣುಮಕ್ಕಳ ಸಂಖ್ಯೆ ಹೆಚ್ಚಾಗಿರುವುದು ಕಂಡುಬರುತ್ತದೆ.

ಶಾಲೆಯಿಂದ ಮಕ್ಕಳು ಹೊರಗುಳಿಯಲು ಕಾರಣ ಬಡತನವೇ ಎಂದು ಬಹುಪಾಲು ಅಧ್ಯಯನ ಗುರುತಿಸಿವೆ. ಇದರ ಜೊತೆಗೆ ಸಾಮಾಜಿಕ ಮತ್ತು ಆರ್ಥಿಕ ಕಾರಣ ಬಹುಮುಖ್ಯವಾಗುತ್ತವೆ. ಬಡತನ, ಉಪಜೀವನಕ್ಕಾಗಿ ಉಳ್ಳವರ ಮನೆಗಳಲ್ಲಿ ಕೆಲಸ ಮಾಡಬೇಕಾದ ಅನಿವಾರ್ಯತೆ, ಹೇಳಲು ಆಗದಂತಹ ಕಾರಣಗಳು, ಪೋಷಕರ ವಿರೋಧ ಮುಂತಾದ ಕಾರಣಗಳಿಂದ ರಾಜ್ಯದಲ್ಲಿ ಸುಮಾರು ೧.೦೫ಲಕ್ಷ ಮಕ್ಕಳು ಶಿಕ್ಷಣದಿಂದ ವಂಚಿತರಾಗಿದ್ದಾರೆ. ಸಾರ್ವಜನಿಕ ಶಿಕ್ಷಣ ಇಲಾಖೆಯು ೨೦೦೫ರಲ್ಲಿ ನಡೆಸಿದ ಗಣತಿಯಂತೆ ಶಾಲೆಯಿಂದ ಹೊರಗುಳಿದಿರುವ ೭ ರಿಂದ ೧೪ ವರ್ಷ ವಯಸ್ಸಿನ ಮಕ್ಕಳ ಸಂಖ್ಯೆ ಅಧಿಕೃತವಾಗಿ ೧,೦೫,೦೩೭.

ಮಕ್ಕಳನ್ನು ಮನೆ ಕೆಲಸಕ್ಕಾಗಿ ಉಳಿಸಿಕೊಂಡಿರುವುದು ಹಾಗೂ ಶಾಲೆಗೆ ಕಳುಹಿಸಲು ಆಗದಂತ ಬಡತನದಿಂದಲೆ ಹೆಚ್ಚಿನ ಮಕ್ಕಳು ಶಾಲೆಯ ಮೆಟ್ಟಿಲನ್ನು ತುಳಿಯಲು ಸಾಧ್ಯವಾಗಿಲ್ಲ ಎಂಬುದು ತಿಳಿದುಬರುತ್ತದೆ. ೫೯,೦೦೨ ಮಕ್ಕಳು ಶಾಲೆಯನ್ನು ಮಧ್ಯದಲ್ಲೇ ಬಿಟ್ಟಿದ್ದರೆ, ೪೬,೦೩೫ ಮಕ್ಕಳು ಶಾಲೆಗೆ ಸೇರ್ಪಡೆಯೇ ಆಗಿಲ್ಲ ಹಾಗೂ ಹೆಣ್ಣುಮಕ್ಕಳನ್ನು ಸುಶಿಕ್ಷಿತರಾಗಿಸುವ ಮಾತುಗಳು ಸಾಕಷ್ಟು ಕೇಳಿ ಬಂದರೂ, ಶಾಲೆಯಿಂದ ಹೊರಗೆ ಉಳಿದವರಲ್ಲಿ ಬಾಲಕಿಯರ ಸಂಖ್ಯೆಯೇ ಅಧಿಕ ಎಂಬುದು ತಿಳಿದುಬರುತ್ತದೆ. ಶಿಕ್ಷಣ ವಂಚಿತರಲ್ಲಿ ೫೩,೫೨೭ ಬಾಲಕಿಯರಿದ್ದರೆ, ೫೧,೫೧೦ ಬಾಲಕರಿದ್ದಾರೆ. ವಿಭಾಗವಾರು ಅಂಕಿ-ಅಂಶಗಳನ್ನು ಗಮನಿಸಿದಾಗ ಗುಲ್ಬರ್ಗಾ ವಿಭಾಗದಲ್ಲಿ ಶಾಲೆಯಿಂದ ಹೊರಗುಳಿದ ಮಕ್ಕಳ ಸಂಖ್ಯೆ ಹೆಚ್ಚಾಗಿದೆ. ಈ ವಿಭಾಗದಲ್ಲಿ ೨೫,೪೮೨ ಬಾಲಕಿಯರು ಸೇರಿದಂತೆ ೪೮,೯೫೩ ಮಕ್ಕಳು ಶಾಲೆಯಿಂದ ಹೊರಗುಳಿದಿದ್ದಾರೆ. ನಂತರದ ಸ್ಥಾನದಲ್ಲಿ ಬೆಳಗಾವಿ (೨೩,೪೫೭) ಬೆಂಗಳೂರು (೨೧,೫೭೪) ಮತ್ತು ಮೈಸೂರು (೧೧,೭೧೩) ವಿಭಾಗಗಳಿವೆ (ಪ್ರಜಾವಾಣಿ, ೨೦೦೫).

ಈ ಪೈಕಿ ೩೪,೩೭೫ ಮಕ್ಕಳು ಶಾಲೆಯಿಂದ ಹೊರಗುಳಿಯಲು ನಿಖರವಾದ ಕಾರಣಗಳನ್ನು ತಿಳಿಸಿಲ್ಲ. ಅಂಗವಿಕಲತೆ, ವಲಸೆ ಮತ್ತಿತರ ಕಾರಣಗಳು ೧,೦೦೦ ದಿಂದ ೧,೫೦೦ ಮಕ್ಕಳು ಶಾಲೆ ಮೆಟ್ಟಿಲು ಏರದಿರಲು ಕಾರಣಗಳಾಗಿವೆ. ಒಟ್ಟು ೧೬,೦೪೦ ಮಕ್ಕಳ ವಿಷಯದಲ್ಲಿ ಶಾಲೆಗೆ ಹೋಗದಿರಲು ಮನೆಕೆಲಸವೇ ಕಾರಣವಾಗಿದ್ದರೆ, ಬಡತನದ ಹಿನ್ನೆಲೆಯಲ್ಲಿ ಉಪಜೀವನಕ್ಕೆ ಕೆಲಸ ಮಾಡುವುದು ಅನಿವಾರ್ಯವಾದ್ದರಿಂದ ೧೩,೯೧೩ ಮಕ್ಕಳು ಶಾಲೆಗೆ ಹೋಗುತ್ತಿಲ್ಲ ಎಂದು ಪೋಷಕರು ತಿಳಿಸಿದ್ದಾರೆ.

ಪೋಷಕರ ಅಸಹಕಾರ, ವಿರೋಧದ ಹಿನ್ನೆಲೆಯಲ್ಲಿ ೬,೮೧೧ ಮಕ್ಕಳು ಶಾಲೆಗೆ ಹೋಗುತ್ತಿಲ್ಲ. ಶಾಲೆಯು ಮನೆಯಿಂದ ತುಂಬಾ ದೂರವಿದೆ ಎಂಬ ಕಾರಣ (೨,೯೧೫ ಮಕ್ಕಳು) ಹಾಗೂ ಶಾಲೆಯ ವಾತಾವರಣ ಆಕರ್ಷಕವಾಗಿಲ್ಲ ಎಂಬ ಕಾರಣದಿಂದ (೫೭೧ ಮಕ್ಕಳು) ಶಾಲೆಯಿಂದ ಹೊರಗುಳಿದಿದ್ದಾರೆ (ಪ್ರಜಾವಾಣಿ ಏಪ್ರಿಲ್ ೧೬, ೨೦೦೫).

### ಕೋಷ್ಟಕ-೭.೪

## ರಾಜ್ಯದಲ್ಲಿ ಶಿಕ್ಷಣ ವಂಚಿತರಾಗಿರುವ ಮಕ್ಕಳ ವಿವರ

| ವಯೋಮಾನ | ಒಟ್ಟು | | | ಶಿಕ್ಷಣ ವಂಚಿತರು | | |
|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೩-೫ ವರ್ಷ | ೯.೮ | ೯.೨೧ | ೧೯.೦೨ | ೦.೬೧ | ೦.೫೭ | ೧.೧೯ |
| ೬-೧೪ ವರ್ಷ | ೩೯.೩೪ | ೩೬.೮೫ | ೭೬.೨೦ | ೦.೮೦೨ | ೦.೮೦೨ | ೧.೬೧ |
| ೭-೧೪ ವರ್ಷ | ೩೫.೦೪ | ೩೩.೦೦ | ೬೮.೦೭ | ೦.೫೨ | ೦.೫೩ | ೧.೫೦ |

ಸಂಖ್ಯೆಗಳು : ಲಕ್ಷಗಳಲ್ಲಿ

ಮೂಲ : ಪ್ರಜಾವಾಣಿ ಏಪ್ರಿಲ್ ೧೬, ೨೦೦೫

### ಕೋಷ್ಟಕ-೭.೫

## ೦೬-೧೪ ವರ್ಷ ವಯೋಗುಂಪಿನ ಶಾಲೆಯಿಂದ ಹೊರಗುಳಿದ ಶೇಕಡವಾರು ಮಕ್ಕಳು

| ಕ್ರ.ಸಂ | ವರ್ಗ | ಶಾಲೆಯಿಂದ ಹೊರಗುಳಿದ ಶೇಕಡವಾರು ಮಕ್ಕಳು | | |
|---|---|---|---|---|
| | | ಗಂಡು | ಹೆಣ್ಣು | ಒಟ್ಟು |
| ೧. | ಎಲ್ಲಾ ವರ್ಗಗಳು | ೧.೪೭ | ೧.೬೨ | ೧.೫೪ |
| ೨. | ಪರಿಶಿಷ್ಟ ಜಾತಿ | ೧.೯೯ | ೨.೪೭ | ೨.೨೨ |
| ೩. | ಪರಿಶಿಷ್ಟ ಪಂಗಡ | ೨.೧೧ | ೨.೬೭ | ೨.೪೨ |
| ೪. | ಮುಸ್ಲಿಮರು | ೧.೩ | ೧.೨೪ | ೧.೨೭ |

ಮೂಲ : ಮಕ್ಕಳ ಜನಗಣತಿ, ಸಾರ್ವಜನಿಕ ಶಿಕ್ಷಣ ಇಲಾಖೆ, ೨೦೦೫

ಸಾರ್ವಜನಿಕ ಶಿಕ್ಷಣ ಇಲಾಖೆಯು ೨೦೦೫ರಲ್ಲಿ ನಡೆಸಿದ ಮಕ್ಕಳ ಗಣತಿಯ ಪ್ರಕಾರ ೭-೧೪ ವರ್ಷದ ಗುಂಪಿನಲ್ಲಿ ಶಾಲೆಯಿಂದ ಹೊರಗುಳಿದ ಶೇಕಡವಾರು ಮಕ್ಕಳಲ್ಲಿ ಪರಿಶಿಷ್ಟ ಪಂಗಡ ಹಾಗೂ ಪರಿಶಿಷ್ಟ ಜಾತಿಗೆ ಸೇರಿದ ಮಕ್ಕಳ ಪ್ರಮಾಣ ಬಹಳ ಹೆಚ್ಚಾಗಿರುತ್ತದೆ. ಈ ಎರಡೂ ಸಾಮಾಜಿಕ ವರ್ಗಗಳಲ್ಲಿ ಶಾಲೆಯಿಂದ ಹೊರಗುಳಿದ ಬಾಲಕಿಯರು ಅತಿಹೆಚ್ಚು ಶೇಕಡವಾರು ಪ್ರಮಾಣದಲ್ಲಿದ್ದಾರೆ.

**ಕೋಷ್ಟಕ-೭.೬**

## ಪ್ರದೇಶವಾರು ಪ್ರಾಥಮಿಕ ಮಟ್ಟದಲ್ಲಿ (೧ ರಿಂದ ೭) ಶಾಲೆ ಬಿಟ್ಟು ಹೋದವರ ಮಕ್ಕಳ ಪ್ರಮಾಣ

| ಪ್ರದೇಶ ರಾಜ್ಯ | ೧೯೯೯-೨೦೦೦ | | | ೨೦೦೩-೦೪ | | |
|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ದಕ್ಷಿಣ ಕರ್ನಾಟಕ | ೨೭.೬ | ೨೫.೮ | ೨೬.೭ | ೨೦.೧ | ೨೦.೮ | ೨೦.೪ |
| ಬಾಂಬೆ ಕರ್ನಾಟಕ | ೩೧.೪ | ೪೩.೧ | ೩೬.೮ | ೨೮.೧ | ೩೧.೫ | ೨೯.೭ |
| ಹೈದ್ರಾಬಾದ್ ಕರ್ನಾಟಕ | ೫೪.೫ | ೫೮.೯ | ೫೬.೫ | ೪೨.೮ | ೫೧.೧ | ೪೬.೭ |
| ಉತ್ತರ ಕರ್ನಾಟಕ | ೪೨.೩ | ೫೦.೪ | ೪೬.೦ | ೩೪.೯ | ೪೦.೫ | ೩೭.೫ |
| ರಾಜ್ಯದ ಒಟ್ಟು | ೩೪.೬ | ೩೬.೭ | ೩೫.೬ | ೨೭.೬ | ೩೦.೪ | ೨೯.೦ |

ಮೂಲ : ಕರ್ನಾಟಕ ಮಾನವ ಅಭಿವೃದ್ಧಿ ವರದಿ, ೨೦೦೫

ಈ ಕೋಷ್ಟಕದಲ್ಲಿ ಪ್ರದೇಶವಾರು ಶಾಲೆ ಬಿಟ್ಟು ಹೋದ ಮಕ್ಕಳ ಪ್ರಮಾಣವನ್ನು ತೋರಿಸಲಾಗಿದೆ. ಇದಕ್ಕೆ ಮುಖ್ಯಕಾರಣ ಬಡವರು ಶಿಕ್ಷಣದ ಅವಕಾಶದ ವೆಚ್ಚವನ್ನು ಭರಿಸಲು ಸಾಧ್ಯವಿಲ್ಲದಿರುವುದರಿಂದ ಹೆಚ್ಚಿನ ಸಂಖ್ಯೆಯ ಮಕ್ಕಳು ಶಾಲೆ ಬಿಡುತ್ತಿದ್ದಾರೆ (ಮಾನವ ಅಭಿವೃದ್ಧಿ ವರದಿ, ೨೦೦೫). ಎಲ್ಲಾ ತರಗತಿಗಳಲ್ಲೂ ಬಾಲಕಿಯರು ಶಾಲೆಯನ್ನು ಬಿಟ್ಟು ಹೋಗುವ ಪ್ರಮಾಣ ಬಾಲಕರಿಗಿಂತ ಹೆಚ್ಚಾಗಿದೆ. ಕಳೆದ ಕೆಲವು ವರ್ಷಗಳಿಂದ ಬಾಲಕರು ಹಾಗೂ ಬಾಲಕಿಯರಿಬ್ಬರಲ್ಲೂ ಶಾಲೆಯನ್ನು ಬಿಟ್ಟು ಹೋಗುವ ಪ್ರಮಾಣದಲ್ಲಿ ಇಳಿಕೆಯಾಗದೆ ರಾಜ್ಯದಲ್ಲಿ ಮಕ್ಕಳು ಶಾಲೆಯನ್ನು ಬಿಟ್ಟು ಹೋಗುವ ದರಗಳಲ್ಲೂ ಸಹ ಪ್ರಾದೇಶಿಕ ತಾರತಮ್ಯವು ತನ್ನ ವಿಷಮರೂಪ ತೋರಿಸಿದೆ. ೨೦೦೩-೦೪ರಲ್ಲಿ ದಕ್ಷಿಣ ಕರ್ನಾಟಕದ ಜಿಲ್ಲೆಗಳಲ್ಲಿ ಬಾಲಕ, ಬಾಲಕಿಯರು ಹಾಗೂ ಎಲ್ಲಾ ಮಕ್ಕಳು ಶಾಲೆಯನ್ನು ಬಿಟ್ಟು ಹೋಗುವ ಒಟ್ಟು ದರವು ರಾಜ್ಯದ ಸರಾಸರಿ ಮತ್ತು ಉತ್ತರ ಕರ್ನಾಟಕಕ್ಕಿಂತ ಕಡಿಮೆ ಇದೆ. ಉತ್ತರ ಕರ್ನಾಟಕದಲ್ಲಿಯೇ, ಹೈದ್ರಾಬಾದ್ ಕರ್ನಾಟಕ

ಮತ್ತು ಬಾಂಬೆ ಕರ್ನಾಟಕ ಪ್ರದೇಶಗಳಲ್ಲಿ ಅಂತರವಿದೆ. ಹೈದ್ರಾಬಾದ್ ಕರ್ನಾಟಕದಲ್ಲಿ ಶಾಲೆಯನ್ನು ಮಧ್ಯದಲ್ಲಿ ಶಾಲೆ ಬಿಟ್ಟು ಹೋಗುವವರ ದರವು ೧೯೯೯-೨೦೦೦ದಲ್ಲಿ ಶೇಕಡ ೫೬.೫ ಹಾಗೂ ೨೦೦೩-೦೪ರಲ್ಲಿ ಶೇಕಡ ೪೬.೭ರಷ್ಟಿದ್ದು, ಇದು ಬಾಂಬೆ ಕರ್ನಾಟಕ ಪ್ರದೇಶದಲ್ಲಿ ೧೯೯೯-೨೦೦೦ದಲ್ಲಿ ಶೇಕಡ ೩೬.೮ ಮತ್ತು ೨೦೦೩-೦೪ರಲ್ಲಿ ಶೇಕಡ ೨೯.೭ಗಳಿಗಿಂತ ಅಧಿಕವಾಗಿರುವುದು ಕಂಡುಬರುತ್ತದೆ. ಮಕ್ಕಳು ಶಾಲೆಯನ್ನು ಬಿಟ್ಟು ಹೋಗುವ ದರದಲ್ಲಿನ ಲಿಂಗಾಧಾರಿತ ಅಂತರವು ಉತ್ತರ ಕರ್ನಾಟಕದಲ್ಲಿ ಅತಿಹೆಚ್ಚಾಗಿದ್ದು ಇದು ದಕ್ಷಿಣ ಕರ್ನಾಟಕದಲ್ಲಿನ ನಿಧಾನ ಗತಿಯಲ್ಲಿ ಕಡಿಮೆಯಾಗುತ್ತಿದೆ. ಮಕ್ಕಳು ಶಾಲೆಯನ್ನು ಬಿಟ್ಟು ಹೋಗುವಿಕೆಯ ದರದಲ್ಲಿನ ತೀವ್ರಗತಿಯ ಇಳಿಕೆಯು ಎಲ್ಲಾ ಅರ್ಹ-ಮಕ್ಕಳನ್ನು ಶಾಲೆಗೆ ದಾಖಲಿಸುವುದು, ಶಾಲೆಯಲ್ಲೇ ಉಳಿಯುವಂತೆ ಮಾಡುವುದು ಹಾಗೂ ಶಾಲೆಯಿಂದ ಹೊರಗುಳಿದ ಮಕ್ಕಳನ್ನು ಔಪಚಾರಿಕ ಹಾಗೂ ಅನೌಪಚಾರಿಕ ಶಿಕ್ಷಣ ವ್ಯವಸ್ಥೆಗೆ ಮರಳಿ ತರುವಲ್ಲಿ ರಾಜ್ಯದ ಅವಿರತ ಪ್ರಯತ್ನಕ್ಕೆ ಸಂದಫಲವೆಂದು ಪರಿಗಣಿಸಬಹುದು. ಇಂತಹ ಅನೇಕ ಯೋಜನೆಗಳು ರಾಜ್ಯದಲ್ಲಿ ಶೈಕ್ಷಣಿಕವಾಗಿ ಹಿಂದುಳಿದ ಜಿಲ್ಲೆಗಳ ಕಡೆ ಗಮನಹರಿಸಿವೆ.

ಒಟ್ಟಾರೆಯಾಗಿ ಶಿಕ್ಷಣವು ಮಗುವಿನ ಮೂಲಭೂತ ಹಕ್ಕು. ಇದನ್ನು ಪ್ರತಿಯೊಂದು ಮಗು ಪಡೆಯಬೇಕು ಎನ್ನುವ ಹಿನ್ನೆಲೆಯಲ್ಲಿ ಸರ್ಕಾರ ಏನೆಲ್ಲಾ ಯೋಜನೆಗಳನ್ನು ಕಾರ್ಯರೂಪಕ್ಕೆ ತಂದರೂ ಸಹ ಇಂದು ಸುಮಾರೂ ಲಕ್ಷ ಮಕ್ಕಳು ಶಾಲೆಯಿಂದ ಹೊರಗುಳಿದಿದ್ದಾರೆ. ಸರ್ಕಾರ ಪ್ರಾಥಮಿಕ ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸುವ ಪ್ರಯತ್ನ ಮರೀಚಿಕೆಯಾಗಿ ನಿಂತಿದೆ ಎಂದು ಹೇಳಬಹುದು. ಹಾಗೆಯೆ ಪ್ರಾಥಮಿಕ ಶಾಲೆಯಲ್ಲಿ ಒಂದನೇ ತರಗತಿಯಿಂದ ಏಳನೇ ತರಗತಿಯವರೆಗೆ ದಾಖಲಾದ ಮಕ್ಕಳ ವಿವರಗಳನ್ನು ವಿಶ್ಲೇಷಿಸಲಾಗಿದೆ. ಮತ್ತು ಮಧ್ಯದಲ್ಲಿ ಶಾಲೆ ಬಿಟ್ಟವವರ ಮಕ್ಕಳನ್ನು ಪ್ರಾದೇಶಿಕವಾಗಿ ಮತ್ತು ವಿಭಾಗವಾಗಿ ಗುರುತಿಸಲಾಗಿದೆ. ಮಕ್ಕಳು ಮತ್ತೇ ಶಾಲೆಗೆ ಕರೆತರುವಲ್ಲಿ ಇರುವಂತಹ ಮುಖ್ಯವಾದ ಕಾರ್ಯಕ್ರಮಗಳನ್ನು ಚರ್ಚಿಸಲಾಗಿದೆ.

ಹೀಗೆ ಈ ಮೇಲಿನ ಎಲ್ಲಾ ಕಾರ್ಯಕ್ರಮಗಳು ಹೆಣ್ಣುಮಕ್ಕಳ ಶಿಕ್ಷಣವನ್ನು ಬೆಂಬಲಿಸಿದ್ದಾವೆ. ಈ ಯೋಜನೆಗಳಿಂದಾಗಿ ಹೆಣ್ಣುಮಕ್ಕಳ ಶಾಲಾ ಭಾಗವಹಿಸುವಿಕೆಯಲ್ಲಿ ಹೆಚ್ಚಳ ಕಂಡಿದೆ. ಹಾಜರಾತಿ ಉತ್ತಮಗೊಂಡಿದೆ. ಕಲಿಯುವ ಮಕ್ಕಳ ಆರೋಗ್ಯ ವೃದ್ಧಿಗೊಂಡಿದೆ. ಹೆಣ್ಣುಮಕ್ಕಳು ಶಾಲೆಯನ್ನು ಮಧ್ಯದಲ್ಲಿ ಬಿಡುವುದು ಸ್ವಲ್ಪಮಟ್ಟಿಗೆ ತಪ್ಪಿದೆ. ಮಕ್ಕಳ ಕಲಿಕೆಯಲ್ಲಿ ಆಸಕ್ತಿ ಹಾಗೂ ಅಭಿರುಚಿ ಹೆಚ್ಚಿಸಿದೆ ಎಂಬುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡು ಬಂತು. ತಳವರ್ಗ ಮತ್ತು ಮಧ್ಯಮ ವರ್ಗದ ಪೋಷಕರನ್ನು ಸಂದರ್ಶಿಸಿ ಕೇಂದ್ರ ಮತ್ತು ರಾಜ್ಯ ಸರ್ಕಾರದ ಈ ಯೋಜನೆಗಳು (ಶಿಷ್ಯವೇತನ, ಸಮವಸ್ತ್ರ, ಬಿಸಿಯೂಟ ಇತ್ಯಾದಿ) ನಿಮ್ಮ ಮಕ್ಕಳ ಶಿಕ್ಷಣಕ್ಕೆ ಉಪಯೋಗ ಅಥವಾ ಸಹಾಯವಾಗಿವೆಯೇ ಎಂದು ಕೇಳಿದಾಗ ಶೇಕಡ ೯೮ರಷ್ಟು ಪೋಷಕರು ಶಿಷ್ಯವೇತನ, ಬಿಸಿಯೂಟ,

ಸಮವಸ್ತ್ರ, ಇತ್ಯಾದಿ ಸೌಲಭ್ಯಗಳು ತುಂಬಾ ಸಹಕಾರಿಯಾಗಿವೆ ಎಂದಿದ್ದಾರೆ. ಒಂದು ವೇಳೆ ಈ ಸೌಲಭ್ಯಗಳು ಇಲ್ಲದಿದ್ದರೆ ನಮ್ಮ ಮಕ್ಕಳಿಗೆ ಪ್ರಾಥಮಿಕ ಶಿಕ್ಷಣ ಕೊಡಿಸುವುದು ಕಷ್ಟದಾಯಕವಾಗುತ್ತಿತ್ತು ಎಂದು ಹೇಳಿದ್ದಾರೆ. ಬಿಸಿಯೂಟ ಜಾರಿಗೆ ಬಂದ ನಂತರ ಮಧ್ಯದಲ್ಲಿ ಶಾಲೆ ಬಿಟ್ಟ ಸುಮಾರು ಮಕ್ಕಳು ಮತ್ತೆ ಶಾಲೆಗೆ ಹಾಜರಾಗಿದ್ದಾರೆ ಎಂಬುದನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಶಿಕ್ಷಕರು ಹೇಳಿದರು. ಹೆಣ್ಣುಮಕ್ಕಳಿಗಾಗಿ ಕೊಡುತ್ತಿರುವ ಕಿತ್ತೂರು ರಾಣಿಚೆನ್ನಮ್ಮ ಶಿಷ್ಯವೇತನ ಮತ್ತು ಇತ್ತೀಚೆಗೆ ಜಾರಿಗೆ ಬಂದಿರುವಂತಹ ಹಾಜರಾತಿ ಶಿಷ್ಯವೇತನ ಈ ಎಲ್ಲಾ ಕಾರ್ಯಕ್ರಮಗಳು ಮಕ್ಕಳ ಕಲಿಕೆಗೆ ಸ್ಫೂರ್ತಿ ಮತ್ತು ಸಹಾಯಕವಾಗಿವೆ. ಸರ್ಕಾರವು ಹೈಸ್ಕೂಲ್ ಮಟ್ಟದಲ್ಲಿ ಹೆಣ್ಣುಮಕ್ಕಳಿಗೆ ಇತ್ತೀಚೆಗೆ ಸೈಕಲ್ ಕೊಡಲಾಗುತ್ತಿದೆ. ಇದರಿಂದಾಗಿ ಗ್ರಾಮೀಣ ಪ್ರದೇಶದಿಂದ ಪಟ್ಟಣಕ್ಕೆ ಅಥವಾ ಪಕ್ಕದ ಊರಿಗೆ ಶಾಲೆಗೆ ಬರಲು ಸಹಾಯವಾಗಿದೆ. ಮಕ್ಕಳು ಗ್ರಾಮೀಣ ಪ್ರದೇಶದಲ್ಲಿ ಬಸ್‌ಗಳಿಲ್ಲದೆ ನಾಲ್ಕು, ಐದು ಕಿಲೋ ಮೀಟರ್ ನಡೆದು ಬರಬೇಕಾಗಿತ್ತು, ಇಲ್ಲದಿದ್ದರೆ ಶಾಲೆಯನ್ನು ಬಿಡಬೇಕಾಗಿದ್ದಿತು. ಇಂತಹ ಸಮಯದಲ್ಲಿ ಈ ಯೋಜನೆ ತುಂಬಾ ಉಪಯೋಗವಾಗಿದೆ. ಇತ್ತೀಚೆಗೆ ಗಂಡುಮಕ್ಕಳಿಗೂ ಸೈಕಲ್ ವಿತರಿಸುತ್ತಿರುವುದು ತುಂಬ ಸಂತೋಷದಾಯಕ ಎಂದು ಕೆಲವರು ಹೇಳಿದ್ದಾರೆ. ಅನೇಕ ಕಾರ್ಯಕ್ರಮಗಳ ಜೊತೆಗೆ ಸರ್ವಶಿಕ್ಷಣ ಅಭಿಯಾನದಡಿಯಲ್ಲಿ ಸರ್ಕಾರ ಪ್ರಾಥಮಿಕ ಶಿಕ್ಷಣಕ್ಕೆ ಸಂಬಂಧಿಸಿದಂತೆ ಹಲವಾರು ಅಭಿವೃದ್ಧಿ ಯೋಜನೆಗಳನ್ನು ಹಾಕಿಕೊಂಡಿದೆ. ಈ ಹಿನ್ನೆಲೆಯಲ್ಲಿ ಮೊದಲಿಗಿಂತಲೂ ಈಗ ಹೆಣ್ಣುಮಕ್ಕಳ ಶಿಕ್ಷಣ ಸ್ವಲ್ಪಮಟ್ಟಿಗೆ ಬೆಳವಣಿಗೆಯತ್ತ ಸಾಗುತ್ತಿದೆ ಎಂದು ಹೇಳಬಹುದು.

ಹೆಣ್ಣುಮಕ್ಕಳ ಶಿಕ್ಷಣಕ್ಕಾಗಿ ಸರ್ಕಾರ ಜಾರಿಗೆ ತಂದ ಯೋಜನೆ ಅಥವಾ ಕಾರ್ಯಕ್ರಮಗಳು ಒಂದು ಕಡೆ ಆಚರಣೆಗೆ ತರುವ ಹಂತ ನಿಧಾನವಾಗಿದ್ದರೆ ಮತ್ತೊಂದು ಕಡೆ ಅಧಿಕಾರಿಗಳ ಹಂತದಲ್ಲಿ ಭ್ರಷ್ಟಾಚಾರದಿಂದ ಕೂಡಿದೆ. ಸರ್ಕಾರದಿಂದ ಬಂದಂತಹ ಈ ಯೋಜನೆಗಳು ಮಕ್ಕಳಿಗೆ ಸರಿಯಾಗಿ ತಲುಪುತ್ತಿಲ್ಲ. ಇಲ್ಲಿ ಮಧ್ಯವರ್ತಿಗಳಿಂದಾಗಿ ಅವರಿಗೆ ತಲುಪಬೇಕಾದಂತಹ ಸೌಲಭ್ಯಗಳು ತಲುಪುತ್ತಿಲ್ಲ. ಉದಾಹರಣೆಗೆ ಶಿಷ್ಯವೇತನಕ್ಕೆ ಸಂಬಂಧಿಸಿದಂತೆ ಕೆಲವು ಶಿಕ್ಷಣ ಸಂಸ್ಥೆಗಳಲ್ಲಿ ಶಿಕ್ಷಕರುಗಳು ಸರ್ಕಾರದಿಂದ ಅನುದಾನವಾಗಿ ಬಂದಂತಹ ವಿದ್ಯಾರ್ಥಿವೇತನ ಹಣವನ್ನು ಸರಿಯಾಗಿ ವಿದ್ಯಾರ್ಥಿಗಳಿಗೆ ವಿತರಣೆ ಮಾಡುತ್ತಿಲ್ಲ. ಹಾಗೆಯೇ ಸಮವಸ್ತ್ರ, ಪಠ್ಯಪುಸ್ತಕಗಳು ಕರ್ನಾಟಕ ಸರ್ಕಾರವು ವರ್ಷಂಪ್ರತಿ ಕೋಟ್ಯಾಂತರ ರೂ.ಗಳನ್ನು ವ್ಯಯ ಮಾಡುತ್ತಿದೆ ಆದರೂ ಸಹ ಸಕಾಲದಲ್ಲಿ ಪಠ್ಯಪುಸ್ತಕಗಳು ದೊರೆಯದೇ ವಿದ್ಯಾರ್ಥಿಗಳಿಗೆ ತೊಂದರೆಯಾಗುತ್ತಿದೆ ಎಂದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಶಿಕ್ಷಕರೊಬ್ಬರು ತಿಳಿಸಿದರು. ಸಮವಸ್ತ್ರಕ್ಕೆ ಸಂಬಂಧಿಸಿದಂತೆ, ಮಕ್ಕಳ ಅಳತೆಗೆ ತಕ್ಕಂತೆ ಬಟ್ಟೆ ಇರುವುದಿಲ್ಲ. ಅಂದರೆ ದೊಡ್ಡದಾಗಿರುವುದು ಇದನ್ನು ಸರಿ ಮಾಡಿಸಿ ಹಾಕಿಕೊಳ್ಳುವಷ್ಟು ಹಣ ಎಷ್ಟೋ ಕುಟುಂಬಗಳಲ್ಲಿ ಇರುವುದಿಲ್ಲ. ಅದನ್ನೇ ಹಾಕಿಕೊಂಡು ಮಕ್ಕಳು ಶಾಲೆಗೆ ಬರುತ್ತಾರೆ ಎಂದು ಶಿಕ್ಷಕಿಯೊಬ್ಬರು ತಿಳಿಸಿದರು. ಬಿಸಿಯೂಟಕ್ಕೆ ಸಂಬಂಧಿಸಿದಂತೆ ಪೋಷಕರನ್ನು ಸಂದರ್ಶಿಸಿ ಪ್ರಶ್ನೆ

ಕೇಳಿದಾಗ ಶೇಕಡ ೯೦ರಷ್ಟು ಪೋಷಕರು ಅಷ್ಟೇನು ಚೆನ್ನಾಗಿಲ್ಲ ಎಂದು ಉತ್ತರಿಸಿದ್ದಾರೆ. ಏಕೆ ಎಂದು ಮರುಪ್ರಶ್ನೆ ಕೇಳಿದರೆ ಸರ್ಕಾರದಿಂದ ಬರುವ ಅಕ್ಕಿ, ಬೇಳೆ ಇತ್ಯಾದಿ ಸಾಮಾನುಗಳನ್ನು ಸಮರ್ಪಕವಾಗಿ ಶಿಕ್ಷಕ ಮಗುವಿಗೆ ಕೊಡುತ್ತಿಲ್ಲ. ಒಂದು ಮಗುವಿಗೆ ಇಂತಿಷ್ಟು ಗ್ಯಾಲರಿ ಆಹಾರ ಎಂದು ಇದೆ. ಆದರೆ ಇದನ್ನು ತಮ್ಮ ಮನೆಗೆ ಅಥವಾ ಮಾರಾಟ ಮಾಡುತ್ತಾರೆ ಮುಖ್ಯೋಪಾಧ್ಯಾಯರು ಅಂತ ಪೋಷಕರು ಹೇಳುತ್ತಾರೆ. ಮತ್ತು ಅಡುಗೆ ಮಾಡುವವರು ಅಷ್ಟೇನು ರುಚಿಕರವಾಗಿ ಮಾಡುವುದಿಲ್ಲ. ಸ್ವಚ್ಛತೆ ಇಲ್ಲ ಎಂದು ತಿಳಿಸಿದರು. ಅಡುಗೆ ಮಾಡುವವರು ತಳವರ್ಗಕ್ಕೆ ಸೇರಿದವರೆಂದು ಕೆಲವು ಪೋಷಕರು ತಮ್ಮ ಮಕ್ಕಳಿಗೆ ಮಧ್ಯಾಹ್ನದ ಊಟವನ್ನು ಮಾಡಿಸುವುದಿಲ್ಲ. ಮನೆಗೆ ಬಂದು ಊಟ ಮಾಡುವಂತೆ ಹೇಳುತ್ತಾರೆ. ಬಿಸಿಯೂಟದಿಂದಾಗಿ ಬೋಧನಾ ಚಟುವಟಿಕೆಗಳಿಗೆ ತೊಡಕು ಉಂಟುಮಾಡಿದೆ ಎಂದು ಕೆಲವು ಶಿಕ್ಷಕರು ಮತ್ತು ಮುಖ್ಯೋಪಾಧ್ಯಾಯರು ವಾದಿಸುತ್ತಾರೆ. ಕೊರಟಗೆರೆ ಪಟ್ಟಣದಲ್ಲಿ ಬೇಸಿಗೆ ಕಾಲದಲ್ಲಿ ನೀರಿಗೆ ಅಭಾವವಿದ್ದು ಎರಡು ಅಥವಾ ಮೂರು ಕಿಲೋಮೀಟರ್‌ಗಳಿಂದ ತರಬೇಕಾಗುತ್ತದೆ. ಅಂತಹ ಸಂದರ್ಭದಲ್ಲಿ ಅಡಿಗೆಯವರೇ ಹೇಳಿದ ಹಾಗೆ ಅಕ್ಕಿ, ತರಕಾರಿ, ಬೇಳೆ ಇತ್ಯಾದಿಗಳನ್ನು ತೊಳೆಯುವುದಕ್ಕಾಗಿ ಹೆಚ್ಚು ನೀರು ಬೇಕಾಗುತ್ತದೆ. ಆದಕ್ಕಾಗಿ ನಾವು ಅವುಗಳನ್ನು ತೊಳೆಯುವುದಿಲ್ಲ. ತರುವಂತಹ ಎರಡು ಅಥವಾ ಮೂರು ಬಿಂದಿಗೆ ನೀರಿನಲ್ಲಿ ಅನ್ನ, ಸಾಂಬಾರು ಮತ್ತು ಮಕ್ಕಳು ಕುಡಿಯಲಿಕ್ಕೆ ನೀರು ಕೊಡಬೇಕು. ಇದರಿಂದಾಗಿ ತುಂಬಾ ಕಷ್ಟವಾಗುತ್ತದೆ ಎಂದರು.

ಮೂಲಸೌಲಭ್ಯಗಳ ತೊಡಕುಗಳಿಂದ ಸರಿಯಾದ ಪ್ರಮಾಣದಲ್ಲಿ ಕಾಳುಗಳನ್ನು ಬೇಯಿಸದೆ ಇರುವುದು, ಪಾತ್ರೆಯಲ್ಲಿ ಹಲ್ಲಿ, ಹುಳು ಇತ್ಯಾದಿಗಳು ಬಿದ್ದು ಮಕ್ಕಳ ಅಸ್ವಸ್ಥತೆಗೆ ಕಾರಣವಾಗಿದೆ. ಇದರಿಂದಾಗಿ ಪೋಷಕರು ಬಿಸಿಯೂಟದ ಬಗ್ಗೆ ಅಸಮಾಧಾನ ತೋರಿಸಿದ್ದಾರೆ.

### ೭.೧೪. ತಳಮಟ್ಟದಲ್ಲಿರುವ ಪ್ರಮುಖ ಸಮಸ್ಯೆಗಳು

ಲಿಂಗ ಅಸಮಾನತೆ ಇಂದು ನಿನ್ನೆಯ ಸಮಸ್ಯೆಯಲ್ಲ. ಇದಕ್ಕೆ ದೀರ್ಘಕಾಲದ ಇತಿಹಾಸವಿದ್ದು ಇದರ ಬೇರುಗಳು ಅತ್ಯಂತ ಆಳವಾಗಿವೆ. ಲಿಂಗ ಅಸಮಾನತೆಗಳು ಆಯಾ ಸಮಾಜದ ಸಂಸ್ಕೃತಿಯ ಒಂದು ಭಾಗವೆಂಬಂತೆ ಸಹಜವಾಗಿ ಬೆಳೆದು ಒಪ್ಪಲ್ಪಟ್ಟ ಸಾಮಾಜಿಕ ಮೌಲ್ಯಗಳಾಗಿವೆ. ಶಿಕ್ಷಣದಲ್ಲಿ ಲಿಂಗ ಅಸಮಾನತೆಯ ವಿರುದ್ಧ ನಡೆದಿರುವ ಚಿಂತನೆಗಳು ಹುಟ್ಟಿದ್ದರೂ, ಸಾಮಾಜಿಕ ಬೆಂಬಲವಿಲ್ಲದೆ ಇವು ಜಾರಿಗೆ ಬಂದಿಲ್ಲ. ವಿವಿಧ ದೇಶಗಳು, ಸಮಾಜ, ಸಂಸ್ಕೃತಿ ಮತ್ತು ವಿವಿಧ ಕಾಲಘಟ್ಟಗಳಲ್ಲಿ, ಲಿಂಗ ಅಸಮಾನತೆಯ ರೀತಿ ನೀತಿಗಳಲ್ಲಿ ವ್ಯತ್ಯಾಸಗಳಿರಬಹುದು. ಆದರೆ ಜಗತ್ತಿನ ಎಲ್ಲ ಸಮಾಜಗಳಲ್ಲೂ ಅಸಮಾನತೆ ಇರುವುದು ಸತ್ಯ. ಈ ರೀತಿಯ ಲಿಂಗ ಅಸಮಾನತೆಗೆ ಯಾವುದೇ ಒಂದು ಕಾಲದ, ಒಂದು ಅಂಶ ಕಾರಣವಲ್ಲ. ಕೌಟುಂಬಿಕ, ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ಶೈಕ್ಷಣಿಕ, ಆಡಳಿತಾತ್ಮಕ, ಧಾರ್ಮಿಕ ಮುಂತಾದ ಎಲ್ಲಾ ಕ್ಷೇತ್ರದಲ್ಲೂ ಅಸಮಾನತೆ ವ್ಯಾಪಕವಾಗಿ

ಆಚರಣೆಯಲ್ಲಿದೆ. ಪ್ರಮುಖವಾಗಿ ಶಿಕ್ಷಣ ಕ್ಷೇತ್ರದಲ್ಲಿನ ಲಿಂಗ ಅಸಮಾನತೆಗೆ ಪ್ರಮುಖ ಕಾರಣ ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಕಾರಣಗಳು ಅತಿಮುಖ್ಯವಾದವುಗಳು ಎಂದು ಹೇಳಬಹುದು.

**ಆಕರಗ್ರಂಥಗಳು**


ಅಗರ್‌ವಾಲ್, (೨೦೦೦), *ಆ್ಯನ್ ಅಸೆಸ್‌ಮೆಂಟ್ ಆಫ್ ಟ್ರೆಂಡ್ ಇನ್ ಆಕ್ಸಸ್ ಅಂಡ್ ರಿಟೆನ್ಸ್‌ನ್*, ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಎಜುಕೇಷನಲ್ ಪ್ಲಾನಿಂಗ್ ಅಂಡ್ ಅಡ್ಮಿನಿಸ್ಟ್ರೇಶನ್, ನ್ಯೂ ಡೆಲ್ಲಿ.

ಕರ್ನಾಟಕದ ಮಾನವ ಅಭಿವೃದ್ಧಿ ವರದಿ., (೨೦೦೫), ಯೋಜನಾ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು.

ಕುಲಕರ್ಣಿ ಕೆ.ಜಿ., (೨೦೦೬), ಉದಯೋನ್ಮುಖ ಭಾರತದಲ್ಲಿ ಶಿಕ್ಷಣ, ಪ್ರದೀಪ ಪ್ರಕಾಶನ, ಜೆ.ಟಿ. ಕಾಲೇಜು ಹತ್ತಿರ, ಗದಗ.

ಗಂಗಾಧರಪ್ಪ ಎನ್.ಆರ್. (೨೦೦೪), ಶಿಕ್ಷಣದ ಮೂಲತತ್ತ್ವಗಳು, ರೇಖಾ ಪ್ರಕಾಶನ, ತರಳಬಾಳು ಬಡಾವಣೆ, ದಾವಣಗೆರೆ.

ಪ್ರಶಾಂತ್ ಎಚ್.ಡಿ., (೨೦೦೫), ಈಶಾನ್ಯ ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣ ಮತ್ತು ಸಮಾಜ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಪ್ರಜಾವಾಣಿ ದಿನಪತ್ರಿಕೆ, ಏಪ್ರಿಲ್ ೧೬, ೨೦೦೫.

ಮಕ್ಕಳ ಸಮೀಕ್ಷೆ, (೨೦೦೩), ಸಿ.ಪಿ.ಐ. ಕರ್ನಾಟಕ ಸರ್ಕಾರ, ಬೆಂಗಳೂರು.

ಮಕ್ಕಳ ಜನಗಣತಿ, (೨೦೦೫), ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು.

ಮಹಾಬಲೇಶ್ವರ ರಾವ್, ೧೯೮೫, ಅಸಮಾನತೆ ನಾಡಿನಲ್ಲಿ ಶಿಕ್ಷಣ, ಪ್ರ.ಜನವಾದಿ ಪ್ರಕಶನ, ಗುಂಡ್ಮಿ, ಸಾಸ್ತಾನ್ ಉಡುಪಿ ತಾ., ದಕ್ಷಿಣ ಕನ್ನಡ ಜಿಲ್ಲೆ, ಪು. ೭೪-೭೫

ಶ್ರೀವಾಸ್ತವ, (೧೯೯೭), ಎಸೆಸ್ ಟು ಬೆಸಿಕ್ ಎಜ್ಯುಕೇಷನ್ ಇನ್ ಉತ್ತರ ಪ್ರದೇಶ : ರಿಸಲ್ಟ್ಸ್ ಫ್ರಮ್ ಫೀಲ್ಡ್ ಸರ್ವೆ, ಪ್ರಾಜೆಕ್ಟ್ ಆನ್ ಸ್ಟ್ರಾಟಜಿಸ್ ಆ್ಯಂಡ್ ಫೈನಾನ್ಸಿಂಗ್ ಫಾರ್ ಹ್ಯೂಮನ್ ಡೆವಲಪ್‌ಮೆಂಟ್, ಯು.ಎನ್.ಡಿ.ಪಿ. ನ್ಯೂಡೆಲ್ಲಿ.


• • •

## ಅಧ್ಯಾಯ ಎಂಟು

# ಮಕ್ಕಳ ಶಿಕ್ಷಣದ ಬಗ್ಗೆ ಪೋಷಕರ ಮನೋಪ್ರವೃತ್ತಿ

೮.೧. ಗಂಡುಮಕ್ಕಳ ಶಿಕ್ಷಣಕ್ಕೆ ಪ್ರೇರಕಾಂಶಗಳು

೮.೨. ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಪ್ರೇರಕಾಂಶಗಳು

೮.೩. ಶಿಕ್ಷಣ-ವಿವಾಹ-ಜಾತಿ

೮.೪. ಆರ್ಥಿಕ ಸ್ಥಿತಿಗತಿ

ಪೋಷಕರು ತಮ್ಮ ಮಕ್ಕಳ ಶಿಕ್ಷಣದ ಬಗ್ಗೆ ಯಾವ ರೀತಿಯ ಮನೋಪ್ರವೃತ್ತಿಯನ್ನು ಹೊಂದಿದ್ದಾರೆ ಎಂಬುದನ್ನು ಅರ್ಥಮಾಡಿಕೊಳ್ಳುವುದು ಈ ಅಧ್ಯಾಯದ ಮೂಲ ಆಶಯ. ಇತ್ತೀಚಿನ ದಿನಮಾನದಲ್ಲಿ ಪ್ರಾಥಮಿಕ ಶಿಕ್ಷಣದ ಬಗ್ಗೆ ಎಲ್ಲೆಡೆ ಚರ್ಚೆಯಾಗುತ್ತಿದೆ. ಈ ಸಂದರ್ಭದಲ್ಲಿ ಕೆಲವು ಸಂಶೋಧನೆಗಳು, ಪೋಷಕರು ತಮ್ಮ ಮಕ್ಕಳ ಶಿಕ್ಷಣದ ಬಗ್ಗೆ ಆಸಕ್ತಿ ವಹಿಸಿದ್ದಾರೆ ಎಂದು ಹೇಳಿದ್ದಾರೆ. ಕೆಲವು ವರದಿಗಳು, ಪತ್ರಿಕೆಗಳು ತಮ್ಮ ಮಕ್ಕಳ ಶಿಕ್ಷಣದ ಬಗ್ಗೆ ಪೋಷಕರು ಆಸಕ್ತಿ ವಹಿಸುತ್ತಿಲ್ಲ ಎಂದು ವಾದಿಸುತ್ತಿವೆ. ಅದರಲ್ಲೂ ಹೆಣ್ಣುಮಕ್ಕಳ ಶಿಕ್ಷಣಕ್ಕೆ ಬಡತನದ ರೇಖೆಗಿಂತ ಕೆಳಗಿರುವ ಕುಟುಂಬಗಳಲ್ಲಿ ಕೊನೆಯ ಆದ್ಯತೆಯನ್ನು ನೀಡಿದ್ದಾರೆ ಎಂದು ಹಲವು ಅಧ್ಯಯನಗಳು ಸ್ಪಷ್ಟಪಡಿಸಿವೆ. ಈ ಅಭಿಪ್ರಾಯಗಳು ಎಷ್ಟರಮಟ್ಟಿಗೆ ಸರಿ ಎಂಬುದನ್ನು ಅರ್ಥಮಾಡಿಕೊಳ್ಳಲು ಪ್ರಸ್ತುತ ಅಧ್ಯಾಯದಲ್ಲಿ ಪ್ರಯತ್ನಿಸಲಾಗಿದೆ. ಅಧ್ಯಯನದ ಅನುಕೂಲಕ್ಕಾಗಿ ಅಧ್ಯಾಯವನ್ನು ಎರಡು ಭಾಗವಾಗಿ ವಿಂಗಡಿಸಿಕೊಳ್ಳಲಾಗಿದೆ. ಭಾಗ-೧ರಲ್ಲಿ ಪೋಷಕರು ತಮ್ಮ ಮಕ್ಕಳ ಶಿಕ್ಷಣದ ಬಗ್ಗೆ ಯಾವ ರೀತಿಯ ಮನೋಪ್ರವೃತ್ತಿ ಹೊಂದಿದ್ದಾರೆ ಮತ್ತು ಇದರಲ್ಲಿರುವ ಲಿಂಗತಾರತಮ್ಯದ ದೃಷ್ಟಿಕೋನವನ್ನು ವಿಶ್ಲೇಷಣೆ ಮಾಡಲಾಗಿದೆ. ಭಾಗ-೨ರಲ್ಲಿ ಶಿಕ್ಷಣದ ಮೇಲೆ ವಿವಾಹ, ಕುಟುಂಬ, ಜಾತಿ ಮತ್ತು ಆರ್ಥಿಕ ಅಂಶಗಳು ಎಷ್ಟರಮಟ್ಟಿಗೆ ಪ್ರಭಾವಬೀರುತ್ತವೆ ಎನ್ನುವುದನ್ನು ಚರ್ಚಿಸಲಾಗುವುದು.

### ಭಾಗ-೧

ಪೋಷಕರು ತಮ್ಮ ಮಕ್ಕಳ ಶಿಕ್ಷಣದ ಬಗ್ಗೆ ಯಾವ ರೀತಿಯ ಮನೋಪ್ರವೃತ್ತಿ ಹೊಂದಿದ್ದಾರೆ ಎಂಬುದನ್ನು ಈ ಕೆಳಗಿನಂತೆ ನೋಡಬಹುದು.

ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣದಲ್ಲಿ ಭಾರತವು ತನ್ನ ಗುರಿಯನ್ನು ಸಾಧಿಸದೇ ಇರುವುದನ್ನು ಆಡಳಿತಶಾಹಿ ವರ್ಗ, ಅಧಿಕಾರದಲ್ಲಿ ಇರುವ ವರ್ಗ ಮತ್ತು ಯೋಜನಾಕಾರರ ನಂಬಿಕೆಗೆ ವಿರುದ್ಧವಾದ ಅಂಶವನ್ನು ಪ್ರಸ್ತುತ ಅಧ್ಯಯನ ಗುರುತಿಸಿದೆ. ಹೆಣ್ಣುಮಕ್ಕಳ ಶಿಕ್ಷಣದ ಬಗ್ಗೆ ಪೋಷಕರು ಹೊಂದಿರುವ ಉದಾಸೀನತೆಯು ವಿಶಾಲವಾಗಿದ್ದರೂ, ಹೆಚ್ಚಿನ ಪೋಷಕರು ಮಕ್ಕಳ ಶಿಕ್ಷಣಕ್ಕೆ ಪ್ರಮುಖ ಆದ್ಯತೆಯನ್ನು ನೀಡಿದ್ದಾರೆ. ಉದಾಹರಣೆಗೆ ಕೊರಟಗೆರೆ ಪಟ್ಟಣ ಪಂಚಾಯಿತಿಯ

ಪ್ರದೇಶದಲ್ಲಿ ಬರುವ ಕುಟುಂಬದ ಪೋಷಕರಿಗೆ, ನಿಮ್ಮ ಆದಾಯದಲ್ಲಿ ಯಾವ ಮಗುವಿಗೆ ಶಿಕ್ಷಣ ನೀಡಲು ಮೊದಲ ಆದ್ಯತೆ ನೀಡುತ್ತೀರಾ ಎಂಬ ಪ್ರಶ್ನೆಗೆ ೩೦೦ ಕುಟುಂಬಗಳಲ್ಲಿ ಶೇಕಡ ೪೮.೩೩ ರಷ್ಟು ಕುಟುಂಬಗಳು ಗಂಡು ಮತ್ತು ಹೆಣ್ಣುಮಕ್ಕಳಿಬ್ಬರಿಗೂ ಆದ್ಯತೆ ನೀಡುತ್ತೇವೆ ಎಂದು ಉತ್ತರಿಸುತ್ತಾರೆ. ಶೇಕಡ ೨೮.೬೭ರಷ್ಟು ಕುಟುಂಬದ ಪೋಷಕರು ಗಂಡು ಮಗುವಿಗೆ ಮೊದಲ ಆದ್ಯತೆ ನೀಡುತ್ತೇವೆ ಎಂದು ಹೇಳಿದ್ದಾರೆ. ಶೇಕಡ ೨೧.೩೩ರಷ್ಟು ಪೋಷಕರು ಹೆಣ್ಣುಮಕ್ಕಳಿಗೆ ಮೊದಲ ಆದ್ಯತೆ ನೀಡುತ್ತೇವೆ ಎಂದಿದ್ದಾರೆ. ಶೇಕಡ ೧.೬೮ರಷ್ಟು ಪೋಷಕರು ಯಾವುದೇ ಉತ್ತರ ನೀಡುವಲ್ಲಿ ವಿಫಲರಾಗಿದ್ದಾರೆ.

ಒಟ್ಟಾರೆಯಾಗಿ ಹೇಳುವುದಾದರೆ ಬಹುತೇಕ ಪೋಷಕರು ಇಬ್ಬರಿಗೂ ಸಮಾನವಾದ ಶಿಕ್ಷಣ ಕೊಡಿಸುತ್ತೇವೆ ಎಂದಿದ್ದಾರೆ. ಇಬ್ಬರಿಗೂ ಮೊದಲ ಆದ್ಯತೆ ನೀಡುತ್ತೇವೆ ಮತ್ತು ಯಾವುದೇ ರೀತಿಯಲ್ಲಿ ಲಿಂಗ-ತಾರತಮ್ಯ ಮಾಡುವುದಿಲ್ಲ ಎಂದು ಉತ್ತರಿಸಿದರು. ಇದನ್ನು ಜಾತಿವಾರು ಪ್ರಮಾಣದಲ್ಲಿ ನೋಡಿದಾಗ ಪರಿಶಿಷ್ಟ ಜಾತಿ ಸಮುದಾಯವನ್ನು ಸಂದರ್ಶಿಸಿದಾಗ ಶೇಕಡ ೫೦.೬೭ರಷ್ಟು ಗಂಡು ಮತ್ತು ಹೆಣ್ಣುಮಕ್ಕಳಿಬ್ಬರಿಗೂ ಮೊದಲ ಆದ್ಯತೆ ನೀಡುತ್ತೇವೆ ಎನ್ನುವ ಪೋಷಕರನ್ನು ಕಾಣಬಹುದು. ಅಲ್ಲದೇ ಶೇಕಡ ೨೦.೦೦ರಷ್ಟು ಪೋಷಕರು ಗಂಡು ಮಗುವಿಗೆ ಮೊದಲ ಆದ್ಯತೆ ನೀಡುತ್ತೇವೆ ಅಭಿಪ್ರಾಯವನ್ನು ಹೊಂದಿದ್ದಾರೆ. ಶೇಕಡ ೨೫.೩೩ರಷ್ಟು ಹೆಣ್ಣುಮಗುವಿಗೆ ಆದ್ಯತೆ ನೀಡುತ್ತೇವೆ ಎನ್ನುವ ಪಾಲಕರು ಇದ್ದಾರೆ. ಅದೇ ರೀತಿ ಪರಿಶಿಷ್ಟ ಪಂಗಡ ಕುಟುಂಬದ ಪೋಷಕರಿಗೆ ಪ್ರಶ್ನೆ ಕೇಳಿದಾಗ ಶೇಕಡ ೪೨.೬೭ರಷ್ಟು ಪೋಷಕರು ಇಬ್ಬರಿಗೂ ಮೊದಲ ಆದ್ಯತೆ ನೀಡುತ್ತೇವೆ ಎಂದಿದ್ದಾರೆ. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಮುಸ್ಲಿಂ, ಇತರೆ ಸಮುದಾಯದ ಗುಂಪುಗಳನ್ನು ಸಂದರ್ಶಿಸಿದಾಗ ನಮಗೆ ತಿಳಿದು ಬಂದ ಅಂಶವೆಂದರೆ ಎಲ್ಲರೂ ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸುವಲ್ಲಿ ಉತ್ತಮ ಅಭಿಪ್ರಾಯ ಹೊಂದಿದ್ದಾರೆ.

ಮತ್ತೊಂದು ಅಧ್ಯಯನ ಕ್ಷೇತ್ರವಾದ ಕಮಲಾಪುರ ಪಟ್ಟಣ ಪಂಚಾಯಿತಿಯ ಕುಟುಂಬಗಳನ್ನು ಅಧ್ಯಯನಕ್ಕೊಳಪಡಿಸಿದಾಗ ನಿಮಗೆ ಬರುವಂತಹ ಆದಾಯದಲ್ಲಿ ಯಾವ ಮಗುವಿಗೆ ಪ್ರಾಥಮಿಕ ಶಿಕ್ಷಣ ನೀಡಲು ಮೊದಲ ಆದ್ಯತೆ ನೀಡುತ್ತೀರಾ ಎಂಬ ಪ್ರಶ್ನೆಗೆ, ಶೇಕಡ ೫೯.೩೩ರಷ್ಟು ಕುಟುಂಬಗಳು ಗಂಡು ಮತ್ತು ಹೆಣ್ಣು ಮಕ್ಕಳಿಬ್ಬರಿಗೂ ಮೊದಲ ಆದ್ಯತೆ ನೀಡುತ್ತೇವೆ ಎಂದು ಹೇಳಿದ್ದಾರೆ. ಶೇಕಡ ೫೭.೦೦ರಷ್ಟು ಕುಟುಂಬಗಳು ಗಂಡು ಮಗುವಿಗೆ ಮೊದಲ ಆದ್ಯತೆ ನೀಡುತ್ತೇವೆ ಎಂದರು. ಶೇಕಡ ೧೧.೦೦ರಷ್ಟು ಕುಟಂಬಗಳು ಮಾತ್ರ ಹೆಣ್ಣು ಮಗುವಿಗೆ ಮೊದಲ ಆದ್ಯತೆ ನೀಡುತ್ತೇವೆ ಎನ್ನುತ್ತಾರೆ. ಇದನ್ನು ಜಾತಿವಾರು ಪ್ರಮಾಣದಲ್ಲಿ ನೋಡಿದಾಗ ಪರಿಶಿಷ್ಟ ಜಾತಿ ಕುಟುಂಬದ ಪೋಷಕರು ಶೇಕಡ ೩.೦೦ರಷ್ಟು ಪೋಷಕರು ಮಾತ್ರ ಹೆಣ್ಣು ಮಗುವಿಗೆ ಮೊದಲ ಆದ್ಯತೆ ನೀಡುತ್ತೇವೆ ಎಂದಿದ್ದಾರೆ. ಬಹುತೇಕ ಪೋಷಕರು ಗಂಡು ಮಗುವಿಗೆ ಹೆಚ್ಚಿನ ಒಲವು ತೋರಿರುವುದು

ಕಂಡುಬರುತ್ತದೆ. ಅದೇ ರೀತಿಯಾಗಿ ಪರಿಶಿಷ್ಟ ಪಂಗಡಕ್ಕೆ ಸೇರಿದ ಪೋಷಕರನ್ನು ಸಂದರ್ಶನ ಮಾಡಿ ಪ್ರಶ್ನೆ ಕೇಳಿದಾಗ ಕೇವಲ ಶೇಕಡ ೨.೦೦ರಷ್ಟು ಪೋಷಕರು ಮಾತ್ರ ಹೆಣ್ಣು ಮಗುವಿಗೆ ಶಿಕ್ಷಣ ಕೊಡಿಸುವಲ್ಲಿ ಮೊದಲ ಆದ್ಯತೆ ನೀಡುತ್ತೇವೆ ಎಂದಿದ್ದಾರೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಪೋಷಕರೊಂದಿಗೆ ಹೋಲಿಸಿದಾಗ ಎರಡು ಸಮುದಾಯದಲ್ಲೂ ಗಂಡು ಮಗುವಿಗೆ ಹೆಚ್ಚಿನ ಮಹತ್ವ ನೀಡಿರುವುದು ಕಂಡುಬರುತ್ತದೆ. ಆದರೆ ಪರಿಶಿಷ್ಟ ಜಾತಿಗಿಂತ ಪರಿಶಿಷ್ಟ ಪಂಗಡದ ಪೋಷಕರು ಹೆಣ್ಣುಮಕ್ಕಳ ಶಿಕ್ಷಣದ ಬಗ್ಗೆ ಅಷ್ಟೇನು ಒಲವನ್ನು ಹೊಂದಿರದೇ ಇರುವುದು ತಿಳಿದುಬರುತ್ತದೆ.

ಕೊರಟಗೆರೆ ಪಟ್ಟಣ ಪಂಚಾಯಿತಿಗಿಂತ ಕಮಲಾಪುರ ಪಟ್ಟಣ ಪಂಚಾಯಿತಿಯಲ್ಲಿ ಪೋಷಕರು ಹೆಣ್ಣುಮಕ್ಕಳ ಶಿಕ್ಷಣದ ಬಗ್ಗೆ ಅಷ್ಟೇನು ಉತ್ತಮವಾದ ಅಭಿಪ್ರಾಯ ಹೊಂದಿಲ್ಲ ಎಂಬುದು ತಿಳಿದುಬರುತ್ತದೆ.

ಮಕ್ಕಳ ಶಿಕ್ಷಣದ ಬಗ್ಗೆ ಪೋಷಕರ ಮನೋಪ್ರವೃತ್ತಿಯನ್ನು ತಿಳಿದುಕೊಳ್ಳುವ ಉದ್ದೇಶದಿಂದಾಗಿ ಕೆಲವೊಂದು ಕೇಸ್ ಸ್ಟಡಿಯನ್ನು ಕಮಲಾಪುರ ಮತ್ತು ಕೊರಟಗೆರೆ ಪಟ್ಟಣ ಪಂಚಾಯಿತಿಯಲ್ಲಿ ಮಾಡಲಾಯಿತು. ಸಂದರ್ಶನ ಮಾಡುವಾಗ ಜಾತಿವಾರು ಕುಟುಂಬದ ಪೋಷಕರನ್ನು ಸಂದರ್ಶಿಸ ಲಾಯಿತು. ಉದಾಹರಣೆಗೆ ದಲಿತ ಸಮದಾಯಕ್ಕೆ ಸೇರಿದ ರಾಮಣ್ಣನನ್ನು ಸಂದರ್ಶಿಸಿದಾಗ ಮೀಸಲಾತಿ ಅನ್ವಯ ಉದ್ಯೋಗ ಮತ್ತು ಮೂಲಭೂತ ಸೌಲಭ್ಯಗಳು ನಮಗೆ ದೊರೆಯುತ್ತವೆ. ಅದಕ್ಕೋಸ್ಕರವಾಗಿ ನಾವು ನಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸುತ್ತೇವೆ. ಉದ್ಯೋಗ ದೊರೆತರೆ ಮುಂದೆ ಅವರ ಜೀವನ ಉತ್ತಮವಾಗಿರುತ್ತದೆ ಎಂದು ತಮ್ಮ ಅಭಿಪ್ರಾಯವನ್ನು ಹಂಚಿಕೊಂಡರು.

ಸಾಮಾನ್ಯ ವರ್ಗಕ್ಕೆ ಸೇರಿದ ಕುಟುಂಬದ ತಿಮ್ಮಕ್ಕಳನ್ನು ಸಂದರ್ಶಿಸಿ ಪ್ರಶ್ನೆ ಕೇಳಿದಾಗ ತಮ್ಮ ಮಕ್ಕಳ ಶಿಕ್ಷಣದ ಬಗ್ಗೆ ಉತ್ತಮ ಅಭಿಪ್ರಾಯ ಹೊಂದಿದ್ದಾಳೆ. ನಾವಂತೂ ಶಾಲೆ ಕಲಿಯಲಿಲ್ಲ, ನಮ್ಮ ಮಕ್ಕಳಾದರೂ ಕಲಿತು ಒಂದಿಷ್ಟು ಬುದ್ಧಿವಂತರಾಗಲಿ ಎಂದು ಶಿಕ್ಷಣ ಕೊಡಿಸುತ್ತೇವೆ. ನಮ್ಮ ಆದಾಯದಲ್ಲಿ ಅವರಿಗೆ ಪುಸ್ತಕ, ಬಟ್ಟೆ, ಶುಲ್ಕವನ್ನು ಭರಿಸಲು ನಮ್ಮಿಂದ ಸಾಧ್ಯವಾಗುತ್ತಿಲ್ಲ. ಆದರೂ ನಾವು ಗಂಡು-ಹೆಣ್ಣು ಎಂಬ ತಾರತಮ್ಯ ಮಾಡದೇ ಇಬ್ಬರಿಗೂ ಶಿಕ್ಷಣ ಕೊಡಿಸುತ್ತೇವೆ. ಆದರೆ ಸರ್ಕಾರವೇ ಒಂದು ರೀತಿಯಲ್ಲಿ ತಾರತಮ್ಯ ಮಾಡುತ್ತಿದೆ ಎಂಬ ಅಭಿಪ್ರಾಯವಿದೆ. ಸರ್ಕಾರ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಮಕ್ಕಳಿಗೆ ಉಚಿತವಾಗಿ ನೋಟ್‌ಬುಕ್, ಬ್ಯಾಗ್, ಶುಲ್ಕದಲ್ಲಿ ವಿನಾಯಿತಿ ಇತ್ಯಾದಿ ಸೌಲಭ್ಯಗಳನ್ನು ಕೊಡುತ್ತಿವೆ. ಅದೇ ರೀತಿ ನಮ್ಮ ಮಕ್ಕಳಿಗೆ ಸರ್ಕಾರ ಯಾಕೆ ಕೊಡುತ್ತಿಲ್ಲ? ಎಂದು ಮತ್ತೇ ನಮ್ಮನ್ನು ಪ್ರಶ್ನಿಸಿದರು? ಸರ್ಕಾರದ ಈ ಧೋರಣೆ ಯನ್ನು ತಪ್ಪಿಸಿ ಎಲ್ಲಾ ಬಡಕುಟುಂಬಗಳಿಂದ ಬಂದ ಮಕ್ಕಳಿಗೆ ಸಮಾನವಾದ ಸೌಲಭ್ಯಗಳನ್ನು ಒದಗಿಸಬೇಕು ಎಂದರು.

ಮುಸ್ಲಿಂ ಸಮುದಾಯದ ಅಬ್ದುಲ್ ಎಂಬ ಪೋಷಕನನ್ನು ಸಂದರ್ಶಿಸಿ ಪ್ರಶ್ನೆ ಕೇಳಿದಾಗ ನಾವು ನಮ್ಮ ಮಕ್ಕಳನ್ನು ಉರ್ದು ಶಾಲೆಗೆ ಕಳುಹಿಸುತ್ತೇವೆ, ಕನ್ನಡ ಶಾಲೆಗೆ ಕಳುಹಿಸುವುದಿಲ್ಲ. ನಮ್ಮ ಮನೆಯಲ್ಲಿ ಐದು ಜನ ಮಕ್ಕಳಿದ್ದಾರೆ, ಮೂರು ಗಂಡು, ಎರಡು ಹೆಣ್ಣು. ಗಂಡು ಮಕ್ಕಳು ಎರಡನೇ ಮತ್ತು ೩ನೇ ತರಗತಿಯವರೆಗೂ ಓದಿಸಿ, ಶಾಲೆ ಬಿಡಿಸಿ ಅವರನ್ನು ವರ್ಕ್‌ಶಾಪ್ ಕೆಲಸಕ್ಕೆ ಕಳುಹಿಸು ತ್ತೇವೆ. ಇಬ್ಬರು ಹೆಣ್ಣುಮಕ್ಕಳನ್ನು ಉರ್ದು ಶಾಲೆಗೆ ಕಳುಹಿಸಲಾಗಿದೆ. ಏಕೆ ನಿಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುತ್ತಿಲ್ಲ ಎಂದು ಕೇಳಿದರೆ ಒಬ್ಬರು ದುಡಿದು ತರುವ ಆದಾಯ ಸಾಕಾಗುತ್ತಿಲ್ಲ. ಆದ್ದರಿಂದ ಇವರು ದುಡಿದರೆ ಜೀವನಕ್ಕೆ ಸ್ವಲ್ಪಮಟ್ಟಿಗೆ ಸಹಾಯವಾಗುತ್ತದೆ ಎಂದು ಹೇಳಿದರು.

ಮೇರಿ ಎಂಬ ಕ್ರಿಶ್ಚಿಯನ್ ಮಹಿಳೆಯನ್ನು ಸಂದರ್ಶಿಸಿದಾಗ ನನಗೆ ಇಬ್ಬರು ಗಂಡುಮಕ್ಕಳು, ಗಂಡ ಸತ್ತು ಐದು ವರ್ಷವಾಯಿತು. ಒಬ್ಬ ಮಗ ೩ನೇ ತರಗತಿ ಓದುತ್ತಿದ್ದಾನೆ, ಇನ್ನೊಬ್ಬ ಮಗ ಲೋಕಾಸ್ ಎಂಬುವವನು ೬ನೇ ತರಗತಿ ಓದುತ್ತಿದ್ದಾನೆ. ನಮಗೆ ಜೀವನ ಸಾಗಿಸಲು ತುಂಬಾ ಕಷ್ಟವಾಗುತ್ತಿತ್ತು. ನನ್ನ ಮಗ ಶಾಲೆ ಬಿಟ್ಟು ಚಪ್ಪಲಿ ಹೊಲೆಯುವ ಕೆಲಸ ಮಾಡಿ ಒಂದು ದಿನಕ್ಕೆ ೬೦ ರೂಪಾಯಿ ತರುತ್ತಾನೆ, ಇದರಿಂದ ನಾವು ಜೀವನ ಸಾಗಿಸುತ್ತಿದ್ದೇವೆ. ನನಗೂ ಆಸೆ ಇದೆ ನನ್ನ ಮಗನನ್ನು ಹೆಚ್ಚು ಓದಿಸಬೇಕು ಅಂತ, ಆದರೆ ನಾನು ಕೆಲಸಕ್ಕೆ ಹೋಗಲು ಅನಾರೋಗ್ಯದ ತೊಂದರೆ ಇರುವುದರಿಂದ ಸಾಧ್ಯವಾಗುತ್ತಿಲ್ಲ ಎಂದು ತನ್ನ ಅಳಲನ್ನು ತೋಡಿಕೊಂಡರು.

### ೮.೧. ಗಂಡುಮಕ್ಕಳ ಶಿಕ್ಷಣಕ್ಕೆ ಪ್ರೇರಕಾಂಶಗಳು

ಗಂಡು ಮಗುವಿನ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ ಏಕೆ ನೀಡುತ್ತೀರಾ ಎಂಬ ಪ್ರಶ್ನೆಗೆ ಬಹುತೇಕ ಪೋಷಕರು, ಗಂಡುಮಗುವಿಗೆ ಶಿಕ್ಷಣ ಕೊಡಿಸಿದರೆ ಅವನಿಗೆ ಉದ್ಯೋಗ ದೊರೆತು ಮುಂದೆ ಅವನು ನಮಗೆ ಆಸರೆಯಾಗುತ್ತಾನೆ ಎಂದು ಹೇಳಿದ್ದಾರೆ. ಇದರ ಜೊತೆಗೆ ಕೆಲವು ಪೋಷಕರು ಮಾತ್ರ ಗಂಡು ಮಗು ಎನ್ನುವ ಕಾರಣಕ್ಕೆ ಮಾತ್ರ ಇವನಿಗೆ ಶಿಕ್ಷಣ ಕೊಡಿಸುತ್ತೇವೆ ಎಂದರು. ಇದು ಪಿತೃಪ್ರಧಾನ ಸಂಸ್ಕೃತಿಯ ಹೇಳಿಕೆಯಾಗಿದೆ.

ದಲಿತ ಸಮುದಾಯಕ್ಕೆ ಸೇರಿದ ಹನುಮಂತಪ್ಪ ಹೇಳುವ ಪ್ರಕಾರ ಗಂಡು ಮಗುವಿಗೆ ಶಿಕ್ಷಣ ದೊರೆತರೆ, ಅವನಿಗೆ ಉದ್ಯೋಗ ಸಿಗದಿದ್ದರೂ ಸಹ ಅವನು ಬ್ಯಾಂಕಿನಿಂದ ಲೋನ್ ತೆಗೆದು, ವ್ಯಾಪಾರ ಮಾಡಿ ಮನೆ ಹಿರಿತನ ನಡೆಸಬಹುದು. ಹೀಗೆ ಯಾವುದೋ ಒಂದು ವೃತ್ತಿಯ ಉದ್ಯೋಗ ಆಧಾರಿತ ಪ್ರೇರಣೆ ಇರುವ ಅಂಶವನ್ನು ಈಗಾಗಲೇ ನಡೆದಿರುವ ಅನೇಕ ಅಧ್ಯಯನಗಳು ಗುರುತಿಸಿವೆ. ಕೇವಲ ಈ ರೀತಿಯ ಆರ್ಥಿಕ ಪ್ರೇರಕ ಅಂಶವು ಸಂಕುಚಿತ ಮತ್ತು ಭೌತಿಕ ಮೈಟೀರಿಯಲ್ಸಿಟಿಕ್ ಪ್ರೇರಣೆ. ಈ ರೀತಿಯ ಪ್ರೇರಣೆಯು ಅಭಿವೃದ್ಧಿಯಾಗಲು ಸಾಮಾಜಿಕ ಒತ್ತಡಕ್ಕೆ ಇರುವ ಕಾರಣವೆಂದರೆ, ಬಹುತೇಕ ಪೋಷಕರು ಶಿಕ್ಷಣಕ್ಕೆ ಇರುವ ಆರ್ಥಿಕ ಮೌಲ್ಯವೇ ಪ್ರಮುಖ ಎಂದು

ತಿಳಿದಿರುವುದು. ಈ ಅಂಶವನ್ನು ಸರಳವಾಗಿ ಅರ್ಥಮಾಡಿಕೊಳ್ಳಬಹುದು, ಆದರೆ ಶಿಕ್ಷಣಕ್ಕೆ ಇರುವ ಆರ್ಥಿಕೇತರ ಮೌಲ್ಯಗಳನ್ನು ಅರ್ಥಮಾಡಿಕೊಳ್ಳದೇ ಇರುವುದು, ಸರಾಸಗಟಾಗಿ ತಳ್ಳಿಹಾಕಲು ಯಾವುದೇ ಆಧಾರಗಳು ಇಲ್ಲ. ಉತ್ತಮ ಉದ್ಯೋಗಾವಕಾಶಕ್ಕೆ ಆರ್ಥಿಕವಾಗಿ ಹಿಂದುಳಿದ ಪೋಷಕರು ಹಾತೊರೆಯುವುದು ಒಳ್ಳೆಯ ಕಾರಣಕ್ಕಾಗಿ. ಇದಕ್ಕೆ ಶಿಕ್ಷಣ ಸಹಾಯ ಮಾಡುತ್ತದೆ ಎಂಬುದು ಅವರ ನಂಬಿಕೆ. ಮುಂದುವರಿದು ಹೇಳುವುದಾದರೆ, ಪೋಷಕರು ಶಿಕ್ಷಣವನ್ನು ಕೇವಲ ಆರ್ಥಿಕ ಅನುಕೂಲ ಕ್ಕಾಗಿಯೇ ಪಡೆದುಕೊಳ್ಳುವುದು ಎಂದು ಹೇಳುವುದು ಕೂಡ ಸರಿಯಲ್ಲ. ಅವರು ಶಿಕ್ಷಣಕ್ಕೆ ಇರುವ ಅನೇಕ ಆರ್ಥಿಕೇತರ ಅಂಶಗಳನ್ನು ತಿಳಿದವರಾಗಿದ್ದಾರೆ. ಅವುಗಳಲ್ಲಿ ಪ್ರಮುಖವಾದವು ಎಂದರೆ, ಸ್ವಾಭಿಮಾನ ಮತ್ತು ಸಾಮಾಜಿಕ ಸ್ಥಾನವನ್ನು ಹೆಚ್ಚಿಸುವಲ್ಲಿ ಶಿಕ್ಷಣದ ಪಾತ್ರ ಅತ್ಯಂತ ಪ್ರಮುಖ. ಉದಾಹರಣೆಗೆ ಕೊರಟಗೆರೆಯ ಪಟ್ಟಣದಲ್ಲಿ ಒಬ್ಬ ವ್ಯಕ್ತಿ ಹೇಳುವಾಗ, ಶಿಕ್ಷಣದಿಂದಾಗಿ ನಮ್ಮ ಜ್ಞಾನವನ್ನು ಹೆಚ್ಚಿಸಿಕೊಳ್ಳಬಹುದು. ಹಾಗೂ ಹೊರಗಿನ ಪ್ರಪಂಚದ ಎಲ್ಲಾ ವ್ಯವಹಾರಗಳನ್ನು ಧೈರ್ಯವಾಗಿ ಎದುರಿಸುವ ಮತ್ತು ಇತರರೊಡನೆ ಮಾತನಾಡುವ ಆತ್ಮಸ್ಥೈರ್ಯವನ್ನು ಶಿಕ್ಷಣ ನೀಡುತ್ತದೆ. ಇದರ ಜೊತೆಗೆ ಯಾವುದೇ ಕಚೇರಿಗೆ ಹೋಗಿ ಅಧಿಕಾರಿಗಳ ಜೊತೆ ಮಾತನಾಡಲು, ಉದ್ಯೋಗಾವಾಶಕ್ಕೆ ಅವಶ್ಯವೆನಿಸಿದ ಅರ್ಜಿ ನಮೂನೆಗಳನ್ನು ತುಂಬಲು ಸಹಾಯವಾಗುತ್ತದೆ ಎಂಬುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿದುಬಂದಂತಹ ಅಂಶವಾಗಿದೆ.

ಒಟ್ಟಾರೆಯಾಗಿ ಕೊರಟಗೆರೆ ಮತ್ತು ಕಮಲಾಪುರ ಪಟ್ಟಣ ಪಂಚಾಯಿತಿಯನ್ನು ತುಲನಾತ್ಮಕವಾಗಿ ನೋಡಿದಾಗ ಎರಡು ಪಟ್ಟಣದಲ್ಲೂ ಸಹ ಗಂಡು ಮಗುವಿಗೆ ಶಿಕ್ಷಣ ಕೊಡಿಸಿದರೆ ಹೆಚ್ಚು ಉಪಯುಕ್ತ ಎನ್ನುವಂತಹ ಅಭಿಪ್ರಾಯವನ್ನು ಹೊಂದಿದ್ದಾರೆ.

**೮.೨. ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಪ್ರೇರಕಾಂಶಗಳು**

ಹೆಣ್ಣುಮಕ್ಕಳ ಶಿಕ್ಷಣವನ್ನು ಕುರಿತಂತೆ ಪೋಷಕರು ಹೊಂದಿರುವ ಮನೋಪ್ರವೃತ್ತಿಯು ಈಗಾಗಲೇ ಅನೇಕ ಅಧ್ಯಯನಗಳು ಗುರುತಿಸಿವೆ. ವಿಶೇಷವಾಗಿ ಉತ್ತರ ಭಾರತದಲ್ಲಿ ಪೋಷಕರು ಹೆಣ್ಣುಮಕ್ಕಳನ್ನು ಶಾಲೆಗೆ ಸೇರಿಸುವುದು ಕೇವಲ ಅವಳ ಮದುವೆ ದೃಷ್ಟಿಯಿಂದ ಎಂಬುದು ಹಲವು ಅಧ್ಯಯನಗಳ ವಾದ (ರೇಖಾ ವಾಜೀರ್, ೨೦೦೧; ರೇಖಾ ಕೌಲ್, ೧೯೯೩; ಪ್ರೋಬ್, ೧೯೯೯; ಡ್ರೀಜ್ ಮತ್ತು ಫಜಡರ್, ೧೯೯೬; ವಾಸವಿ, ೨೦೦೦). ಭಾರತದ ಬಹುತೇಕ ಹೆಣ್ಣುಮಕ್ಕಳು ಮದುವೆಯ ನಂತರ ತಮ್ಮ ಪೋಷಕರ ಮನೆಯನ್ನು ತೊರೆದು, ಗಂಡನ ಮನೆಗೆ ಹೋಗುವುದು ಸಾಮಾನ್ಯ. ಅಲ್ಲದೇ ಆಕೆಯ ಸಂಬಂಧವು ತಮ್ಮ ಪೋಷಕರ ಜೊತೆ ಸ್ವಲ್ಪಮಟ್ಟಿಗೆ ಅಂತರದಿಂದ ಇರುತ್ತದೆ. ಹೀಗಾಗಿ ಹೆಣ್ಣುಮಕ್ಕಳ ಶಿಕ್ಷಣಕ್ಕಿಂತ ವಿವಾಹಕ್ಕೆ ಪೋಷಕರು ಮೊದಲ ಆದ್ಯತೆಯನ್ನು ನೀಡುತ್ತಾರೆ. ಆದರೆ ಗಂಡು ಮಗುವಿಗೆ ಶಿಕ್ಷಣ ಕೊಡಿಸುವ ಕುರಿತು ಪರಿಸ್ಥಿತಿ ಸಂಪೂರ್ಣ ವಿಭಿನ್ನ ವಾಗಿದೆ. ಗಂಡುಮಕ್ಕಳು ಮದುವೆಯ ನಂತರವು ತಮ್ಮ (ಪೋಷಕರು) ಜೊತೆ ಇರುತ್ತಾರೆ. ಅಲ್ಲದೇ ತಮ್ಮ ಇಳಿವಯಸ್ಸಿನಲ್ಲಿ ನಮ್ಮನ್ನು ಸಲಹುತ್ತಾರೆ ಎಂಬ ಭಾವನೆ ಬಹುತೇಕ ಪೋಷಕರಲ್ಲಿದೆ. ಮತ್ತೊಂದು ಬಹಳ ಸಂಕೀರ್ಣವಾದ ವಿಷಯವೆಂದರೆ ಪುರುಷರಿಗಿಂತ ಮಹಿಳೆಯರಿಗೆ ಉದ್ಯೋಗ

ಅವಕಾಶಗಳು ಸೀಮಿತವಾಗಿವೆ. ಈ ಬಗೆಯ ಸಾಮಾಜಿಕ ಒಪ್ಪಂದಗಳಲ್ಲಿ ಇಂದು ಅನೇಕ ಬದಲಾವಣೆಗಳಾಗಿವೆ.

ಕಮಲಾಪುರ ಪಟ್ಟಣ ಪಂಚಾಯಿತಿಯಲ್ಲಿ ಪೋಷಕರು ಹೆಣ್ಣುಮಕ್ಕಳ ಶಿಕ್ಷಣದ ಬಗ್ಗೆ ಭಿನ್ನವಾದ ಮನೋಭಾವನೆ ಹೊಂದಿದವರಾಗಿದ್ದಾರೆ. ಅವರ ದೃಷ್ಟಿಕೋನದಿಂದಲೇ ಹೇಳುವುದಾದರೆ ಮದುವೆಯಾದ ಮೇಲೆ ಅವಳು ಬೇರೆಯವರ ಮನೆಗೆ ಹೋಗುತ್ತಾಳೆ. ಅವಳು ನಮಗೆ ಆಸರೆ ಯಾಗುವುದಿಲ್ಲ. ಮತ್ತು ವಿವಾಹದ ಸಂದರ್ಭದಲ್ಲಿ ಹೆಚ್ಚು ವರದಕ್ಷಿಣೆ ಕೊಡಬೇಕಾಗುತ್ತದೆ ಎಂದು ಅನೇಕ ಪೋಷಕರು ಹೇಳಿದರೆ, ಇನ್ನು ಕೆಲವು ಪೋಷಕರು ಹೇಗಿದ್ದರೂ ಅವಳು ನಮ್ಮಿಂದ ದೂರ ವಾಗುತ್ತಾಳೆ ಎಂಬ ದೃಷ್ಟಿಯಿಂದ ಹೆಣ್ಣುಮಕ್ಕಳ ಶಿಕ್ಷಣಕ್ಕೆ ಬಂಡವಾಳ ಹಾಕುವುದು, ಗಂಡು ಮಕ್ಕಳಿಗಿಂತ ಕಡಿಮೆ. ಆದರೆ ಈ ದೃಷ್ಟಿಕೋನವು ಗಂಡುಮಕ್ಕಳ ವಿಷಯದಲ್ಲಿ ಹೆಚ್ಚು ಪ್ರಬಲವಾಗಿದ್ದರೆ, ಹೆಣ್ಣುಮಕ್ಕಳ ವಿಷಯದಲ್ಲಿ ಇದು ಅತ್ಯಂತ ಕಡಿಮೆ ಇದೆ. ಹಲವು ಪೋಷಕರು ಹೇಳುವ ಹಾಗೇ ಹೆಚ್ಚಿನ ವಿದ್ಯಾಭ್ಯಾಸ ಕೊಡಿಸುವುದು ನಮ್ಮ ಸಮುದಾಯ ಜಾತಿಯಲ್ಲಿ ಇಲ್ಲ ಎಂದಿದ್ದಾರೆ.

## ಭಾಗ-೨

### ೮.೩. ಶಿಕ್ಷಣ-ವಿವಾಹ-ಜಾತಿ

ಕೊರಟಗೆರೆ ಪಟ್ಟಣ ಪಂಚಾಯಿತಿಯಲ್ಲಿ ಹೆಣ್ಣುಮಕ್ಕಳಿಗೆ ಹೆಚ್ಚು ಶಿಕ್ಷಣ ಕೊಡಿಸಿದರೆ ವಿವಾಹ ಮಾಡಿಕೊಡಲು ತೊಂದರೆಯಾಗುತ್ತದೆಯೇ ಎಂಬ ಪ್ರಶ್ನೆಯನ್ನು ಕೇಳಿದಾಗ ಶೇಕಡ ೭೩.೩೩ರಷ್ಟು ಇಲ್ಲ ಎಂದು, ಶೇಕಡ ೨೨.೦೦ರಷ್ಟು ಪೋಷಕರು ಕಷ್ಟವಾಗುತ್ತದೆ ಎಂದು ಹೇಳಿದ್ದಾರೆ. ಶೇಕಡ ೪.೬೭ರಷ್ಟು ಯಾವುದೇ ಉತ್ತರ ನೀಡಿಲ್ಲ. ಅದೇ ರೀತಿ ಕಮಲಾಪುರ ಪಟ್ಟಣ ಪಂಚಾಯಿತಿಯಲ್ಲಿ ಹೆಣ್ಣುಮಕ್ಕಳಿಗೆ ಹೆಚ್ಚು ಶಿಕ್ಷಣ ಕೊಡಿಸಿದರೆ ವಿವಾಹ ಮಾಡಿಕೊಡಲು ತೊಂದರೆಯಾಗುತ್ತದೆಯೇ ಎಂದು ಕೇಳಿದಾಗ ಶೇಕಡ ೫೪.೩೩ರಷ್ಟು ಕಷ್ಟವಾಗುತ್ತದೆ ಎಂದು ಹೇಳಿದ್ದಾರೆ. ಶೇಕಡ ೨೮.೬೭ರಷ್ಟು ಪೋಷಕರು ಸರಳ ಎಂದಿದ್ದಾರೆ. ಶೇಕಡ ೧೭.೦೦ರಷ್ಟು ಯಾವುದೇ ಉತ್ತರ ನೀಡಿಲ್ಲ. ಯಾವ ಕಾರಣಕ್ಕೆ ಹೆಣ್ಣುಮಕ್ಕಳಿಗೆ ಹೆಚ್ಚು ಶಿಕ್ಷಣ ಕೊಡಿಸಿದರೆ ವಿವಾಹ ಮಾಡಿಕೊಡಲು ತೊಂದರೆಯಾಗುತ್ತದೆ ಎಂದು ಕೇಳಿದಾಗ ಶೇಕಡ ೨೮.೬೬ರಷ್ಟು ಪೋಷಕರು ವರದಕ್ಷಿಣೆ ಹೊರೆ ಹೆಚ್ಚಾಗುತ್ತದೆ ಎಂದು, ಶೇಕಡ ೧೫.೦೦ರಷ್ಟು ವಿವಾಹದ ವೆಚ್ಚ ಹೆಚ್ಚಾಗುತ್ತದೆ ಎಂದು ಹೇಳಿದ್ದಾರೆ. ಇದಲ್ಲದೆ ಇತರೆ ಬೇರೆ ಕಾರಣಗಳನ್ನು ನೀಡಿದ್ದಾರೆ. ಅವುಗಳಲ್ಲಿ ವರ ಲಭ್ಯತೆಯ ಸಮಸ್ಯೆ, ಸಂಪ್ರದಾಯ ಇತರೆ ಕಾರಣಗಳಾಗಿವೆ. ಅದೇ ರೀತಿ ಕೊರಟಗೆರೆ ಪಟ್ಟಣ ಪಂಚಾಯಿತಿಯಲ್ಲಿ ಹೆಣ್ಣುಮಕ್ಕಳಿಗೆ ಹೆಚ್ಚು ಶಿಕ್ಷಣ ಕೊಡಿಸಿದರೆ ವಿವಾಹ ಮಾಡಿಕೊಡಲು ಯಾವ ಕಾರಣಕ್ಕಾಗಿ ತೊಂದರೆಯಾಗಿದೆ ಎಂದು ಕೇಳಿದಾಗ ಬೆರಳಣಿಕೆಯಷ್ಟು ಅಂದರೆ ಶೇಕಡ ೯.೬ರಷ್ಟು ವರದಕ್ಷಿಣೆ ಹೊರೆ ಹೆಚ್ಚಾಗುತ್ತದೆ ಎಂದು ಹೇಳುತ್ತಾರೆ. ಶೇಕಡ ೯.೦೦ರಷ್ಟು ಪೋಷಕರು ವಿವಾಹದ ವೆಚ್ಚ ಹೆಚ್ಚಾಗುತ್ತದೆ ಎನ್ನುತ್ತಾರೆ. ಶೇಕಡ ೫.೬೬ರಷ್ಟು ವರ ಲಭ್ಯತೆಯ ಸಮಸ್ಯೆ ಎಂದು, ಶೇಕಡ ೨.೦೦ರಷ್ಟು ಪೋಷಕರು ಸಂಪ್ರದಾಯ ಮತ್ತು ಇತರೆ ಕಾರಣ ಎಂದು ಉತ್ತರಿಸಿದ್ದಾರೆ.

ಕಮಲಾಪುರ ಪಟ್ಟಣ ಪಂಚಾಯಿತಿಗಿಂತ ಕೊರಟಗೆರೆ ಪಟ್ಟಣ ಪಂಚಾಯಿತಿಯಲ್ಲಿ ಹೆಣ್ಣುಮಕ್ಕಳಿಗೆ ಹೆಚ್ಚು ಶಿಕ್ಷಣ ಕೊಡಿಸಿದರೆ ವಿವಾಹ ಮಾಡಿಕೊಡಲು ಸರಳ ಎಂದು ಉತ್ತರಿಸಿದ್ದಾರೆ. ಹೇಗೆ ಎಂದು ಮರುಪ್ರಶ್ನೆ ಕೇಳಿದಾಗ ಹೆಣ್ಣುಮಕ್ಕಳಿಗೆ ಶಿಕ್ಷಣ ಕೊಡಿಸಿದಷ್ಟು ಹೆಚ್ಚು ತಿಳುವಳಿಕೆ ಮತ್ತು ಮೀಸಲಾತಿಯ ಆಧಾರದಲ್ಲಿ ಉದ್ಯೋಗಾವಕಾಶಗಳು ದೊರೆಯುವುದರಿಂದ ಅವಳ ಮದುವೆಯ ಸಂದರ್ಭದಲ್ಲಿ ಅಷ್ಟೇನು ಕಷ್ಟವಾಗುವುದಿಲ್ಲ ಎಂದಿದ್ದಾರೆ. ಈ ಎರಡು ಪಟ್ಟಣ ಪಂಚಾಯಿತಿಗಳಿಗೆ ಭೇಟಿ ನೀಡಿ ಕ್ಷೇತ್ರಾಧ್ಯಯನದ ಮೂಲಕ ಸಮೀಕ್ಷೆ ಮಾಡಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಕುಟುಂಬದ ವಿವರಗಳನ್ನು ಪಡೆದುಕೊಳ್ಳುವಾಗ ಕುಟುಂಬದ ಒಟ್ಟು ಸದಸ್ಯರ ಸಂಖ್ಯೆ, ವಿಭಕ್ತ ಕುಟುಂಬ, ಅವಿಭಕ್ತ ಕುಟುಂಬಗಳ ಜೊತೆಗೆ ಕುಟುಂಬದ ವೃತ್ತಿ, ಆದಾಯ, ಶಿಕ್ಷಣ, ಸದಸ್ಯರ ವಯಸ್ಸು ಇತ್ಯಾದಿ ವಿವರಗಳನ್ನು ಪಡೆಯಲಾಗಿದೆ.

**ಕುಟುಂಬಗಳ ವಿವರ :** ಆಯ್ದುಕೊಂಡ ಎರಡು ಪಟ್ಟಣ ಪಂಚಾಯಿತಿಗಳಲ್ಲಿ ಒಟ್ಟು ೬೦೦ ಕುಟುಂಬಗಳ ಸಮೀಕ್ಷೆ ಮಾಡಲಾಗಿದೆ. ಶೈಕ್ಷಣಿಕವಾಗಿ ಹಿಂದುಳಿದಿರುವ ಪ್ರದೇಶವಾದ ಹೊಸಪೇಟೆ ತಾಲ್ಲೂಕಿನ ಕಮಲಾಪುರ ಪಟ್ಟಣ ಪಂಚಾಯಿತಿಯಿಂದ ಒಟ್ಟು ೩೦೦ ಕುಟುಂಬಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಶೈಕ್ಷಣಿಕವಾಗಿ ಮುಂದುವರಿಯುತ್ತಿರುವ ಕೊರಟಗೆರೆ ತಾಲ್ಲೂಕಿನ ಕೊರಟಗೆರೆ ಪಟ್ಟಣ ಪಂಚಾಯಿತಿಯಿಂದ ೩೦೦ ಕುಟುಂಬಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಪ್ರತಿಯೊಂದು ಪಟ್ಟಣ ಪಂಚಾಯಿತಿಯಿಂದ ಪರಿಶಿಷ್ಟ ಜಾತಿಗೆ ಸೇರಿದ ೭೫ ಕುಟುಂಬಗಳನ್ನು, ಪರಿಶಿಶ್ಟ ಪಂಗಡಕ್ಕೆ ಸೇರಿದ ೭೫ ಕುಟುಂಬಗಳನ್ನು, ಮುಸ್ಲಿಂ ಸಮುದಾಯಕ್ಕೆ ಸೇರಿದ ೭೫ ಕುಟುಂಬಗಳನ್ನು ಮತ್ತು ಇತರೆ ಸಮುದಾಯಕ್ಕೆ ಸೇರಿದ ೭೫ ಕುಟುಂಬಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

**ಕೋಷ್ಟಕ-೮.೧**

## ವಿವಿಧ ಸಾಮಾಜಿಕ ಗುಂಪುಗಳ ವಿವರ

| ಕ್ರ.ಸಂ | ಪಟ್ಟಣ ಪಂಚಾಯಿತಿ ಹೆಸರು | ಕುಟುಂಬಗಳ ಸಂಖ್ಯೆ | ಕುಟುಂಬಗಳ ವರ್ಗ | | | |
|---|---|---|---|---|---|---|
| | | | ಪ.ಜಾತಿ | ಪ.ಪಂ | ಮುಸ್ಲಿಂ | ಇತರೆ |
| ೧. | ಕೊರಟಗೆರೆ | ೩೦೦ | ೭೫ | ೭೫ | ೭೫ | ೭೫ |
| ೨. | ಕಮಲಾಪುರ | ೩೦೦ | ೭೫ | ೭೫ | ೭೫ | ೭೫ |
| | ಒಟ್ಟು | ೬೦೦ | ೧೫೦ | ೧೫೦ | ೧೫೦ | ೧೫೦ |

ಮೂಲ : ಕ್ಷೇತ್ರಕಾರ್ಯದ ಮಾಹಿತಿ.

ಕುಟುಂಬದ ವಿವಿಧ ವರ್ಗಗಳ ದತ್ತಾಂಶ ವಿವರವು ರೇಖಾಚಿತ್ರದಲ್ಲಿ ಈ ಮೇಲಿನಂತೆ ಕಂಡುಬಂದಿದೆ.

ಲಂಬಚಿತ್ರ ೧. ಕುಟುಂಬದ ವಿವಿಧ ವರ್ಗಗಳು



## ಕೋಷ್ಟಕ-೮.೨

## ಅಧ್ಯಯನಕ್ಕೊಳಪಡಿಸಿದ ಕುಟುಂಬಗಳ ಸದಸ್ಯರ ಮಾಹಿತಿ

| ಕ್ರ.ಸಂ | ಪಟ್ಟಣ ಪಂಚಾಯಿತಿ ಹೆಸರು | ಕುಟುಂಬಗಳ ಸಂಖ್ಯೆ | ಒಟ್ಟು ಕುಟುಂಬದಲ್ಲಿನ ಸದಸ್ಯರ ಸಂಖ್ಯೆ | | |
|---|---|---|---|---|---|
| | | | ಗಂಡಸರು | ಹೆಂಗಸರು | ಶೇಕಡ ಒಟ್ಟು |
| ೧. | ಕೊರಟಗೆರೆ | ೩೦೦ | ೬೭೯ | ೭೩೨ | ೧೪೧೧ |
| ೨. | ಕಮಲಾಪುರ | ೩೦೦ | ೮೦೦ | ೮೨೨ | ೧೬೨೨ |
| | ಒಟ್ಟು | ೬೦೦ | ೧೪೭೯ | ೧೫೫೪ | ೩೦೩೩ |

ಮೂಲ : ಕ್ಷೇತ್ರಕಾರ್ಯದ ಮಾಹಿತಿ.

ಪ್ರಾಥಮಿಕ ಮೂಲಗಳ ಪ್ರಕಾರ ಎರಡು ಪಟ್ಟಣ ಪಂಚಾಯಿತಿಗಳ ೬೦೦ ಕುಟುಂಬಗಳಲ್ಲಿ ಗಂಡಸರು ೧೪೭೯, ಹೆಂಗಸರು ೧೫೫೪, ಒಟ್ಟು ೩೦೩೩ ಕುಟುಂಬದ ಸದಸ್ಯರಿದ್ದಾರೆ. ಅತಿಹೆಚ್ಚಿನ ಸದಸ್ಯರನ್ನು ಹೊಂದಿದ ಪಟ್ಟಣ ಪಂಚಾಯಿತಿ ಕಮಲಾಪುರದಲ್ಲಿ ೩೦೦ ಕುಟುಂಬಗಳಿಗೆ ೧೬೨೨ ಮಂದಿ ಸದಸ್ಯರಿದ್ದಾರೆ. ಇದರಲ್ಲಿ ಗಂಡಸರು ೮೦೦, ಹೆಂಗಸರು ೮೨೨ರಷ್ಟು ಇದ್ದಾರೆ.

ಅತ್ಯಂತ ಕಡಿಮೆ ಸಂಖ್ಯೆಯನ್ನು ಹೊಂದಿದ ಪಟ್ಟಣ ಪಂಚಾಯಿತಿ ಕಮಲಾಪುರ. ಈ ಪಂಚಾಯಿತಿಯ ಕುಟುಂಬಗಳ ಸಂಖ್ಯೆ ೩೦೦, ಇದರಲ್ಲಿ ಗಂಡಸರು ೬೭೯, ಹೆಂಗಸರು ೭೩೨, ಒಟ್ಟು ೧೪೧೧ರಷ್ಟು ಕುಟುಂಬದ ಸದಸ್ಯರಿದ್ದಾರೆ. ಜನಸಂಖ್ಯೆಯಲ್ಲಿ ಒಂದು ಪಟ್ಟಣ ಪಂಚಾಯಿತಿಯಿಂದ ಮತ್ತೊಂದು ಪಟ್ಟಣ ಪಂಚಾಯಿತಿಗೆ ವ್ಯತ್ಯಾಸವಿರುವುದು ಕಂಡುಬರುತ್ತದೆ. ಎರಡು ಪಟ್ಟಣ ಪಂಚಾಯಿತಿಗಳಲ್ಲಿ ಗಂಡಸರಿಗಿಂತ ಹೆಂಗಸರ ಸಂಖ್ಯೆಯಲ್ಲಿ ಹೆಚ್ಚಳವಾಗಿರುವುದು ಕಂಡುಬಂದಿದೆ.

ಎರಡೂ ಪಟ್ಟಣ ಪಂಚಾಯಿತಿಗಳ ಕುಟುಂಬದ ಸದಸ್ಯರ ಸಂಖ್ಯೆಯನ್ನು ಮುಂದಿನ ರೇಖಾ ಚಿತ್ರದಲ್ಲಿ ಕಾಣಬಹುದು. ಈ ವಿಶ್ಲೇಷಣೆಯಿಂದ ತಿಳಿದುಬರುವ ಅಂಶವೇನೆಂದರೆ ಎರಡು ಪಟ್ಟಣ ಪಂಚಾಯಿತಿಗಳಲ್ಲಿ ಹೆಂಗಸರು ಹೆಚ್ಚು ಇರುವುದು ಕಂಡುಬರುತ್ತದೆ. ಶಾಲೆಗೆ ದಾಖಲಾಗಿರುವ ಹಾಗೂ ದಾಖಲಾಗದಿರುವ ಬಾಲಕ, ಬಾಲಕಿಯರ ಪರಿಮಾಣದ ಬಗ್ಗೆ ವಿಶ್ಲೇಷಿಸಲು ಇದು ನೆರವಾಗುತ್ತದೆ. ಎರಡು ಪಟ್ಟಣ ಪಂಚಾಯಿತಿಗಳ ಕುಟುಂಬಗಳ ವಿವರಕ್ಕೆ ಸಂಬಂಧಿಸಿದಂತೆ ಮತ್ತು ಅವು ಯಾವ ಯಾವ ಗುಂಪುಗಳಾಗಿ ಜೀವನ ನಿರ್ವಹಿಸುತ್ತಿವೆ ಎಂದು ದತ್ತಾಂಶದಿಂದ ತಿಳಿಯಬಹುದು.

**ಕುಟುಂಬದ ಸ್ವರೂಪ :** ಅಧ್ಯಯನ ಮಾಡಿದ ಪಟ್ಟಣ ಪಂಚಾಯಿತಿಗಳ ಸಾಮಾಜಿಕ ಚಿತ್ರಣ ಪಡೆಯಲು ಅಲ್ಲಿನ ಕುಟುಂಬಗಳ ಅರಿವು (ತಿಳುವಳಿಕೆ) ಅಗತ್ಯ. ಅಲ್ಲದೇ ಮಕ್ಕಳ ಶೈಕ್ಷಣಿಕ

ಲಂಬಚಿತ್ರ ೨. ಲಿಂಗವಾರು ಕುಟುಂಬದ ವಿವರ



ಪ್ರಗತಿಯ ಮೇಲೆ ಕುಟುಂಬದ ರಚನೆಯ ಪ್ರಭಾವವಿರುತ್ತದೆ. ಈ ಹಿನ್ನೆಲೆಯಲ್ಲಿ ಕುಟುಂಬಗಳ ವಿಶ್ಲೇಷಣೆ ಮಾಡಲಾಗಿದೆ.

ಕುಟುಂಬವು ಒಂದು ಸಾರ್ವತ್ರೀಕವಾದ ಸಂಸ್ಥೆ ಎಂಬುದು ತಿಳಿದ ಸಂಗತಿ. ಸಮಾಜವು ಕುಟುಂಬದ ಅವಿಭಾಜ್ಯ ಅಂಗ. ಕುಟುಂಬವಿಲ್ಲದೇ ಸಮಾಜವಿಲ್ಲ. ಮಾನವ ಜೀವನದ ತಳಹದಿಯೂ ಕೂಡ ಕುಟುಂಬವೇ ಆಗಿದೆ. ಮಗುವಿನ ಪ್ರಪ್ರಥಮ ಸಾಮಾಜಿಕ ಪರಿಸರ ಹಾಗೂ ಸಮೂಹ, ನವಜಾತ ಶಿಶುವಿಗೆ ಸಂಸ್ಕಾರ ನೀಡುವುದು, ಶಿಕ್ಷಣ ಕೊಡುವುದು, ಅವನನ್ನು ಸಮಾಜದ ಜವಾಬ್ದಾರಿಯುತ ಪ್ರಜೆಯನ್ನಾಗಿ ಮಾಡುವುದು ಕುಟುಂಬದ ಕಾರ್ಯವಾಗಿದೆ.

"ನಮ್ಮ ಸಾಮಾಜಿಕ ಜೀವನಕ್ಕೆ ಒಂದು ನೆಲೆಯನ್ನು ಮತ್ತು ಸ್ಥಿರತೆಯನ್ನು ಕೊಡುವುದು ಕುಟುಂಬವೇ, ಉಳಿದೆಲ್ಲಾ ಸಂಸ್ಥೆಗಳಿಗಿಂತ ಅದು ಹೆಚ್ಚು ಶಾಶ್ವತವೂ ಪ್ರಭಾವಿಯೂ ಆಗಿದೆ. ಅದು ನಮ್ಮ ವೈಯಕ್ತಿಕ ಜೀವನಕ್ಕೆ ಸಂಬಂಧಿಸಿದ್ದು. ನಾವೆಲ್ಲರೂ ಒಂದಲ್ಲ ಒಂದು ಕುಟುಂಬಕ್ಕೆ ಸೇರಿದವ ರಾಗಿದ್ದು, ನಮ್ಮ ಜೀವಿತದ ಬಹುಪಾಲು ಜೀವನವನ್ನು ಕುಟುಂಬಗಳಲ್ಲಿಯೇ ಕಳೆಯುವವರಿದ್ದೇವೆ" ಎಂಬ ಸಮಾಜಶಾಸ್ತ್ರಜ್ಞರ ವ್ಯಾಖ್ಯಾನವು ಕುಟುಂಬದ ಪರಿಕಲ್ಪನೆಯನ್ನು ಪರಿಚಯಿಸುತ್ತದೆ. ಕುಟುಂಬದ ಅರ್ಥವನ್ನು ವಿವಿಧ ಸಮಾಜಶಾಸ್ತ್ರಜ್ಞರು ತಮ್ಮದೇ ಆದ ವ್ಯಾಖ್ಯಾನದ ಮೂಲಕ ವಿವರಿಸಿದ್ದಾರೆ.

"ರಕ್ತ ಸಂಬಂಧಿಗಳಿಂದ ಕೂಡಿದ ಮತ್ತು ಕನಿಷ್ಟ ಎರಡು ತಲೆಮಾರುಗಳನ್ನು ಒಳಗೊಂಡಿರುವ ಅತಿಸೂಕ್ಷ್ಮ ಸಾಮಾಜಿಕ ಸಂಘಟನೆಯೇ ಕುಟುಂಬ" (ಸಮ್ನರ್ ಮತ್ತು ಕೆಲ್ಲರ್). "ಗಂಡ/ಹೆಂಡತಿ ಮತ್ತು ಮಕ್ಕಳುಗಳನ್ನೊಳಗೊಂಡಿರುವ ಜೈವಿಕ, ಸಾಮಾಜಿಕ ಘಟಕವೇ ಕುಟುಂಬ" (ಇಲಿಯೆಟ್ ಮತ್ತು ಮೆರಿಲ್). ಮೇಲಿನ ವ್ಯಾಖ್ಯಾನಗಳ ಹಿನ್ನೆಲೆಯಲ್ಲಿ ಸಮೀಕ್ಷಿಸಿದ ಕುಟುಂಬಗಳ ವಿವರಗಳನ್ನು ವಿಶ್ಲೇಷಿಸಲಾಗಿದೆ.

**ಕೋಷ್ಟಕ-೮.೩**

## ಅಧ್ಯಯನಕ್ಕೊಳಪಡಿಸಿದ ಕುಟುಂಬದ ಮಾದರಿ

| ಕ್ರ.ಸಂ | ಪಟ್ಟಣ ಪಂಚಾಯಿತಿ ಹೆಸರು | ಕುಟುಂಬಗಳ ಸಂಖ್ಯೆ | ಕುಟುಂಬದ ವಿವರ | |
|---|---|---|---|---|
| | | | ವಿಭಕ್ತ ಕುಟುಂಬ | ಅವಿಭಕ್ತ ಕುಟುಂಬ |
| ೧. | ಕೊರಟಗೆರೆ | ೩೦೦ | ೨೬೩ | ೩೭ |
| ೨. | ಕಮಲಾಪುರ | ೩೦೦ | ೨೬೮ | ೩೨ |
| | ಒಟ್ಟು | ೬೦೦ | ೫೩೧ | ೬೯ |

ಮೂಲ : ಕ್ಷೇತ್ರಕಾರ್ಯದ ಮಾಹಿತಿ.

ಒಟ್ಟು ಎರಡು ಪಟ್ಟಣ ಪಂಚಾಯಿತಿಗಳ ೬೦೦ ಕುಟುಂಬಗಳಲ್ಲಿ ವಿಭಕ್ತ ಕುಟುಂಬ ಶೇಕಡ ೮೮.೩(೫೩೧)ರಷ್ಟಿದೆ. ಒಟ್ಟಾರೆಯಾಗಿ ಹೇಳುವುದಾದರೆ ಅವಿಭಕ್ತ ಕುಟುಂಬ ಕಣ್ಮರೆಯಾಗುವುದಕ್ಕೆ

ಲಂಬಚಿತ್ರ ೩. ವಿಭಕ್ತ, ಅವಿಭಕ್ತ ಕುಟುಂಬದ ವಿವರ



ನಗರೀಕರಣ, ಯಾಂತ್ರಿಕ ಜೀವನ ಪದ್ಧತಿಗಳು ಇದಕ್ಕೆ ಪ್ರಮುಖ ಕಾರಣವಾಗಿವೆ ಎಂದು ಹೇಳಬಹುದು. ಕೊರಟಗೆರೆ ಪಟ್ಟಣದಲ್ಲಿ ಶೇಕಡ ೮೭.೬೬ ವಿಭಕ್ತ ಕುಟುಂಬವಿದ್ದರೆ, ಅವಿಭಕ್ತ ಕುಟುಂಬ ಶೇಕಡ ೧೨.೩೩ರಷ್ಟು ಇದೆ. ಕಮಲಾಪುರದಲ್ಲಿ ಶೇಕಡ ೮೮.೫ರಷ್ಟು ವಿಭಕ್ತ ಕುಟುಂಬವಿದ್ದರೆ, ಅವಿಭಕ್ತ ಕುಟುಂಬ ಶೇಕಡ ೧೦.೬೬ರಷ್ಟು ಇದೆ. ಕುಟುಂಬಗಳ ವಿವರವನ್ನು ಶೇಕಡವಾರು ಪ್ರಮಾಣದಲ್ಲಿ ಈ ರೇಖಾಚಿತ್ರದಲ್ಲಿ ತೋರಿಸಲಾಗಿದೆ.

**ಕೋಷ್ಟಕ-೮.೪**

## ಅಧ್ಯಯನಕ್ಕೊಳಪಡಿಸಿದ ಕುಟುಂಬದ ಸದಸ್ಯರ ಶೈಕ್ಷಣಿಕ ವಿವರ

| ಪಟ್ಟಣ ಪಂಚಾಯಿತಿ ಹೆಸರು | ಕೊರಟಗೆರೆ | | | ಕಮಲಾಪುರ | | | ಒಟ್ಟು |
|---|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | |
| ಪ್ರಾಥಮಿಕ | ೧೪೬ | ೧೩೫ | ೨೮೧ | ೮೫ | ೧೯೨ | ೩೭೭ | ೬೫೮ |
| ಮಾಧ್ಯಮಿಕ | ೧೯೪ | ೨೦೪ | ೩೯೮ | ೧೩೬ | ೧೨೯ | ೨೬೫ | ೬೬೧ |
| ಪ್ರೌಢಶಾಲೆ | ೧೩೩ | ೧೧೯ | ೨೫೨ | ೯೧ | ೭೩ | ೧೬೪ | ೪೧೬ |
| ಡಿಪ್ಲೊಮಾ | ೨ | ೨ | ೪ | ೨ | ೨ | ೨ | ೬ |
| ಪದವಿ ಪೂರ್ವ | ೩೨ | ೨೧ | ೫೩ | ೨೪ | ೧೨ | ೩೬ | ೮೯ |
| ಪದವಿಯೇತರ | ೧೮ | ೧೧ | ೨೯ | ೧೭ | ೭ | ೨೪ | ೫೩ |
| ಸ್ನಾತಕೋತ್ತರ | ೧ | - | ೧ | ೩ | ೨ | ೫ | ೬ |
| ಇತರೆ | ೪ | ೬ | ೧೦ | ೩ | ೧ | ೪ | ೧೪ |
| ಒಟ್ಟು | ೫೩೦ | ೪೯೮ | ೧೦೨೮ | ೪೬೧ | ೪೬೧ | ೮೭೭ | ೯೦೫ |

ಮೂಲ : ಕ್ಷೇತ್ರಕಾರ್ಯದ ಮಾಹಿತಿ.

**ಕೋಷ್ಟಕ-೮.೪.೧**

## ಅಧ್ಯಯನಕ್ಕೊಳಪಡಿಸಿದ ಕುಟುಂಬದ ಸದಸ್ಯರ ಶೈಕ್ಷಣಿಕ ವಿವರ

| ಕ್ರ.ಸಂ | ಪಟ್ಟಣ ಪಂಚಾಯಿತಿ ಹೆಸರು | ಕುಟುಂಬದ ಸದಸ್ಯರ ಸಂಖ್ಯೆ | | | ಅನಕ್ಷರಸ್ಥರು | | |
|---|---|---|---|---|---|---|---|
| | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧. | ಕೊರಟಗೆರೆ | ೬೭೯ | ೭೩೨ | ೧೪೧೧ | ೧೪೯ | ೨೩೪ | ೩೮೩ |
| ೨. | ಕಮಲಾಪುರ | ೮೦೦ | ೮೨೨ | ೧೬೨೨ | ೩೩೯ | ೪೦೬ | ೭೪೫ |
| | ಒಟ್ಟು | ೧೪೭೯ | ೧೫೫೪ | ೩೦೩೩ | ೪೮೮ | ೬೪೦ | ೧೧೨೮ |

ಮೂಲ : ಕ್ಷೇತ್ರಕಾರ್ಯದ ಮಾಹಿತಿ.

ಸಾಕ್ಷರತೆಗೆ ಸಂಬಂಧಿಸಿದಂತೆ ಈಗಾಗಲೇ ಹಿಂದಿನ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ. ಎರಡು ಪಟ್ಟಣ ಪಂಚಾಯಿತಿಗಳಲ್ಲಿ ಅಲ್ಲಿಯ ಎಲ್ಲಾ ಕುಟುಂಬದ ಸದಸ್ಯರ (ಶಾಲೆಗೆ ಹೋಗುವ ಮಕ್ಕಳನ್ನು ಸೇರಿಸಿಕೊಂಡು) ಶೈಕ್ಷಣಿಕ ವಿವರವನ್ನು ಸಂಗ್ರಹಿಸಲಾಗಿದೆ. ಆ ಪ್ರಕಾರ ಎರಡು ಪಟ್ಟಣ ಪಂಚಾಯಿತಿಗಳಲ್ಲಿ ಗಂಡಸರು ಮತ್ತು ಹೆಂಗಸರಲ್ಲಿ ಅಕ್ಷರಸ್ಥರು ಮತ್ತು ಅನಕ್ಷರಸ್ಥರ ವಿವರ ಸಂಗ್ರಹಿಸಲಾಗಿದೆ. ಲಭ್ಯವಿರುವ ದತ್ತಾಂಶದ ಪ್ರಕಾರ ೬೦೦ ಕುಟುಂಬಗಳಲ್ಲಿ ೩೦೩೩ ಸದಸ್ಯರಿದ್ದಾರೆ. ಇದರಲ್ಲಿ ೧೪೭೯ ಗಂಡಸರು ೧೫೫೪ ಹೆಂಸಗರು, ಒಟ್ಟು ೧೧೨೮ ಜನರು ಅನಕ್ಷರಸ್ಥರಿದ್ದಾರೆ. ಒಟ್ಟಾರೆಯಾಗಿ ಈ ಪ್ರಮಾಣ ಶೇಕಡ ೩೭.೧೬ರಷ್ಟಿದೆ. ಇದರಲ್ಲಿ ಮಹಿಳಾ ಸಾಕ್ಷರತಾ ಪ್ರಮಾಣ ಗಂಡಸರಿಗಿಂತಲೂ ಕಡಿಮೆ ಇರುವುದು ಕಂಡುಬರುತ್ತದೆ. ಉಳಿದಂತೆ ೧೪೭೯ ಗಂಡಸರು, ೧೫೫೪ ಹೆಂಗಸರು, ಒಟ್ಟು ೩೦೩೦ ಅಕ್ಷರಸ್ಥರು ಇರುವುದು ಕಂಡುಬಂದಿದೆ. ಇವರೆಲ್ಲರೂ ವಿವಿಧ ಹಂತ ಗಳಲ್ಲಿ ಶಿಕ್ಷಣ ಪಡೆದವರಾಗಿದ್ದಾರೆ.

ಯಾವುದೇ ಪ್ರದೇಶದಲ್ಲಿ ಅಕ್ಷರಸ್ಥರು ಅಥವಾ ಶಿಕ್ಷಣ ಪಡೆದವರ ಸಂಖ್ಯೆ ಎಲ್ಲಿ ಅಧಿಕ ವಿರುತ್ತದೆಯೋ ಅಂತಹ ಪ್ರದೇಶಗಳಲ್ಲಿ ಅಭಿವೃದ್ಧಿ ಯೋಜನೆಗಳ ಕುರಿತು ತಿಳುವಳಿಕೆ ಹೆಚ್ಚು ಇರುತ್ತದೆ ಎಂಬ ಮಾತುಗಳು ಕೇಳಿಬರುತ್ತವೆ. ಎಲ್ಲಿ ಮಹಿಳಾ ಸಾಕ್ಷರತಾ ಪ್ರಮಾಣವು ಹೆಚ್ಚು ಇದೆಯೋ ಅಲ್ಲೆಲ್ಲಾ ಶಿಕ್ಷಣದ ಬಗ್ಗೆ ಒಲವು ಹೆಚ್ಚು ಎಂಬ ನಂಬಿಕೆ ಇದೆ. ಅಂತಹ ಕಡೆ ಮಹಿಳೆ ಯರು ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಿ ಕೊಡುವ ಆಸಕ್ತಿಯನ್ನು ಹೊಂದಿದವರಾಗಿರುತ್ತಾರೆ. ಎಲ್ಲಿ ಮಹಿಳೆಯರ ಸಾಕ್ಷರತೆ ಪ್ರಮಾಣ ಕಡಿಮೆ ಇದೆಯೋ ಅಂತಹ ಕಡೆ ಶಿಕ್ಷಣದ ಬಗ್ಗೆ ಅಷ್ಟಾಗಿ ಕಾಳಜಿ ಕಂಡುಬರುವುದಿಲ್ಲ. ಮೇಲಿನ ಕುಟುಂಬಗಳ ಸಂಖ್ಯೆ, ಶಿಕ್ಷಣ ಪಡೆದವರ ಮಾಹಿತಿಯ ವಿಶ್ಲೇಷಣೆಯೂ ಮುಂದಿನ ವಿಷಯಗಳ ವಿಶ್ಲೇಷಣೆಗೆ ಕೊಂಡಿಯಾಗಿರುತ್ತದೆ.

ಈ ರೇಖಾ ಚಿತ್ರದಲ್ಲಿ ಎರಡು ಪಟ್ಟಣ ಪಂಚಾಯಿತಿಗಳ ಅನಕ್ಷರಸ್ಥರ ವಿವರವನ್ನು ಶೇಕಡವಾರು ಪ್ರಮಾಣದಲ್ಲಿ ತೋರಿಸಲಾಗಿದೆ.

ಲಂಬಚಿತ್ರ ೪. ಲಿಂಗವಾರು ಅನಕ್ಷರಸ್ಥರ ವಿವರ



೮.೪. ಆರ್ಥಿಕ ಸ್ಥಿತಿಗತಿ

ಮಾನವ ಅಭಿವೃದ್ಧಿಯನ್ನು ನಿರ್ಧರಿಸುವ ಅಂಶಗಳಲ್ಲಿ ವರಮಾನವೂ ಒಂದು. ಮಾನವ ಬದುಕಿನ ಅವಕಾಶಗಳನ್ನು ವೃರ್ಧಿಸುವಲ್ಲಿ ವರಮಾನದ ಮಹತ್ವವನ್ನು ಅಲ್ಲಗಳೆಯುವಂತಿಲ್ಲ. ವರಮಾನವು ಜನತೆಯ ಭೌತಿಕ ಜೀವನಕ್ಕೆ ಅಗತ್ಯವಾಗುವ ಸಂಪನ್ಮೂಲಗಳನ್ನು ಗಳಿಸಿಕೊಳ್ಳಲು ಇರುವ ಒಂದು ಸಾಧನವಾಗಿದೆ. ಆದಾಯವು ಬದುಕನ್ನು ಉತ್ತಮಪಡಿಸಿಕೊಳ್ಳಲಿಕ್ಕಿರುವ ಪ್ರಮುಖ ಅಂಶಗಳಲ್ಲಿ ಒಂದಾಗಿದೆ.

ಒಬ್ಬ ವ್ಯಕ್ತಿ ಸಾಮಾಜಿಕ ಸ್ಥಾನಮಾನಗಳನ್ನು ನಿರ್ಧರಿಸುವಲ್ಲಿ ಆರ್ಥಿಕ ಚಟುವಟಿಕೆಗಳು ಮುಖ್ಯ ಪಾತ್ರವಹಿಸುತ್ತವೆ. ಸಮಾಜದಲ್ಲಿ ಉಳ್ಳವರು, ಇಲ್ಲದಿರುವವರು, ಮೇಲುಕೀಳು, ಬಡವ ಬಲ್ಲಿದ ಎಂಬ ಶ್ರೇಣೀಕರಣ ಇರುವುದನ್ನು ಕಾಣುತ್ತೇವೆ. ಹಾಗೆಯೇ ಎರಡು ಪಟ್ಟಣ ಪಂಚಾಯಿತಿಗಳನ್ನು ಅಧ್ಯಯನಕ್ಕೊಳಪಡಿಸಿದಾಗ ಶ್ರೇಣೀಕರಣ ಇರುವುದು ಕಂಡುಬರುತ್ತದೆ.

ಮಹಿಳೆಯು ಆರ್ಥಿಕವಾಗಿಯೂ ತಾನು ಸಬಲಳಾಗಿದ್ದಾಳೆ. ಅದರ ಮುಖಾಂತರ ಅವಳು ಯಶಸ್ಸನ್ನು ಪಡೆದಿದ್ದಾಳೆ. ಆರ್ಥಿಕ ಸ್ವಾತಂತ್ರ್ಯ ಪಡೆದ ಮಹಿಳೆ ಅಧಿಕ ಜವಾಬ್ದಾರಿಗಳೊಂದಿಗೆ ತಮ್ಮ ಆಸೆ ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳುವತ್ತ ಗಮನ ಹರಿಸಿದ್ದಾಳೆ. ಅವರ ದುಡಿಮೆಯಿಂದ ದೇಶದ ಆರ್ಥಿಕತೆಗೆ ತನ್ನದೇ ಆದ ಕೊಡುಗೆಯನ್ನು ನೀಡುತ್ತಿದ್ದಾಳೆ.

ಕೊರಟಗೆರೆ ಮತ್ತು ಕಮಲಾಪುರ ಪಟ್ಟಣ ಪಂಚಾಯಿತಿಗಳಲ್ಲಿ ಮಹಿಳೆಯರು ಬೇರೆ ಬೇರೆ ರೀತಿಯಾದ ವೃತ್ತಿಯಲ್ಲಿ ತೊಡಗಿರುವುದು ಕಂಡುಬರುತ್ತದೆ. ಕೊರಟಗೆರೆ ಪಟ್ಟಣ ಪಂಚಾಯಿತಿಯಲ್ಲಿ ಮಹಿಳೆಯರು ಫ್ಯಾಕ್ಟರಿಗಳಲ್ಲಿ ಕೆಲಸ ಮಾಡಲು, ಕೃಷಿ, ಮನೆ ಕೆಲಸಕ್ಕೆ ಹಾಗೂ ಮನೆಯಲ್ಲಿ ಟೈಲರಿಂಗ್, ಬೀಡಿ ಕಟ್ಟುವುದು, ಬ್ಯಾಗ್ ಹಾಕುವುದು, ರೇಷ್ಮೆ ಗೂಡುವಿನಲ್ಲಿ ಹಾರ ಮಾಡುವುದು ಇನ್ನು ಮುಂತಾದ ವೃತ್ತಿಯಲ್ಲಿ ತೊಡಗಿದ್ದಾರೆ. ಇನ್ನು ವ್ಯಾಪಾರ ಕ್ಷೇತ್ರಕ್ಕೆ ಬಂದಾಗ ಹೆಚ್ಚಾಗಿ ಹೂ ಮಾರುವುದು, ಸಣ್ಣ ಪುಟ್ಟ ಅಂಗಡಿಗಳನ್ನು ಇಟ್ಟಿಕೊಂಡಿರುವುದು ಮತ್ತು ತರಕಾರಿ ಮಾಡುವುದು ಇತ್ಯಾದಿ. ಮಹಿಳೆ ಕೃಷಿ ಕೆಲಸದಲ್ಲಿ ನಿರತಳಾಗಿದ್ದು ಪುರುಷನಿಗಿಂತ ಹೆಚ್ಚು ಪಾಲ್ಗೊಳ್ಳುತ್ತಿದ್ದಾಳೆ. ಅಲ್ಲಿ ಆಕೆಗೆ ಕಡಿಮೆ ಕೂಲಿ ಸಿಗುತ್ತಿದ್ದರೂ, ಕೃಷಿ ಕ್ಷೇತ್ರಕ್ಕೆ ತನ್ನನ್ನು ಸೀಮಿತಗೊಳಿಸಿಕೊಂಡಿದ್ದಾಳೆ. ತನ್ನ ಮನೆಯ ಖರ್ಚು ವೆಚ್ಚವನ್ನು ಇದರಿಂದ ತೂಗಿಸಿಕೊಂಡು ಹೋಗುತ್ತಿದ್ದಾಳೆ. ಆಕೆ ಕಾರ್ಖಾನೆಗಳಲ್ಲಿ ಪುರುಷರಂತೆ ಸರಿಸಮಾನವಾಗಿ ದುಡಿದು ಸಮಾನ ವೇತನವನ್ನು ಪಡೆಯುತ್ತಿದ್ದಾಳೆ. ಅಲ್ಲದೆ ಆಕೆ ಸೇವಾ ವಲಯಗಳಲ್ಲೂ ಸಹ ತನ್ನ ಪಾತ್ರವನ್ನು ನಿರ್ವಹಿಸುತ್ತಿದ್ದಾಳೆ. ಮಹಿಳೆ ಇಂದು ವೈದ್ಯಳಾಗಿ, ವಕೀಲಳಾಗಿ, ಶಿಕ್ಷಕಿಯಾಗಿ, ವ್ಯಾಪಾರ ವ್ಯವಹಾರದಲ್ಲಿ, ಬ್ಯಾಂಕುಗಳಲ್ಲಿ ಇನ್ನೂ ಮುಂತಾದ ಹತ್ತು ಹಲವು ಕ್ಷೇತ್ರಗಳಲ್ಲಿ ತನ್ನನ್ನು ವಿಸ್ತರಿಸಿಕೊಂಡಿದ್ದಾಳೆ.

ಕಮಲಾಪುರ ಪಟ್ಟಣ ಪಂಚಾಯಿತಿಯಲ್ಲಿ ಮಹಿಳೆಯರು ಹೆಚ್ಚಾಗಿ ಕೃಷಿ ಕೆಲಸಕ್ಕೆ ಹೋಗುತ್ತಾರೆ. ಕೃಷಿ ಕೂಲಿ ಎಂದರೆ ಬೇರೆಯರ ಜಮೀನಿನಲ್ಲಿ ಗೊತ್ತುಪಡಿಸಿದ ಕೆಲಸಕ್ಕಾಗಿ ಸಂಬಳದ ರೂಪದಲ್ಲಿ ಹಣ ಇಲ್ಲವೆ ಧಾನ್ಯಗಳನ್ನು ಕೂಲಿಯ ರೂಪದಲ್ಲಿ ಪಡೆಯುತ್ತಾರೆ. ಲಿಂಗ-ತಾರತಮ್ಯವಿಲ್ಲದೆ ಸ್ತ್ರೀ-ಪುರುಷರಿಬ್ಬರು ಬೇರೆಯವರ ಜಮೀನುಗಳಲ್ಲಿ ದುಡಿಯಲು ಹೋಗುತ್ತಾರೆ. ಈ ಜನರಿಗೆ ಕೂಲಿ ಮಹತ್ವದ ಆರ್ಥಿಕ ಚಟುವಟಿಕೆಯಾಗಿದೆ. ಶ್ರಮಕ್ಕೆ ಪ್ರತಿಫಲವಾಗಿ ಇವರು ಪಡೆಯುವ ಕೂಲಿಯು ಅವರ ಆರ್ಥಿಕ ಸ್ಥಿತಿಗತಿಯ ಜೊತೆಗೆ ಸಾಮಾಜಿಕ ಜೀವನ ವಿಧಾನವನ್ನು ಸಹ ತೋರಿಸುತ್ತದೆ. ಕೂಲಿಗಾಗಿ ಇವರು ಮೇಲ್ಜಾತಿಯವರ ಮನೆಗೆ ಹಾಗೂ ಸುತ್ತಮುತ್ತಲಿನ ಕೃಷಿಕರ ಜಮೀನುಗಳಲ್ಲಿ, ತೋಟಗಳಲ್ಲಿ ಕೆಲಸ ಮಾಡಲು ಹೋಗುತ್ತಾರೆ. ಇವರೊಂದಿಗೆ ಭೂಮಾಲೀಕರ ಹೆಣ್ಣುಮಕ್ಕಳು ವೇತನ ಪಡೆಯದೇ ಕೃಷಿ ಕೆಲಸದಲ್ಲಿ ತೊಡಗಿರುವುದು ಕಾಣಸಿಗುತ್ತದೆ.

ಕೂಲಿಯಲ್ಲಿ ವ್ಯತ್ಯಾಸವಿರುವುದನ್ನು ಸಾಮಾನ್ಯವಾಗಿ ಎಲ್ಲಾ ಗ್ರಾಮೀಣ ಪ್ರದೇಶದಲ್ಲಿ ನಾವು ಕಾಣಬಹುದು. ಪುರುಷ ಮತ್ತು ಮಹಿಳೆಯರ ನಡುವಿನ ಕೂಲಿಯ ತಾರತಮ್ಯದ ಜೊತೆಗೆ ಕೂಲಿ ನೀಡುವ ಹಣದಲ್ಲಿಯೂ ತಾರತಮ್ಯವಿದೆ. ಕೂಲಿಯ ಪ್ರಮಾಣವು ದಿನದ ಕೂಲಿಯಲ್ಲಿ ಪುರುಷರಿಗೆ ಅವರು ಮಾಡುವ ಕೆಲಸದ ಆಧಾರದ ಮೇಲೆ ನಿಗದಿಪಡಿಸಲಾಗಿದೆ. ಸಾಮಾನ್ಯವಾಗಿ ಪುರುಷರಿಗೆ ಹೆಚ್ಚಿನ ಕೂಲಿಯನ್ನು ನೀಡಿದರೆ, ಇದಕ್ಕಿಂತ ಕಡಿಮೆ ಕೂಲಿಯನ್ನು ಮಹಿಳೆಗೆ ನೀಡಲಾಗುತ್ತಿದೆ. ಉದಾಹರಣೆಗೆ ಪುರುಷರಿಗೆ ೬೦/- ರೂಪಾಯಿ ಕೂಲಿ ನೀಡಿದರೆ, ಮಹಿಳೆಯರಿಗೆ ೨೦/- ಅಥವಾ ೩೦/- ರೂಪಾಯಿ ನೀಡುವರು. ಇಬ್ಬರು ಸಮಾನ ಕೆಲಸ ಮಾಡಿದರೂ ಸಹ ಹಣ ನೀಡುವುದರಲ್ಲಿ ವ್ಯತ್ಯಾಸವಿದೆ.

ಕೂಲಿಯು ಶ್ರಮ ಶಕ್ತಿಯ ಬೆಲೆಯ ಅಥವಾ ಮೌಲ್ಯದ ಪರಿವರ್ತಿತ ರೂಪ. ಕಾರ್ಮಿಕನು ತನ್ನ ಶ್ರಮ ಶಕ್ತಿಗೆ ಪ್ರತಿಫಲವಾಗಿ ಏನನ್ನು ಪಡೆಯುತ್ತಾನೋ ಅದೇ ಕೂಲಿ. ಇರುವ ಸ್ವಂತದ ಊರಿನಲ್ಲಿ ದುಡಿಮೆ ಇಲ್ಲದ ಪರಿಸ್ಥಿತಿಯಲ್ಲಿ ಬೇರೆ ಊರಿಗೆ ವಲಸೆ ಹೋಗುವುದು ಇತ್ತೀಚಿನ ದಿನಗಳಲ್ಲಿ ಸಾಮಾನ್ಯ ಸಂಗತಿಯಾಗಿದೆ. ಕಮಲಾಪುರ ಪಟ್ಟಣದಲ್ಲಿ ಜನರು ಊರಿನಲ್ಲಿ ಕೆಲಸ ಇಲ್ಲದೇ ಇರುವ ಸಂದರ್ಭದಲ್ಲಿ ಪಕ್ಕದ ಊರಿಗೆ ಕೂಲಿಗಾಗಿ ಹೋಗುತ್ತಿದ್ದಾರೆ. ಮಹಿಳೆಯರು ಟೈಲರಿಂಗ್, ಬೀಡಿ ಕಟ್ಟುವುದು, ಹಗ್ಗ ಮಾಡುವುದನ್ನು ಅನೇಕ ಮಹಿಳೆಯರು ವೃತ್ತಿಯನ್ನಾಗಿಸಿ ಕೊಂಡಿದ್ದಾರೆ. ಎಷ್ಟೇ ಬಡತನವಿದ್ದರೂ ತಮ್ಮ ಮಕ್ಕಳಿಗೆ ತಮ್ಮ ದುಡಿಮೆಯಿಂದಲೇ ಓದಿಸಿದ್ದಾರೆ. ಇದರ ಫಲವಾಗಿ ಸರ್ಕಾರದ ಮೀಸಲಾತಿಯನ್ನು ಬಳಸಿಕೊಂಡು ಕೆಲವರು ಇಂದು ನೌಕರಿಯಲ್ಲಿ ನಿರತರಾಗಿದ್ದಾರೆ. ಕ್ಲರ್ಕ್, ಅಟೆಂಡರ್, ಶಿಕ್ಷಕಿ, ನರ್ಸ್ ಆಗಿ ಬಾಲವಾಡಿ ಟೀಚರ್ ಆಗಿ ಇನ್ನು ಮುಂತಾದ ವೃತ್ತಿಯಲ್ಲಿ ತೊಡಗಿದ್ದಾರೆ.

ಆ ಹಿನ್ನೆಲೆಯಲ್ಲಿಯೇ ಹೆಣ್ಣುಮಕ್ಕಳಿಗೆ ಶಿಕ್ಷಣ ನೀಡುವುದು ಕೇವಲ ಹಣದ ವ್ಯಯ ಎಂದು ಬಹುತೇಕರು ಭಾವಿಸಿದ್ದಾರೆ. ಇದಕ್ಕೆ ಪೋಷಕರು ನೀಡುವ ಬಹುತೇಕ ಕಾರಣಗಳು ಸಾಮಾಜಿಕವಾದವು.

ಅವುಗಳಲ್ಲಿ ಪ್ರಮುಖವಾದದ್ದು ಅವಳ ಶಿಕ್ಷಣವನ್ನು ಅವಳ ಮದುವೆಯ ದೃಷ್ಟಿಯಿಂದ ನೋಡುವುದು ಅಥವಾ ಜಾತಿಯ ದೃಷ್ಟಿಯಿಂದ ನೋಡುವುದು ಅಥವಾ ಅವಳ ರಕ್ಷಣೆಯ ದೃಷ್ಟಿಯಿಂದ ನೋಡುವುದು. ಮತ್ತೊಂದು ಬಹಳ ಸಂಕೀರ್ಣವಾದ ವಿಷಯವೆಂದರೆ ಪುರುಷರಿಗಿಂತ ಮಹಿಳೆಯರಿಗೆ ಉದ್ಯೋಗ ಅವಕಾಶಗಳು ಬಹಳ ಸೀಮಿತವಾಗಿವೆ ಎಂದು ಬಹುತೇಕರು ಭಾವಿಸಬಹುದು. ಈ ಬಗೆಯ ಸಾಮಾಜಿಕ ಒಪ್ಪಂದಗಳಲ್ಲಿ ಅನೇಕ ಬದಲಾವಣೆಗಳಾಗಿದ್ದರೂ, ಇನ್ನೂ ಬಹುತೇಕರು ಸಾಮಾಜಿಕ ಒಪ್ಪಂದಗಳಿಂದ ಮುಂದಕ್ಕೆ ಹೆಣ್ಣುಮಕ್ಕಳ ಶಿಕ್ಷಣವನ್ನು ನೋಡಬೇಕಾದ ಅಗತ್ಯವಿದೆ. ನಮ್ಮ ಅಧ್ಯಯನದ ಸಂದರ್ಭದಲ್ಲಿ ಬೆರಳೆಣಿಕೆ ಪ್ರಮಾಣದ ಪೋಷಕರು ಹೆಣ್ಣುಮಕ್ಕಳ ಶಿಕ್ಷಣದ ಬಗ್ಗೆ ಸಕಾರಾತ್ಮಕವಾಗಿ ಚಿಂತಿಸಿದ್ದಾರೆ. ಇಲ್ಲಿ ನಮಗೆ ಸ್ಪಷ್ಟವಾಗುವ ಅಂಶವೆಂದರೆ, ಹೆಣ್ಣುಮಕ್ಕಳ ಶಿಕ್ಷಣಕ್ಕೆ ಇರುವ ವಿರೋಧಗಳು, ಕೇವಲ ಪೋಷಕರಿಂದಲೇ ಹುಟ್ಟಿಕೊಂಡಿರುವಂತವುಗಳಲ್ಲ. ಇದು ಆರ್ಥಿಕ-ಸಾಮಾಜಿಕ ಹಾಗೂ ಸಾಂಸ್ಕೃತಿಕವಾದದ್ದು. ಅಂದರೆ ಒಪ್ಪಿತ ಸಾಂಸ್ಕೃತಿಕ ನಡವಳಿಕೆಗಳು ಹೆಣ್ಣುಮಕ್ಕಳ ಶಿಕ್ಷಣದ ಬೆಳವಣಿಗೆಯ ಮೇಲೆ ತನ್ನ ಪ್ರಭಾವವನ್ನು ಬೀರುತ್ತಿದೆ ಎಂಬದು ಇಲ್ಲಿ ಸ್ಪಷ್ಟ. ಹೀಗಾಗಿ ಹೆಣ್ಣುಮಕ್ಕಳ ಶಿಕ್ಷಣ ಕುರಿತು ಇರುವ ಸಕಾರಾತ್ಮಕ ಮನೋಭಾವನೆಯು ಕೇವಲ ವೈಯಕ್ತಿಕ ಮಟ್ಟದಲ್ಲಿ ಹೆಚ್ಚಳವಾದರೆ ಸಾಲದು, ಸಾಂಸ್ಥಿಕ ಹಾಗೂ ಸಾಮಾಜಿಕ ಮಟ್ಟದಲ್ಲಿಯು ಬದಲಾಗಬೇಕಾದ ಆಗತ್ಯವಿದೆ. ಈ ದೆಸೆಯಲ್ಲಿ ನಾವೆಲ್ಲರು ಚಿಂತಿಸಬೇಕಾಗಿದೆ.

ಶಾಲಾವ್ಯವಸ್ಥೆ ಮತ್ತು ಶೈಕ್ಷಣಿಕ ಭರವಸೆಗಳಿಗೆ ಸಂಬಂಧಿಸಿದಂತೆ ಗುಣಮಟ್ಟದ ಶಿಕ್ಷಣ ಪರಿಕಲ್ಪನೆಯನ್ನು ಸಮಾಜೋ-ಅರ್ಥಿಕ ಅಂಶಗಳು ಪ್ರಭಾವಿಸುತ್ತಿವೆ ಎಂಬುದನ್ನು ನಮ್ಮ ಅಧ್ಯಯನ ಸ್ಪಷ್ಟವಾಗಿ ಗುರುತಿಸಿದೆ. ಆದರೆ ಪೋಷಕರು ಶಿಕ್ಷಣದ ಬಗ್ಗೆ ಹೊಂದಿರುವ ಮನೋಭಾವದ ಪ್ರಮಾಣವು ಪೋಷಕರಿಂದ ಪೋಷಕರಿಗೆ ವ್ಯತ್ಯಾಸವಾಗುತ್ತದೆ. ಶಿಕ್ಷಣ ಮತ್ತು ಶಾಲಾವ್ಯವಸ್ಥೆಯನ್ನು ಕುರಿತ ಪೋಷಕರ ಆರೋಪಗಳು ಒಂದು ರೀತಿಯಲ್ಲಿ ಮುಗಿಯದ ಕಥೆ ಎಂದು ಭಾವಿಸಿದರೂ ಶಾಲಾ ವ್ಯವಸ್ಥೆಯಲ್ಲಿ ಇರುವ ನಿಷ್ಫಲತೆ ಇದಕ್ಕೆ ಪ್ರಮುಖ ಕಾರಣ ಎಂಬುದು ಸ್ಪಷ್ಟ.

## ಆಕರಗ್ರಂಥಗಳು


ಅಗರ್‌ವಾಲ್, ೨೦೦೦), *ಆ್ಯನ್ ಅಸೆಸ್‌ಮೆಂಟ್ ಆಫ್ ಟ್ರೆಂಡ್ ಇನ್ ಆಕ್ಸಸ್ ಆಂಡ್ ರಿಟೆನ್ಷನ್,* ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಎಜುಕೇಷನಲ್ ಪ್ಲಾನಿಂಗ್ ಆಂಡ್ ಅಡ್ಮಿನಿಸ್ಟ್ರೇಶನ್, ನ್ಯೂಡೆಲ್ಲಿ.

ಪ್ರೋಬ್, (೧೯೯೯), *ಪಬ್ಲಿಕ್ ರಿಪೋರ್ಟ್ ಆನ್ ಬೇಸಿಕ್ ಎಜುಕೇಷನ್ ಇನ್ ಇಂಡಿಯಾ* (ಟೀಮ್), ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂ ಡೆಲ್ಲಿ.

ಪ್ರಶಾಂತ್ ಎಚ್.ಡಿ., (೨೦೦೫), *ಈಶಾನ್ಯ ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣ ಮತ್ತು ಸಮಾಜ,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

ಬಾಲರಾಜು ಎಚ್., ೨೦೦೨, ಸಮುದಾಯದಲ್ಲಿ ಭಾಗವಹಿಸುವಿಕೆಯ ಮುಖಾಂತರ ಶೈಕ್ಷಣಿಕ ಅಭಿವೃದ್ಧಿ ಬಳ್ಳಾರಿ ಜಿಲ್ಲೆ ಒಂದು ಅಧ್ಯಯನ, ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ರೇಖಾ ಕೌಲ್., (೧೯೯೩), *ಕಾಸ್ಟ್, ಕ್ಲಾಸ್ ಆ್ಯಂಡ್ ಎಜುಕೇಷನ್,* ಸೇಜ್, ನ್ಯೂಡೆಲ್ಲಿ.

ರೇಖಾ ಕೌಲ್, (೨೦೦೧), "ಅಸೆಸಿಂಗ್ ಪ್ರೈಮರಿ ಎಜುಕೇಶನ್ ಗೋಯಿಂಗ್ ಬಿಹ್ಯಾಂಡ್ ದಿ ಕ್ಲಾಸ್‌ರೂಂ", *ಎಕನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ,* ಜನವರಿ ೧೩.

ರೇಖಾ ವಜೀರ್, (೨೦೦೦), *ದಿ ಜೆಂಡರ್ ಗ್ಯಾಪ್ ಇನ್ ಬೇಸಿಕ್ ಎಜುಕೇಷನ್ ಎನ್.ಜಿ.ಓ. ಆ್ಯಸ್ ಚೇಂಜ್* ಏಜನ್ಸಿ, ಸೇಜ್, ನ್ಯೂಡೆಲ್ಲಿ.

ವಾಸವಿ ಎ.ಆರ್, (೨೦೦೦), 'ಎಕ್ಸ್‌ಕ್ಲೂಷನ್, ಎಲಿಮಿನೇಷನ್ ಆ್ಯಂಡ್ ಆಪರ್ಚುನಿಟಿ ಪ್ರೈಮರಿ ಸ್ಕೂಲ್ಸ್ ಆ್ಯಂಡ್ ಸ್ಕೂಲಿಂಗ್ ಇನ್ ಸೆಲೆಕ್ಟೆಡ್ ರೀಜನ್ಸ್ ಆಫ್ ಇಂಡಿಯಾ', ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಅಡ್ವಾನ್ಸ್ಡ್ ಸ್ಟಡೀಸ್, ಬೆಂಗಳೂರು.

ಶಂಕರರಾವ್ ಚ.ನ., ೨೦೦೧, ಸಮಾಜಶಾಸ್ತ್ರ ಪರಿಚಯ, ಜೈ ಭಾರತ ಪ್ರಕಾಶನ, ಶ್ರೀಗೌರಿ, ರಾಮಕೃಷ್ಣ ಭಜನ ಮಂದಿರ ರೋಡ್, ಬಿಜೈ, ಮಂಗಳೂರು


• • •

ಭಾರತವು ಸ್ವಾತಂತ್ರ್ಯ ಪಡೆದುಕೊಂಡಾಗಿನಿಂದ ಮಹಿಳೆಯರ ಶಿಕ್ಷಣವು ರಾಷ್ಟ್ರೀಯ ಮಟ್ಟದಲ್ಲಿ ಪ್ರಥಮ ಆದ್ಯತೆಯ ಪಟ್ಟಿಯಲ್ಲಿತ್ತು. ಮಹಿಳೆಯರ ಶಿಕ್ಷಣದ ಬೆಳವಣಿಗೆಯನ್ನು ಕಾಲಕಾಲಕ್ಕೆ ಗಮನಿಸುತ್ತ ಮತ್ತು ಶಿಕ್ಷಣದಲ್ಲಿ ಅವರ ಭಾಗವಹಿಸುವಿಕೆಗೆ ಪ್ರೋತ್ಸಾಹಿಸಲು ಸೂಕ್ತವಾದ ಸಲಹೆ ಕೊಡಲು ವಿಶೇಷವಾದ ನಿಯೋಗಗಳನ್ನು ಮತ್ತು ಅಧ್ಯಯನ ಮಂಡಳಿಗಳನ್ನು ಸ್ಥಾಪಿಸಲ್ಪಟ್ಟವು. ದೇಶದ ಅಭಿವೃದ್ಧಿಗೆ ಆರ್ಥಿಕ ಸಮಾನ ಹಂಚಿಕೆ ಮುಖ್ಯ ಭಾಗವಾದ ಹಾಗೆ, ಮಹಿಳೆಯರ ಶಿಕ್ಷಣ ವನ್ನು ಪ್ರೋತ್ಸಾಹಿಸಲು ಹಲವು ಹೊಸ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಯಿತು. ತಾತ್ವಿಕವಾಗಿ ಎಲ್ಲ ಔಪಚಾರಿಕ ಮತ್ತು ಅನೌಪಚಾರಿಕ ಶಿಕ್ಷಣ ಮತ್ತು ತರಬೇತಿ ಕಾರ್ಯಕ್ರಮಗಳು ಮಹಿಳೆಯರಿಗಾಗಿ ಪ್ರಾರಂಭಿಸಲ್ಪಡುತ್ತಿವೆ. ಪ್ರತಿ ಕಾರ್ಯಕ್ರಮದ ಅನುಬಂಧದಲ್ಲಿ ಪೂರ್ವಸಿದ್ಧತೆಯ ಪದ್ಧತಿಯನ್ನು ಮಹಿಳೆಯರಿಗಾಗಿ ಪ್ರತ್ಯೇಕವಾದ ಸಂಸ್ಥೆಗಳನ್ನು ಅಥವಾ ಪ್ರತ್ಯೇಕ ವಿಭಾಗಗಳನ್ನು ತೆರೆಯಲು ಸೂಚಿಸಲಾಗಿದೆ. ಹೆಣ್ಣು ಮಕ್ಕಳಿಗೆ ಪ್ರಾಥಮಿಕ ಶಿಕ್ಷಣದಿಂದ ಕಾಲೇಜು ಶಿಕ್ಷಣದವರೆಗೆ ಉಚಿತವಾದ ಶಿಕ್ಷಣ ಮತ್ತು ಹಲವು ರಾಜ್ಯಗಳು ಪ್ರಾಥಮಿಕದಿಂದ ವಿಶ್ವವಿದ್ಯಾಲಯದವರೆಗಿನ ಶಿಕ್ಷಣವನ್ನು ಉಚಿತವಾಗಿ ನೀಡಲು ನಿರ್ಧರಿಸಲಾಗಿದೆ. ಅದಲ್ಲದೆ ೧೪ನೇ ವಯಸ್ಸಿನವರೆಗಿನ ಮಕ್ಕಳಿಗೆ ಉಚಿತ ಶಿಕ್ಷಣ ಕೊಡಲು ಪ್ರೋತ್ಸಾಹಕ ಕಾರ್ಯಕ್ರಮಗಳನ್ನು ಜಾರಿಗೆ ತರಲಾಗಿದೆ. ಉದಾಹರಣೆಗೆ ಮಧ್ಯಾಹ್ನದ ಊಟ, ಉಚಿತ ಪುಸ್ತಕಗಳು, ಉಚಿತ ಸಮವಸ್ತ್ರ, ಇದಲ್ಲದೆ ಹೆಣ್ಣುಮಕ್ಕಳ ಶಾಲಾ ಭಾಗವಹಿಸುವಿಕೆಗೆ ವಿಶೇಷವಾದ ಕಾರ್ಯಕ್ರಮಗಳು ಅವಕಾಶವಂಚಿತ ಹೆಣ್ಣುಮಕ್ಕಳ ಶೈಕ್ಷಣಿಕ ಅಭಿವೃದ್ಧಿಗೋಸ್ಕರ ಇವೆ. ಮಹಿಳೆಯರ ಶೈಕ್ಷಣಿಕ ಅಭಿವೃದ್ಧಿಗೆ ಮೂಲಸೌಲಭ್ಯಗಳನ್ನು ಹೆಚ್ಚಿಸುವುದು, ಲಿಂಗ ತಾರತಮ್ಯವಿಲ್ಲದ ಪಠ್ಯಕ್ರಮ ಮತ್ತು ಲಿಂಗ ಪ್ರಜ್ಞೆ ಹೆಚ್ಚಿಸಲು ಮಹಿಳೆಗೆ ಸಮಾನ ಅವಕಾಶ ಮತ್ತು ಅಧಿಕಾರ ಕೊಡುವುದು. ಇವೆಲ್ಲ ಶಿಕ್ಷಣದ ಪೂರ್ವ ಪ್ರಕ್ರಿಯೆಗಳಾಗಿವೆ. ರಾಷ್ಟ್ರೀಯ ಶೈಕ್ಷಣಿಕ ನೀತಿಯ ಪೂರ್ವದಲ್ಲಿ ಹೆಣ್ಣುಮಕ್ಕಳ ಉನ್ನತ ಶಿಕ್ಷಣದ ಯಶಸ್ಸಿನ ಬದಲಾವಣೆಯನ್ನು ವೇಗವಾಗಿ ಹೆಚ್ಚಿಸುವುದಕ್ಕೆ ಪ್ರಯತ್ನಿಸಲಾಗಿದೆ. ಇದು ಶೈಕ್ಷಣಿಕ ಪ್ರಮುಖ ಅಳತೆ ಗೋಲಿನಿಂದ ಸಾಕ್ಷರತೆಯ ಹಂತದಲ್ಲಿ ಸ್ಪಷ್ಟವಾದ ಫಲಿತಾಂಶ ಕೊಟ್ಟಿರುವುದು ಕಾಣಿಸುತ್ತದೆ.

ಪ್ರಾಥಮಿಕ ಹಂತದಲ್ಲಿ ಹೆಣ್ಣುಮಕ್ಕಳ ಸಂಖ್ಯೆ ಸಂಪೂರ್ಣವಾಗಿ ಗಂಡುಮಕ್ಕಳಿಗೆ ಹೋಲಿಸಿದಾಗ ಗಂಡು ಮಕ್ಕಳ ಸಂಖ್ಯೆ ೪ ಮಿಲಿಯನ್ ಹೆಚ್ಚಾಗಿದ್ದರೆ ಹೆಣ್ಣುಮಕ್ಕಳ ಸಂಖ್ಯೆ ೭ ಮಿಲಿಯನ್

ಹೆಚ್ಚಾಗಿದೆ. ಪ್ರಾಥಮಿಕ ಹಂತದಲ್ಲಿ ಹೆಣ್ಣುಮಕ್ಕಳ ಶಾಲಾ ಭಾಗವಹಿಸುವಿಕೆಯನ್ನು ಹೆಚ್ಚಿಸುವುದಕ್ಕೆ ಶಿಕ್ಷಣದ ಪಠ್ಯಕ್ರಮ ಮತ್ತು ಶಾಲಾ ಪೂರ್ವ ಪ್ರಕ್ರಿಯೆಗಳನ್ನು ಹೆಚ್ಚಿನ ರೀತಿಯಲ್ಲಿ ನವೀಕರಿಸಿ ಯೋಜಿಸಬೇಕಾಗಿದೆ.

ಈ ಹಿನ್ನೆಲೆಯಲ್ಲಿ ಪ್ರಸ್ತುತ ಮಹಾಪ್ರಬಂಧವನ್ನು ಪ್ರಾಥಮಿಕ ಶಿಕ್ಷಣದಲ್ಲಿ ಲಿಂಗ-ಸಂಬಂಧಿ ಆಯಾಮಗಳನ್ನು ಅರ್ಥಮಾಡಿಕೊಳ್ಳುವ ಉದ್ದೇಶದಿಂದ ರಚಿಸಲಾಗಿದೆ. ಎರಡು ಪಟ್ಟಣ ಪಂಚಾಯಿತಿ ಗಳನ್ನು ಅಧ್ಯಯನ ಮಾಡುವುದರ ಮೂಲಕ ತೌಲನಿಕವಾಗಿ ನೋಡುವ ಪ್ರಯತ್ನವನ್ನು ಮಾಡಲಾಗಿದೆ. ಮಾನವ ಅಭಿವೃದ್ಧಿಯಲ್ಲಿ ಶಿಕ್ಷಣ ಪ್ರಮುಖ ಪಾತ್ರವಹಿಸುತ್ತದೆ. ಶಿಕ್ಷಣವೇ ಶಕ್ತಿ ಎಂದು ಹೇಳುವಂತೆ ಶಿಕ್ಷಣ ಮಾನವನ ಕುಶಲತೆ ಮತ್ತು ಸಾಮರ್ಥ್ಯವನ್ನು ಹೆಚ್ಚಿಸುವಲ್ಲಿ ಮಹತ್ವಪೂರ್ಣ ಸ್ಥಾನ ಪಡೆದಿದೆ. ಶೈಕ್ಷಣಿಕ ಪ್ರಗತಿ ಸಾಧಿಸಿರುವ ಯಾವುದೇ ದೇಶವಾದರೂ ಅತೀ ಸುಲಭವಾಗಿ ಮುಂದುವರಿಯುತ್ತದೆ. ಪ್ರಸ್ತುತ ಜಗತ್ತಿನಲ್ಲಿ ನಾವು ನೋಡುತ್ತಿರುವ ಅನೇಕ ಹಿಂದುಳಿದ ರಾಷ್ಟ್ರಗಳು ಶಿಕ್ಷಣದಲ್ಲಿ ಹಿನ್ನಡೆ ಸಾಧಿಸಿವೆ. ಶಿಕ್ಷಣವು ಸಮಾಜದಲ್ಲಿ ಗೌರವ, ಪ್ರತಿಷ್ಠೆಯ ಸ್ಥಾನಮಾನವನ್ನು ಒದಗಿಸುತ್ತದೆ. ಅದು ಸ್ವಾಭಿಮಾನದ ಸಂಕೇತವೂ ಹೌದು. ಸ್ವಾತಂತ್ರ್ಯದ ಸಾಧನವೂ ಹೌದು. ಶಿಕ್ಷಣ ಮನುಷ್ಯನಿಗೆ ಧಾರಣಶಕ್ತಿಯನ್ನು ಒದಗಿಸುವ ಒಂದು ಸಾಧನ. ಬದುಕನ್ನು ಉತ್ತಮಪಡಿಸಿ ಕೊಳ್ಳಲು ಇರುವಂತಹ ಅವಕಾಶಗಳನ್ನು ತಮ್ಮದು ಮಾಡಿಕೊಳ್ಳಲು ಹಲವರಿಗೆ ಸಾಕ್ಷರತೆಯು ಶಕ್ತಿ ಸಾಮರ್ಥ್ಯವನ್ನು ಒದಗಿಸುತ್ತದೆ. "ಸಾಕ್ಷರತೆ ಎಂದರೆ ಸ್ವಾತಂತ್ರ್ಯ"ವೆಂದು ಅಮರ್ತ್ಯಸೇನ್ ಹೇಳಿದ್ದಾರೆ. ಸಾಕ್ಷರತೆಯ ಸ್ವರೂಪವು ನಮ್ಮ ಸಮಾಜದ ಪ್ರತಿಬಿಂಬವೇ ಆಗಿರುತ್ತದೆ. ಇಂದಿನ ಜಾಗತೀಕರಣದ ಸಂದರ್ಭದಲ್ಲಿ ಶಿಕ್ಷಣ ಅತ್ಯವಶ್ಯಕವಾಗಿದೆ. ಪ್ರಾಥಮಿಕ ಶಿಕ್ಷಣದ ಲಿಂಗಸಂಬಂಧಿ ಸ್ವರೂಪ ಇಂದು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲಿ ಚರ್ಚೆಯ ಕೇಂದ್ರಬಿಂದುವಾಗಿದೆ. ಪ್ರಾಥಮಿಕ ಶಿಕ್ಷಣವನ್ನು ಲಿಂಗಸಂಬಂಧಿ ನೆಲೆಯಲ್ಲಿ ವಿಶ್ಲೇಷಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಹೀಗೆ ಮಾಡುವಾಗ ಆಯಾ ಪ್ರದೇಶದ ಆರ್ಥಿಕ ಪರಿಸ್ಥಿತಿ ಹಾಗೂ ಸಾಮಾಜಿಕ ಪರಿಸ್ಥಿತಿ ಪೋಷಕರ ಮೇಲೆ ಹೇಗೆ ಪ್ರಭಾವಿಸಿದೆ ಎಂಬುದರೊಂದಿಗೆ ಮಕ್ಕಳ ಶಿಕ್ಷಣದ ಮೇಲೆ ಇದು ಯಾವ ರೀತಿಯ ಪ್ರಭಾವ ವನ್ನು ಬೀರಿದೆ ಎಂಬುದನ್ನು ವಿಶ್ಲೇಷಿಸಲಾಗಿದೆ.

ಪ್ರಸ್ತುತ ಅಧ್ಯಯನದಿಂದ ಆಡಳಿತಶಾಹಿ ವರ್ಗ, ಅಧಿಕಾರದಲ್ಲಿ ಇರುವ ವರ್ಗ ಮತ್ತು ಯೋಜನಾಕಾರ ನಂಬಿಕೆಗೆ ವಿರುದ್ಧವಾದ ಅಂಶವು ಸ್ಪಷ್ಟವಾಗಿ ಕಂಡುಬರುತ್ತದೆ. ಅಂದರೆ ಪೋಷಕರು ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸಲು ಹೆಚ್ಚಿನ ಆಸಕ್ತಿ ಹೊಂದಿದ್ದಾರೆ. ಅಲ್ಲದೆ ಆಧುನಿಕ ಸಮಾಜ ದಲ್ಲಿ ಯಾರೂ ಶಿಕ್ಷಣವನ್ನು ಕಡೆಗಣಿಸಲಾಗುವುದಿಲ್ಲ ಎಂದು ಬಹುತೇಕ ಪೋಷಕರು ಸ್ಪಷ್ಟಪಡಿಸುತ್ತಾರೆ. ಈ ರೀತಿಯ ಮನೋಭಾವನೆಯಲ್ಲಿ ವಿವಿಧ ಸಾಮಾಜಿಕ ಆರ್ಥಿಕ ಗುಂಪಿನ ಪೋಷಕರ ನಡುವೆ ಅಷ್ಟೇನೂ ವ್ಯತ್ಯಾಸಗಳು ಕಂಡುಬರುವುದಿಲ್ಲ. ಆದರೆ ಬಾಲಕ-ಬಾಲಕಿಯರಿಗೆ ಶಿಕ್ಷಣ ನೀಡುವಾಗ ವ್ಯತ್ಯಾಸಗಳು ಕಂಡುಬಂದಿವೆ. ಬಹುತೇಕ ಪೋಷಕರು ಗಂಡು ಮಗುವಿಗೆ ಶಿಕ್ಷಣ ನೀಡಲು ಹೆಚ್ಚಿನ

ಕಾಳಜಿ ಹೊಂದಿದ್ದಾರೆ. ಅದೇ ಆಸಕ್ತಿಯನ್ನು ಹೆಣ್ಣು ಮಗುವಿನ ಶಿಕ್ಷಣದ ಬಗ್ಗೆ ಹೊಂದಿಲ್ಲ. ಇದರ ಅರ್ಥ ಪೋಷಕರು ಹೆಣ್ಣುಮಕ್ಕಳಿಗೆ ಶಿಕ್ಷಣ ನೀಡಲು ಆಸಕ್ತಿ ಹೊಂದಿಲ್ಲವೆಂದು ಅಲ್ಲ. ಬಹುತೇಕ ಪೋಷಕರು ಮಕ್ಕಳಿಗೆ ಶಿಕ್ಷಣ ನೀಡುವ ಶಿಕ್ಷಣವನ್ನು ವರಮಾನ ವೃದ್ಧಿಸುವ ಸಾಧನವಾಗಿ, ಅಂದರೆ ಶಿಕ್ಷಣಕ್ಕೆ ಇರುವ ಆರ್ಥಿಕ ಮೌಲ್ಯಕ್ಕೆ ಹೆಚ್ಚಿನ ಮಹತ್ವ ನೀಡಿ ಅದನ್ನು ಉಪಕರಣವಾದಿ ನೆಲೆಯಲ್ಲಿ ನೋಡುತ್ತಿದ್ದಾರೆ.

ಆ ಹಿನ್ನೆಲೆಯಲ್ಲಿಯೇ ಹೆಣ್ಣುಮಕ್ಕಳಿಗೆ ಶಿಕ್ಷಣ ನೀಡುವುದು, ಕೇವಲ ಹಣದ ವ್ಯಯ ಎಂದು ಭಾವಿಸಿದ್ದಾರೆ. ಇದಕ್ಕೆ ಪೋಷಕರು ನೀಡುವ ಬಹುತೇಕ ಕಾರಣಗಳು ಸಾಮಾಜಿಕವಾದವು. ಅವುಗಳಲ್ಲಿ ಪ್ರಮುಖವಾದದ್ದು ಅವಳ ಶಿಕ್ಷಣವನ್ನು ಅವಳ ಮದುವೆಯ ದೃಷ್ಟಿಯಿಂದ ನೋಡುವುದು ಅಥವಾ ಜಾತಿಯ ದೃಷ್ಟಿಯಿಂದ ನೋಡುವುದು ಅಥವಾ ಅವಳ ರಕ್ಷಣೆಯ ದೃಷ್ಟಿಯಿಂದ ನೋಡುವುದು. ಮತ್ತೊಂದು ಬಹಳ ಸಂಕೀರ್ಣವಾದ ವಿಷಯವೆಂದರೆ ಪುರುಷರಿಗಿಂತ ಮಹಿಳೆಯರಿಗೆ ಉದ್ಯೋಗ ಅವಕಾಶಗಳು ಬಹಳ ಸೀಮಿತವಾಗಿರುವುದು ಎಂದು ಬಹುತೇಕರು ಭಾವಿಸಿರುವುದು ಇತ್ಯಾದಿ. ಈ ಬಗೆಯ ಸಾಮಾಜಿಕ ಒಪ್ಪಂದಗಳಲ್ಲಿ ಅನೇಕ ಬದಲಾವಣೆಗಳಾಗಿದ್ದರೂ ಇನ್ನೂ ಬಹುತೇಕರು ಸಾಮಾಜಿಕ ಒಪ್ಪಂದಗಳಿಂದ ಮುಂದಕ್ಕೆ ಹೆಣ್ಣುಮಕ್ಕಳ ಶಿಕ್ಷಣವನ್ನು ನೋಡಬೇಕಾದ ಅಗತ್ಯವಿದೆ. ನಮ್ಮ ಅಧ್ಯಯನದ ಸಂದರ್ಭದಲ್ಲಿ ಬೆರಳೆಣಿಕೆ ಪ್ರಮಾಣದ ಪೋಷಕರು ಹೆಣ್ಣುಮಕ್ಕಳ ಶಿಕ್ಷಣದ ಬಗ್ಗೆ ಸಕಾರಾತ್ಮಕವಾಗಿ ಚಿಂತಿಸಿದ್ದಾರೆ. ಇಲ್ಲಿ ನಮಗೆ ಸ್ಪಷ್ಟವಾಗುವ ಅಂಶವೆಂದರೆ, ಹೆಣ್ಣುಮಕ್ಕಳ ಶಿಕ್ಷಣಕ್ಕೆ ಇರುವ ವಿರೋಧಗಳು, ಕೇವಲ ಪೋಷಕರಿಂದಲೇ ಹುಟ್ಟಿಕೊಂಡಿರುವಂತ ವುಗಳಲ್ಲ. ಇದು ಆರ್ಥಿಕ-ಸಾಮಾಜಿಕ ಹಾಗೂ ಸಾಂಸ್ಕೃತಿಕವಾದದ್ದು. ಅಂದರೆ ಒಪ್ಪಿತ ಸಾಂಸ್ಕೃತಿಕ ನಡವಳಿಕೆಗಳು ಹೆಣ್ಣುಮಕ್ಕಳ ಶಿಕ್ಷಣದ ಬೆಳವಣಿಗೆಯ ಮೇಲೆ ತನ್ನ ಪ್ರಭಾವವನ್ನು ಬೀರುತ್ತಿದೆ ಎಂಬುವುದು ಇಲ್ಲಿ ಸ್ಪಷ್ಟ. ಹೀಗಾಗಿ ಹೆಣ್ಣುಮಕ್ಕಳ ಶಿಕ್ಷಣ ಕುರಿತು ಇರುವ ಸಕಾರಾತ್ಮಕ ಮನೋಭಾವನೆಯು ಕೇವಲ ವೈಯಕ್ತಿಕ ಮಟ್ಟದಲ್ಲಿ ಹೆಚ್ಚಳವಾದರೆ ಸಾಲದು, ಸಾಂಸ್ಥಿಕ ಹಾಗೂ ಸಾಮಾಜಿಕ ಮಟ್ಟದಲ್ಲಿಯು ಬದಲಾಗಬೇಕಾದ ಅಗತ್ಯವಿದೆ. ಈ ದಿಕ್ಕಿನೆಡೆಗೆ ನಾವೆಲ್ಲರೂ ಚಿಂತಿಸಬೇಕಾಗಿದೆ.

ನಾವು ಅಧ್ಯಯನ ನಡೆಸಿದ ವಾರ್ಡ್‌ಗಳಲ್ಲಿ ಶಾಲೆಗೆ ಹೋಗುವ ವಯೋಮಾನದ ಸಮಾನ ವಯಸ್ಸಿನ ಬಾಲಕರಿಗೆ ಹೋಲಿಸಿದರೆ ಬಾಲಕಿಯರ ಶಾಲಾ ಭಾಗವಹಿಸುವಿಕೆಯು ಅಸಮಾನವಾಗಿರುವುದು ಕಂಡುಬರುತ್ತದೆ. ಕಳೆದ ಒಂದು ದಶಕದಲ್ಲಿ ಹೆಣ್ಣುಮಕ್ಕಳ ಶಾಲಾ ಭಾಗವಹಿಸುವಿಕೆಯು ಗಣನೀಯವಾಗಿ ಹೆಚ್ಚಳವಾಗಿದ್ದರೂ ಲಿಂಗಸಂಬಂಧಿ ನೆಲೆಯಲ್ಲಿ ನೋಡಿದಾಗ ಜೆಂಡರ್ ಗ್ಯಾಪ್ ಹಾಗೆಯೇ ಮುಂದು ವರೆದಿರುವುದು ಕಂಡುಬರುತ್ತದೆ. ನಾವು ಅಧ್ಯಯನಕ್ಕೆ ಒಳಪಡಿಸಿದ ಬಹುತೇಕ ಪೋಷಕರು ಹೆಣ್ಣುಮಕ್ಕಳು ಶಾಲೆಗೆ ಹೋಗುವುದು ಅಗತ್ಯ ಎಂದು ಹೇಳುತ್ತಾರೆ. ಆದರೆ ವಿಶೇಷವಾಗಿ ಬಡತನದ ರೇಖೆಗಿಂತ ಕೆಳಗಿರುವ ಮತ್ತು ಅವಕಾಶ ವಂಚಿತ ಕುಟುಂಬಗಳೇ ಹೆಚ್ಚಾಗಿರುವ ವಾರ್ಡ್ ಗಳಲ್ಲಿ ಹೆಣ್ಣುಮಕ್ಕಳು ಶಾಲೆಯಿಂದ ಹೊರಗಿರುವುದು ಹೆಚ್ಚಾಗಿ ಕಂಡುಬರುತ್ತದೆ. ಮನೆಯ

ಆದಾಯದಲ್ಲಿ ಏರಿಳಿತ, ಶಾಲೆಯ ವೆಚ್ಚವನ್ನು ಭರಿಸಲಾಗದ ಸ್ಥಿತಿ, ಇಂತಹ ಸಂದರ್ಭದಲ್ಲಿ ತಂದೆ-ತಾಯಿಗಳು ದುಡಿಮೆಯನ್ನರಿಸಿ ವಲಸೆ ಹೋದಾಗ ದೈನಂದಿನ ಅಗತ್ಯ ವಸ್ತುಗಳ ಖರ್ಚು, ಮನೆಗೆಲಸ ಇನ್ನೂ ಮುಂತಾದ ಕಾರಣಗಳಿಂದ ಮಕ್ಕಳನ್ನು ಶಾಲೆಯಿಂದ ಬಿಡಿಸುವ ಪ್ರಸಂಗಗಳು ಎದುರಾಗುತ್ತವೆ. ಹೀಗೆ ಶಾಲೆಯಿಂದ ಹೊರಗಿರುವ ಮಕ್ಕಳಲ್ಲಿ ಶಾಲೆಯನ್ನು ಮೊದಲು ಕಳೆದು ಕೊಳ್ಳುವವರು ಅಥವಾ ತನ್ನ ಶೈಕ್ಷಣಿಕ ಹಕ್ಕಿನಿಂದ ವಂಚಿತಳಾಗುವವಳು ಆ ಕುಟುಂಬದ ಹೆಣ್ಣುಮಗಳು ಎಂಬುವುದು ನಮ್ಮ ಅಧ್ಯಯನದಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ.

ಈ ಬಗೆಯ ಒತ್ತಡಗಳು ಹೆಣ್ಣುಮಕ್ಕಳ ಮತ್ತು ಮಹಿಳೆಯರನ್ನು ಬಡತನದ ಲಿಂಗೀಕರಣದ ಪ್ರಕ್ರಿಯೆಗೆ ಹೆಚ್ಚು ಒಳಪಡಿಸುತ್ತಿದೆ. ಅವರನ್ನು ಅಸಹಾಯಕರಾಗಿಸುವ ಪ್ರಯತ್ನವೂ ಇದಾಗಿದೆ. ಸ್ಥಳೀಯವಾಗಿ ಇಂತಹ ಒತ್ತಡಗಳಿಂದ ಹೊರಬರಲು ಮಹಿಳಾ ಗುಂಪುಗಳಿಗೆ ಮತ್ತು ಮಹಿಳೆಯರಿಗೆ ಶಿಕ್ಷಣ ಕುರಿತು ಹೆಚ್ಚು ಅರಿವು ಮೂಡಿಸುವುದು ಅಗತ್ಯವಿದೆ. ಮಹಿಳೆಯರ ಅಗತ್ಯತೆಯನ್ನು ಹೆಚ್ಚು ಪರಿಣಾಮಕಾರಿಯಾಗಿ ಅರ್ಥಮಾಡಿಕೊಳ್ಳಲು, ಮಹಿಳಾ ಗುಂಪುಗಳಿಗೆ ಸಾಮರ್ಥ್ಯವಿರುತ್ತದೆ ಎಂಬುದನ್ನು ಸಮಾಜ ಸಂಶೋಧನೆಗಳು ಮತ್ತು ಮಹಿಳಾ ಅಭಿವೃದ್ಧಿಯಲ್ಲಿ ಕೆಲಸ ಮಾಡುತ್ತಿರುವ ಸಮಾಜ ಸಂಶೋಧಕರು ಈಗಾಗಲೇ ಗುರುತಿಸಿದ್ದಾರೆ. ಹೀಗಾಗಿ ಹೆಣ್ಣುಮಕ್ಕಳ ಶೈಕ್ಷಣಿಕ ಅಭಿವೃದ್ಧಿಗಾಗಿ ಹೆಚ್ಚು ಆಧ್ಯತೆ ನೀಡುವ ಅಗತ್ಯವಿದೆ.

ಬಾಲಕರು ಮತ್ತು ಬಾಲಕಿಯರ ಶಾಲಾ ಭಾಗವಹಿಸುವಿಕೆಯ ಅಂತರಕ್ಕೆ ಶೈಕ್ಷಣಿಕವಲ್ಲದ ವಿಷಯಗಳನ್ನು ಮೀರಿದ ಸಾಮಾಜಿಕ ಸಂಗತಿಗಳಿವೆ. ಅಂತಹ ಸಂಗತಿಗಳನ್ನು ಮುಖ್ಯವಾಗಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಆಯಾಮಗಳಿಗೆ ಸಂಬಂಧಿಸಿದೆ. ನಾವು ಅಧ್ಯಯನಕ್ಕೊಳಪಡಿಸಿದ ಎಲ್ಲಾ ಸಮುದಾಯದ ಪೋಷಕರು ಸಾಮಾನ್ಯವಾಗಿ ಹೆಣ್ಣುಮಕ್ಕಳ ಶಿಕ್ಷಣದ ಬಗ್ಗೆ ಆ ಹೆಣ್ಣುಮಗುವಿನ ಭವಿಷ್ಯವನ್ನು ಅಥವಾ ಬದುಕನ್ನು ಅವಳ ಮದುವೆಯ ಹಂತದಲ್ಲಿ ನೋಡತೊಡಗಿರುವುದು ಕಂಡು ಬರುತ್ತದೆ. ಈ ದೃಷ್ಟಿಕೋನವು ಹೆಣ್ಣುಮಕ್ಕಳ ಶಾಲಾ ಭಾಗವಹಿಸುವಿಕೆಯ ಮೇಲೆ ಪ್ರಭಾವ ಬೀರುತ್ತದೆ. ಹೆಣ್ಣುಮಕ್ಕಳ ಮದುವೆಯ ಬಗೆಗಿರುವ ಗ್ರಹಿಕೆಗಳು ನಗರ ಮತ್ತು ಗ್ರಾಮೀಣ ಪ್ರದೇಶದ, ಮಧ್ಯಮ ವರ್ಗದ ಮತ್ತು ತಳವರ್ಗದ, ತಳಜಾತಿಯ ಗ್ರಹಿಕೆಗಳು ಸ್ವಲ್ಪ ಹೆಚ್ಚುಕಡಿಮೆ ಸಮಾನ ರೂಪದಲ್ಲಿ ಕಂಡುಬರುತ್ತವೆ. ಅದೇನೆಂದರೆ ಹೆಚ್ಚು ಓದಿದ ಹೆಣ್ಣುಮಗುವಿಗೆ ವರನನ್ನು ಹುಡುಕುವುದು ತುಂಬಾ ಕಷ್ಟವೆಂದು ಪೋಷಕರು ವಾದಿಸುತ್ತಾರೆ. ಏಕೆಂದು ಮರುಪ್ರಶ್ನೆ ಕೇಳಿದರೆ ವರ ಮತ್ತು ವಧುವಿನ ಶೈಕ್ಷಣಿಕ ಮಟ್ಟವನ್ನು ಹಾಗೂ ಮದುವೆಯ ವೆಚ್ಚವನ್ನು ನಮ್ಮ ಮುಂದಿಡುತ್ತಾರೆ. ಹೆಣ್ಣುಮಕ್ಕಳನ್ನು ನಮ್ಮ ಸಮಾಜದಲ್ಲಿ ಪೂಜಿಸುತ್ತಿಲ್ಲವೇ ಏಕೆ ಆಕೆಗೆ ಶೈಕ್ಷಣಿಕ ಸ್ವಾತಂತ್ರ್ಯವನ್ನು ನೀಡಿಲ್ಲ. ಆಕೆಯನ್ನು ನಾಲ್ಕು ಗೋಡೆಯ ಮಧ್ಯ ಸೀಮಿತಗೊಳಿಸುತ್ತೀರಾ ಎಂದು ಪ್ರಶ್ನೆ ಕೇಳಿದರೆ ನಮ್ಮ ಅಧ್ಯಯನದ ವಕ್ತೃಗಳು ನಿರುತ್ತರಿಗಳಾಗುತ್ತಾರೆ. ಈ ಕುರಿತು ಇನ್ನಷ್ಟು ಅಧ್ಯಯನಗಳನ್ನು ನಡೆಸುವ ಅಗತ್ಯವಿದೆ ಎಂದು ನಮ್ಮಗನಿಸುತ್ತದೆ.

ಪ್ರಾಥಮಿಕ ಶಾಲಾ ಹಂತದಲ್ಲಿ ಮಹಿಳಾ ಶಿಕ್ಷಕರ ಸಂಖ್ಯೆ ಶೇಕಡ ೫೦ರಷ್ಟು ಇರಬೇಕೆಂದು ೧೯೮೬ರ ಕಾರ್ಯನೀತಿ ತಿಳಿಸುತ್ತದೆ. ಆದರೆ ಇದನ್ನು ಅನುಸರಿಸಿದ ಅನೇಕ ರಾಜ್ಯಗಳು ನಮ್ಮಲ್ಲಿವೆ. ಶೈಕ್ಷಣಿಕ ಸಮೀಕ್ಷೆಗಳನ್ನು ಗಮನಿಸಿದಾಗ ಇನ್ನೂ ಕೂಡ ಶೇಕಡ ೩೦ ಮತ್ತು ಅದಕ್ಕಿಂತ ಕಡಿಮೆ ಸಂಖ್ಯೆಯಲ್ಲಿ ಮಹಿಳಾ ಶಿಕ್ಷಕರು ಇರುವುದನ್ನು ತಿಳಿಸುತ್ತದೆ. ಅದರಲ್ಲಿಯೂ ಕೊಳಚೆ ಪ್ರದೇಶದಲ್ಲಿ ಅಥವಾ ಹೆಚ್ಚು ಬಡವರೇ ವಾಸವಾಗಿರುವ ವಾರ್ಡ್‌ಗಳಲ್ಲಿರುವಂತಹ ಶಾಲೆಗಳಲ್ಲಿ ಮಹಿಳಾ ಶಿಕ್ಷಕಿಯರು ಕೆಲಸ ಮಾಡಲು ಅಸಕ್ತಿ ಹೊಂದಿಲ್ಲ ಎಂಬುದು ನಮ್ಮ ಅಧ್ಯಯನದಿಂದ ತಿಳಿದು ಬಂದಿದೆ. ಏಕೆಂದರೆ ನಮಗೆ ಭದ್ರತೆಯಿಲ್ಲ. ಹೀಗಾಗಿ ನಮಗೆ ಅಲ್ಲಿ ಕೆಲಸ ಮಾಡುವುದು ಕಷ್ಟ ವಾಗುತ್ತದೆ ಎಂದು ಮಹಿಳಾ ಶಿಕ್ಷಕಿಯರು ತಿಳಿಸುತ್ತಾರೆ. ಮಹಿಳಾ ಶಿಕ್ಷಕಿಯರ ನೇಮಕಾತಿ ಕುರಿತು ಇರುವ ನೀತಿಯಲ್ಲಿ ಸಂದರ್ಭ ಮತ್ತು ಸನ್ನಿವೇಶವನ್ನು ನಿರ್ದಿಷ್ಟಪಡಿಸುವುದು ಅಗತ್ಯವೆನಿಸುತ್ತದೆ.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ವಿಶೇಷವಾಗಿ ವಾರ್ಡ್‌ಗಳಲ್ಲಿ ಮುಸ್ಲಿಂ ಜನಾಂಗದವರು ಹೆಚ್ಚಾಗಿ ಮೇಲ್ನೋಟಕ್ಕೆ ಹೆಣ್ಣುಮಕ್ಕಳ ಶಿಕ್ಷಣಕ್ಕೆ ಆದ್ಯತೆ ದೊರೆತಂತೆ ಕಂಡುಬರುತ್ತದೆ. ಆದರೆ ಅವರು ಹೆಣ್ಣುಮಕ್ಕಳ ವಿಷಯದಲ್ಲಿ ಆ ಮಗುವಿಗೆ ಹತ್ತು ವರ್ಷ ಆದನಂತರ ಅವಳನ್ನು ಅವರ ಸಾಂಪ್ರದಾಯಿಕ ನೆಲೆಯಲ್ಲಿ ನಿರ್ಬಂಧಿಸುತ್ತಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಈ ಪರಿಸ್ಥಿತಿಯು ಮುಸ್ಲಿಂ ಸಮುದಾಯದಲ್ಲಿ ಬಹಳ ಗಂಭೀರವಾಗಿದೆ. ಅದರಲ್ಲಿಯೂ ಹೆಚ್ಚು ಸಂಪ್ರದಾಯಸ್ಥ ಮುಸ್ಲಿಂ ಕುಟುಂಬದಲ್ಲಿ ಹೆಣ್ಣುಮಕ್ಕಳಿಗೆ ಮದರಸಾಗಳಲ್ಲಿ ಶಿಕ್ಷಣ ಪಡೆಯಲು ಮಾತ್ರ ಅವಕಾಶವಿದೆ. ಅದರಲ್ಲಿಯೂ ಪವಿತ್ರ ಖುರಾನ್ ಪಠಣ ಅಥವಾ ಕಲಿಕೆಗೆ ಮದರಸಾಗಳಲ್ಲಿ ಹೆಚ್ಚು ಒತ್ತು ನೀಡಲಾಗಿದೆ.

ಒಟ್ಟಾರೆ ಹೇಳುವುದಾದರೆ ಮದರಸಾಗಳಲ್ಲಿ ಹೆಣ್ಣುಮಕ್ಕಳು ಸ್ವತಂತ್ರ್ಯವಾಗಿ ಶೈಕ್ಷಣಿಕ ಅಭಿವೃದ್ಧಿಯನ್ನು ಕಂಡುಕೊಳ್ಳಲು ಅನುಗುಣವಾಗುವಂತಹ ಶಿಕ್ಷಣವನ್ನು ಅವು ಒದಗಿಸುತ್ತಿಲ್ಲ ಎಂಬುವುದು ನಮ್ಮ ಗಮನಕ್ಕೆ ಬಂದಿದೆ. ಈ ಕಾರಣದಿಂದಾಗಿ ಶಾಲೆಯಿಂದ ಹೊರಗಿರುವ ಮುಸ್ಲಿಂ ಗಂಡು ಮತ್ತು ಹೆಣ್ಣುಮಕ್ಕಳಗಳನ್ನು ಮುಖ್ಯವಾಹಿನಿಗೆ ತರಲು ಸ್ಥಳೀಯ ಮಟ್ಟದ ಕಾರ್ಯಕ್ರಮಗಳನ್ನು ಏರ್ಪಡಿಸಿ, ಸುಧಾರಿಸುವ ಅಗತ್ಯವಿದೆ. ಹಾಗೆಯೇ ಮದರಸಾ ಶಿಕ್ಷಣವನ್ನು ಸುಧಾರಿಸಲು ಮತ್ತು ಅಧುನೀಕರಿಸಲು ಲಭ್ಯವಿರುವ ಕೇಂದ್ರ ಮತ್ತು ರಾಜ್ಯ ಸರ್ಕಾರದ ಯೋಜನೆಗಳನ್ನು ಆಚರಣೆಗೆ ತರುವ ನಿಟ್ಟಿನಲ್ಲಿ ಹೆಚ್ಚು ಪರಿಣಾಮಕಾರಿಯಾಗಿ ಬಳಸಲು ಆದ್ಯತೆ ನೀಡಬೇಕು. ಹಾಗೆಯೇ ಮುಸ್ಲಿಂ ಮಕ್ಕಳ ಶಿಕ್ಷಣದ ಅಭಿವೃದ್ಧಿಗೆ ಲಭ್ಯವಿರುವ ಎಲ್ಲಾ ಸಂಪನ್ಮೂಲಗಳು ಮಕ್ಕಳಿಗೆ ದೊರಕುವಂತಾಗಲು ಮುಸ್ಲಿಂ ಮಹಿಳೆಯರಲ್ಲಿ ಮತ್ತು ಅವರ ಸ್ವಸಹಾಯ ಗುಂಪುಗಳಲ್ಲಿ ಹೆಚ್ಚು ಅರಿವು ಮೂಡಿಸು ವಂತಾಗಬೇಕು.

ಕಮಲಾಪುರ ಪಟ್ಟಣ ಪಂಚಾಯಿತಿ ವ್ಯಾಪ್ತಿಯಲ್ಲಿ ಗೋಸಂಗಿ ಸಮುದಾಯಕ್ಕೆ ಸೇರಿದ ಕುಟುಂಬಗಳಿದ್ದು, ಇವರು ತಮ್ಮ ಮಕ್ಕಳಿಗೆ ಯಾವುದೇ ರೀತಿಯ ಶಿಕ್ಷಣವನ್ನು ಕೊಡಿಸುವಲ್ಲಿ

ವಿಫಲರಾಗಿದ್ದಾರೆ. ಯಾಕೆ ಶಿಕ್ಷಣ ಕೊಡಿಸಿಲ್ಲ ಎಂದು ಪ್ರಶ್ನೆ ಕೇಳಿದಾಗ ನಮಗೆ ತುಂಬಾ ಬಡತನವಿದೆ. ನಿಮ್ಮ ಶಾಲೆಗೆ ಕಳುಹಿಸಿದರೆ ಏನು ಪ್ರಯೋಜನ. ಅವರನ್ನು ನಮ್ಮೊಡನೆ ಕೆಲಸಕ್ಕೆ ಕರೆದುಕೊಂಡು ಹೋದರೆ ಒಂದು ದಿನಕ್ಕೆ ಒಬ್ಬರಿಗೆ ಐವತ್ತು ರೂಪಾಯಿಯಂತೆ, ಐದು ಮಕ್ಕಳಿಂದ ಇನ್ನೂರೈವತ್ತು ರೂಪಾಯಿಗಳು ಬರುತ್ತದೆ. ಇದರಿಂದ ನಮ್ಮ ಜೀವನ ನಡೆಸಬಹುದು. ಎಷ್ಟೇ ಶಾಲೆ ಓದಿಸಿದರೂ ಅದು ವ್ಯರ್ಥ ಎನ್ನುವ ರೀತಿಯಲ್ಲಿ ಉತ್ತರಿಸಿದರು. ಮನೆಯಲ್ಲಿ ಚಿಕ್ಕಮಕ್ಕಳನ್ನು ನೋಡಿಕೊಳ್ಳಲು, ಹೆಣ್ಣುಮಕ್ಕಳು ಶಾಲೆ ಬಿಟ್ಟು ಮನೆಯಲ್ಲಿದ್ದಾರೆ. ಆ ಮಕ್ಕಳು ಸಹ ಯಾವುದೇ ರೀತಿಯ ಶಿಕ್ಷಣವನ್ನು ಪಡೆದಿಲ್ಲ. ಈ ಸಮುದಾಯದ ಪ್ರಮುಖ ವೃತ್ತಿಯೆಂದರೆ ಮೀನು ಹಿಡಿದು ಮಾರಾಟ ಮಾಡುವುದು ಮತ್ತು ಹಂದಿಗಳನ್ನು ಸಾಕುವುದು. ಅಷ್ಟೇ ಅಲ್ಲದೆ ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸದೇ ಭಿಕ್ಷಾಟನೆಗೆ ಕಳುಹಿಸುತ್ತಾರೆ. ನಂತರ ಅವರು ತಂದ ಆಹಾರ ಪದಾರ್ಥಗಳು ಚೆನ್ನಾಗಿದ್ದರೆ ತಾವು ತಿನ್ನುತ್ತಾರೆ. ಇಲ್ಲವಾದರೆ ಹಂದಿಗಳಿಗೆ ಹಾಕುತ್ತಾರೆ. ದೊಡ್ಡವರು ತಮ್ಮೊಂದಿಗೆ ಮಕ್ಕಳನ್ನು ಕರೆದುಕೊಂಡು ಮೀನು ಹಿಡಿಯಲು ಹೋಗುತ್ತಾರೆ. ಈ ಸಂದರ್ಭವನ್ನು ಅವಲೋಕಿಸಿದ ಶಿಕ್ಷಕರು ಈ ಸಮುದಾಯದ ಮಕ್ಕಳನ್ನು ಏನಾದರೂ ಮಾಡಿ ಶಾಲೆಗೆ ಬರುವಂತೆ ಮಾಡಬೇಕೆಂದು ತಂದೆ ತಾಯಿಗಳಿಗೆ ತಿಳುವಳಿಕೆ ಹೇಳಿದರೂ ಸಹ ತಮ್ಮ ಮನಸ್ಸನ್ನು ಬದಲಾಯಿಸಿಲ್ಲ. ಇದು ಅಲ್ಲದೇ ಅಲ್ಲಿನ ಕ್ಷೇತ್ರ ಸಮನ್ವಯಾಧಿಕಾರಿಗಳು ಸಹ ಹೋದಾಗ ಅವರಿಗೆ ಸರಿಯಾಗಿ ಸ್ಪಂದಿಸದೆ ಇರುವುದು ತಿಳಿದುಬಂದಿದೆ. ಸರ್ಕಾರವು ಮಕ್ಕಳಿಗೆ ಎಷ್ಟೇ ಸೌಲಭ್ಯಗಳು ಕೊಟ್ಟರೂ ಸಹ ಅದು ವ್ಯಥ. ಇದರ ಬದಲಾಗಿ ಇವರ ತಂದೆ ತಾಯಿಗಳಿಗೆ ಕೂಲಿಗಾಗಿ ಕಾಳು ಅಥವಾ ಎನ್.ಆರ್.ಇ.ಜಿ. ಯೋಜನೆಯಲ್ಲಿ ಉದ್ಯೋಗಗಳನ್ನು ನೀಡಿದಾಗ ಅವರು ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಬಹುದು. ಹೀಗೆ ನಿರ್ದಿಷ್ಟ ಸ್ಥಳಗಳಲ್ಲಿ ಉದ್ಯೋಗಾವಕಾಶಗಳನ್ನು ಸೃಷ್ಟಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಮೂಲಕ ಮಕ್ಕಳ ಶಾಲಾ ಭಾಗವಹಿಸುವಿಕೆಯನ್ನು ಹೆಚ್ಚಿಸಬಹುದು. ಈ ನಿಟ್ಟಿನಲ್ಲಿ ಇನ್ನೂ ಹೆಚ್ಚಿನ ಕೆಲಸವಾಗಬೇಕಾಗಿದೆ.

ಶಾಲಾವ್ಯವಸ್ಥೆ ಮತ್ತು ಶೈಕ್ಷಣಿಕ ಭರವಸೆಗಳಿಗೆ ಸಂಬಂಧಿಸಿದಂತೆ ಗುಣಮಟ್ಟದ ಶಿಕ್ಷಣ ಪರಿಕಲ್ಪನೆಯನ್ನು ಸಮಾಜೋ-ಆರ್ಥಿಕ ಅಂಶಗಳು ಪ್ರಭಾವಿಸುತ್ತಿವೆ ಎಂಬುದನ್ನು ನಮ್ಮ ಅಧ್ಯಯನ ಸ್ಪಷ್ಟವಾಗಿ ಗುರುತಿಸಿದೆ. ಆದರೆ ಪೋಷಕರು ಶಿಕ್ಷಣದ ಬಗ್ಗೆ ಹೊಂದಿರುವ ಮನೋಭಾವದ ಪ್ರಮಾಣವು ಪೋಷಕರಿಂದ ಪೋಷಕರಿಗೆ ವ್ಯತ್ಯಾಸವಾಗುತ್ತದೆ. ಶಿಕ್ಷಣ ಮತ್ತು ಶಾಲಾವ್ಯವಸ್ಥೆಯನ್ನು ಕುರಿತ ಪೋಷಕರ ಆರೋಪಗಳು ಒಂದು ರೀತಿಯಲ್ಲಿ ಮುಗಿಯದ ಕಥೆ ಎಂದು ಭಾವಿಸಿದರೂ ಶಾಲಾ ವ್ಯವಸ್ಥೆಯಲ್ಲಿ ಇರುವ ನಿಷ್ಫಲತೆ ಇದಕ್ಕೆ ಪ್ರಮುಖ ಕಾರಣ ಎಂಬುದು ಸ್ಪಷ್ಟ.

ಇನ್ನೂ ಶಿಕ್ಷಣ-ಶಾಲಾ ವ್ಯವಸ್ಥೆಯಲ್ಲಿನ ನಿರುತ್ಸಾಹಕ ಅಂಶವು ಪೋಷಕರ ಮೇಲೆ ಅಥವಾ ಮಕ್ಕಳ ಮೇಲೆ ತನ್ನ ಪ್ರಭಾವವನ್ನು ಬೀರಿದರೂ ಇದರ ಪರಿಣಾಮ ಹೆಚ್ಚಾಗಿ ಬಡತನದ ರೇಖೆಗಿಂತ ಕೆಳಗಿರುವ ಕುಟುಂಬಗಳಲ್ಲಿ ಕಂಡುಬರುವುದು. ಅದರಲ್ಲಿಯೂ ನಿರ್ದಿಷ್ಟವಾಗಿ ಹೇಳುವುದಾದರೆ

ಶಾಲಾ ಚಟುವಟಿಕೆಯಲ್ಲಿ ನಿರ್ದಿಷ್ಟ ಪ್ರಮಾಣದ ಕಲಿಕೆ ನಡೆಯದೇ ಇರುವ ಶಾಲೆಗಳಿರುವ ಪ್ರದೇಶ ಅಥವಾ ಗ್ರಾಮಗಳಲ್ಲಿ ಇದು ಹೆಚ್ಚಾಗಿ ಕಂಡುಬರುತ್ತದೆ. ಆದರೆ ಒಂದು ಅಂಶವನ್ನು ನಾವು ಇಲ್ಲಿ ಸ್ಪಷ್ಟಪಡಿಸಿಕೊಳ್ಳಬೇಕು. ಅದೇನೆಂದರೆ ಪೋಷಕರ ನಿರುತ್ಸಾಹದ ಮಾತುಗಳು ಸಾಮಾನ್ಯವಾಗಿ ತಳಜಾತಿ-ವರ್ಗದ ಜನರನ್ನು ಹೆಚ್ಚು ಘಾಸಿಗೊಳಿಸುತ್ತಿದೆ. ಹೀಗಾಗಿ ಅನಕ್ಷರಸ್ಥ ಪೋಷಕರು ತಮ್ಮನ್ನು ತಾವೇ ಆಗಿದ್ದಾಂಗೆ ದೂಷಿಸಿಕೊಳ್ಳುವ ಮೂಲಕ ಶಾಲಾವ್ಯವಸ್ಥೆಯಲ್ಲಿ ಇರುವ ನ್ಯೂನ್ಯತೆಗಳನ್ನು ಗುರುತಿಸುತ್ತಿದ್ದಾರೆ. ಹೀಗೆ ಸ್ಥಳೀಯ ಜನರೇ ಗುರುತಿಸುತ್ತಿರುವ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳುವ ದಿಕ್ಕಿನಲ್ಲಿ ಇನ್ನಷ್ಟು ಸಂಶೋಧನೆಗಳು ಗ್ರಾಮ-ವಲಯ ಮಟ್ಟದಲ್ಲಿ ನಡೆದು, ಜನರಿಗೆ ಕಲಿಕೆಯ ಮೂಲಕ ಗಳಿಕೆಯ ದಾರಿಯನ್ನು ತೋರಿಸುವಂತಹ ಶಿಕ್ಷಣ ಮುಂದಾದರೂ ದೊರೆಯುವಂತಾಗಬೇಕು ಎಂಬುದು ಈ ಅಧ್ಯಯನದ ಆಶಯವಾಗಿದೆ.

ಒಂದು ಮಗುವನ್ನು ಪ್ರಾಥಮಿಕ ಶಾಲೆಗೆ ಕಳುಹಿಸಲು ಕನಿಷ್ಟ ನಾಲ್ಕು ನೂರು ರೂಪಾಯಿಗಳು ಅಥವಾ ಅದಕ್ಕಿಂತ ಹೆಚ್ಚಿನ ಹಣ ಬೇಕಾಗುತ್ತದೆ ಎಂಬ ನಿರ್ಧಾರಕ್ಕೆ ನಮ್ಮ ಅಧ್ಯಯನದಲ್ಲಿ ಬರಲಾಗಿದೆ. ಖಾಸಗಿ ಖರ್ಚುಗಳನ್ನು ಮಾಡಿದ್ದರೂ ಮಕ್ಕಳು ಶಾಲೆಗೆ ಬರುವಾಗ, ಕೊಳೆತ ಬಟ್ಟೆ, ಹರಿದ ಬ್ಯಾಗ್, ಹರಿದ ಪುಸ್ತಕ ಮತ್ತು ನೋಟ್‌ಬುಕ್, ಒಡೆದ ಸ್ಲೇಟ್, ಮುರಿದ ಬಳಪ ಅಥವಾ ಸೀಸದಕಡ್ಡಿ ಹಾಗೂ ಕನಿಷ್ಟ ಮಟ್ಟದ ಶುಚಿತ್ವ ಇಲ್ಲದಿರುವುದನ್ನು ನಮ್ಮ ಅಧ್ಯಯನ ಗುರುತಿಸಿದೆ. ಖಾಸಗಿ ಖರ್ಚುಗಳನ್ನು ಹೇಗೆ ಕಡಿಮೆಗೊಳಿಸಬೇಕು ಮತ್ತು ಮಕ್ಕಳು ಶಾಲೆಗೆ ಬರುವಾಗ ಹೇಗೆ ಬರಬೇಕು ಎಂಬುದನ್ನು ಕುರಿತು ಇನ್ನೂ ಹೆಚ್ಚಿನ ಸಂಶೋಧನೆಗಳು ನಡೆಯಬೇಕಾಗಿದೆ. ಇದೇ ಸಂದರ್ಭದಲ್ಲಿ ಪೋಷಕರು ಹಾಗೂ ಸಮುದಾಯದ ಜವಾಬ್ದಾರಿಯನ್ನು ಸ್ಥಳೀಯರಿಗೆ ತಿಳಿಸುವ ಪ್ರಯತ್ನ ಸಮರೋಪಾದಿಯಲ್ಲಿ ನಡೆಯಬೇಕಾಗಿದೆ.

ಶಾಲೆಯಿಂದ ಹೊರಗಿರುವ ಮಕ್ಕಳು ಶಾಲೆಗೆ ಬರುವಂತೆ ಮಾಡಲು ಅನೇಕ ಔಪಚಾರಿಕ ಹಾಗೂ ಅನೌಪಚಾರಿಕ ಕಾರ್ಯಕ್ರಮಗಳನ್ನು ರೂಪಿಸಿ ಪ್ರಯೋಗವನ್ನು ಈಗಾಗಲೇ ನಡೆಸಲಾಗಿದೆ. ಕೆಲವು ಕಾರ್ಯಕ್ರಮಗಳು ಸ್ವಲ್ಪಮಟ್ಟಿಗೆ ಮಕ್ಕಳನ್ನು ಮರಳಿ ಶಾಲೆಗೆ ತರುವಲ್ಲಿ ಯಶಸ್ವಿಯಾದರೆ, ಬಹುತೇಕ ಕಾರ್ಯಕ್ರಮಗಳು ವಿಫಲವಾಗಿವೆ. ಇದಕ್ಕೆ ಒಂದು ಪ್ರಮುಖ ಕಾರಣ ಸ್ಥಳೀಯ ಮಟ್ಟದಲ್ಲಿ ಇರುವ ತೊಡಕುಗಳನ್ನು ಅರ್ಥಮಾಡಿಕೊಳ್ಳದೆ, ರಾಜ್ಯ ಹಾಗೂ ರಾಷ್ಟ್ರೀಯ ಮಟ್ಟದಲ್ಲಿ ಕಾರ್ಯಕ್ರಮಗಳನ್ನು ರೂಪಿಸಿ ಆಚರಣೆಗೆ ತರುತ್ತಿರುವುದು. ಸ್ಥಳೀಯ ಮಟ್ಟದಲ್ಲಿ ಯೋಜನೆಗಳನ್ನು ಅಂದರೆ ಜನರ ಯೋಜನೆಯನ್ನು ಇನ್ನೂ ರೂಪಿಸಲು ಸಾಧ್ಯವಾಗದಿರುವುದು. ಶಾಲೆಯಿಂದ ಹೊರಗಿರುವ ಮಕ್ಕಳಿಗೆ ಸಂಬಂಧಿಸಿದ ಸ್ಥಳೀಯರ ಸಹಭಾಗಿತ್ವದ ಮೂಲಕ ೦೬-೧೪ ವಯೋಮಾನದ ಮಕ್ಕಳು ನಿಗದಿತ ಅವಧಿಯಲ್ಲಿ ಶಾಲೆಯಲ್ಲಿ ಕಲಿಯುವಂತೆ ಮಾಡುವ ಕಾರ್ಯಕ್ರಮಗಳನ್ನು ಇನ್ನೂ ಹೆಚ್ಚು ಪರಿಣಾಮಕಾರಿಯಾಗಿ ಜಾರಿಗೆ ತರಬೇಕಾಗಿದೆ. ಇದು ಒಂದು ಸಾಮಾಜಿಕ ಹೊಣೆಗಾರಿಕೆ, ಇದರಿಂದ ಯಾರೊಬ್ಬರೂ ಹೊರತಾಗುವಂತಿಲ್ಲ. ಇದರಲ್ಲಿ ಸರ್ಕಾರ ಪಾತ್ರ ಎಷ್ಟು ಪ್ರಮುಖವೋ,

ಅಷ್ಟೇ ಪ್ರಮುಖವಾದ ಪಾತ್ರವನ್ನು ಸ್ಥಳೀಯ ಜನ-ಸಮುದಾಯ ವಹಿಸಿಕೊಂಡರೆ ಮಾತ್ರ ಒಟ್ಟಾರೇ ಶೈಕ್ಷಣಿಕ ಪ್ರಗತಿ ಸಾಧ್ಯ.

ಶಾಲೆಗಳು ಎಲ್ಲರಿಗೂ ದೊರಕುತ್ತವೆ ಎಂಬುದಕ್ಕೆ ಸರಕಾರಿ ಅಂಕಿ-ಅಂಶಗಳು, ಶೈಕ್ಷಣಿಕ ಸಮೀಕ್ಷೆಗಳು, ರಾಷ್ಟ್ರ ಮತ್ತು ರಾಜ್ಯಮಟ್ಟದ ಶೈಕ್ಷಣಿಕ ಅಧ್ಯಯನಗಳು ಆಧಾರ ಒದಗಿಸುತ್ತವೆ. ಇವುಗಳ ಪ್ರಕಾರ ಗ್ರಾಮೀಣ ಪ್ರದೇಶದ ಹೆಚ್ಚಿನ ಕುಟುಂಬಗಳಿಗೆ ಅನುಕೂಲವಾದ ಅಂತರದಲ್ಲಿ ಪ್ರಾಥಮಿಕ ಶಾಲೆಗಳು ದೊರಕುತ್ತಿವೆ. ಆದರೆ ರಾಷ್ಟ್ರಮಟ್ಟದಲ್ಲಿ ಶೇಕಡ ೭೧ ಗ್ರಾಮಗಳಲ್ಲಿ ಮಾಧ್ಯಮಿಕ ಶಾಲೆಗಳು ಇಲ್ಲವಾಗಿವೆ. ಇದು ಅತ್ಯಂತ ಗಂಭೀರವಾದ ಸಮಸ್ಯೆ. ಗ್ರಾಮೀಣ ಪ್ರದೇಶದ ಪೋಷಕರು ವಿಶೇಷವಾಗಿ ಹೆಣ್ಣುಮಕ್ಕಳನ್ನು ಪಕ್ಕದ ಅಥವಾ ಬೇರೊಂದು ಗ್ರಾಮಕ್ಕೆ ಶಾಲೆಗೆ ಕಳುಹಿಸಲು ಹೆಚ್ಚಿನ ಆಸಕ್ತಿವಹಿಸುವುದಿಲ್ಲ. ಹೀಗಾಗಿ ೫, ೬ ಮತ್ತು ೭ನೇ ತರಗತಿಯ ನಂತರ ಗ್ರಾಮೀಣ ಪ್ರದೇಶದ ಹೆಚ್ಚಿನ ಹೆಣ್ಣುಮಕ್ಕಳು ಶಾಲೆಗೆ ಹೋಗಬೇಕು ಎಂಬ ಆಸಕ್ತಿ ಹೊಂದಿದ್ದರೂ, ಪೋಷಕರಿಗೆ ವಿರುದ್ಧವಾಗಿ ಶಾಲೆಗೆ ಹೋಗಲಾರದ ಸ್ಥಿತಿ ಇದೆ. ಈ ಅಧ್ಯಯನವು ಮುಸ್ಲಿಂ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಹಾಗೂ ತಳಜಾತಿಯ ಕೆಲವು ಪೋಷಕರಲ್ಲಿ ಈ ಮನೋಭಾವನೆಯು ಹೆಚ್ಚಾಗಿರುವುದನ್ನು ಕಂಡುಕೊಂಡಿದೆ. ಇಂತಹ ಮನೋಭಾವನೆಯು ಮುಂಬರುವ ದಿನಗಳಲ್ಲಿ ಬದಲಾಗಬಹುದಾದ ಸಾಧ್ಯತೆಯನ್ನು ಕಡೆಗಣಿಸುವಂತಿಲ್ಲ.

ಬಿಸಿಯೂಟ ಯೋಜನೆಯು ಕೆಲವು ಲೋಪದೋಷಗಳನ್ನು ಹೊಂದಿದ್ದರೂ ಇದು ಜಾರಿಗೆ ಬಂದ ನಂತರ ಶಾಲಾ ದಾಖಲಾತಿ-ಹಾಜರಾತಿ ಪ್ರಮಾಣದಲ್ಲಿ ಸ್ವಲ್ಪ ಹೆಚ್ಚಳವಾಗಿರುವುದು ಕಾಣುತ್ತದೆ. ಅದರಲ್ಲಿಯೂ ಹೆಣ್ಣು ಮಕ್ಕಳ ಶಾಲಾ ಹಾಜರಾತಿ ಮತ್ತು ದಾಖಲಾತಿಯಲ್ಲಿ ಮೊದಲಿಗಿಂತ ಪ್ರಗತಿ ಯಾಗಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಎರಡು, ಸಮಾಜದ ಅಂಚಿನಲ್ಲಿರುವ ಮತ್ತು ಅವಕಾಶ ವಂಚಿತ ಕುಟುಂಬಗಳ ಮಕ್ಕಳ ಶಾಲಾ ಭಾಗವಹಿಸುವಿಕೆಯನ್ನು ಬಿಸಿಯೂಟ ಕಾರ್ಯಕ್ರಮ ಅಭಿವೃದ್ಧಿ ಪಡಿಸಿದೆ. ಮೂರು, ಬಿಸಿಯೂಟ ಕಾರ್ಯಕ್ರಮದಲ್ಲಿ ಬೆರತುಕೊಂಡಿರುವ ಸಾಮಾಜೀಕರಣದ ಮೌಲ್ಯ ಎಲ್ಲಾ ದೃಷ್ಟಿಯಿಂದಲೂ ಹೆಚ್ಚು ಮಹತ್ವದ್ದಾಗಿರುವುದು. ಈ ಯೋಜನೆಯನ್ನು ಕ್ರಮಬದ್ಧವಾಗಿ ಜಾರಿಗೆ ತರುವ ಮೂಲಕ ನಮ್ಮ ಸಮಾಜದಲ್ಲಿ ನೆಲೆಸಿರುವ ಜಾತಿ, ಧರ್ಮ, ವರ್ಗ ಆಧಾರಿತ ಏಣಿಶ್ರೇಣಿ ಅಂತರವನ್ನು ಕಡಿಮೆಗೊಳಿಸಬಹುದಾಗಿದೆ. ಅಲ್ಲದೆ ಸಾಮಾಜಿಕ ಸಮಾನತೆಯನ್ನು ಬೆಳೆಸು ವಲ್ಲಿ ಬಿಸಿಯೂಟ ಪ್ರಮುಖ ಪಾತ್ರವಹಿಸುವುದರಲ್ಲಿ ಅನುಮಾನಗಳಿಲ್ಲ. ನಾಲ್ಕು, ಶಾಲಾ ಬಿಸಿಯೂಟ ಕಾರ್ಯಕ್ರಮ ಸಾಕ್ಷರತೆ, ಶಿಕ್ಷಣ ಕ್ಷೇತ್ರದಲ್ಲಿ ಇರುವ ಲಿಂಗತಾರತಮ್ಯ ಅಂತರವನ್ನು ಮಾತ್ರ ಕಡಿಮೆಗೊಳಿಸದೆ, ಒಟ್ಟಾರೆ ಲಿಂಗಸಮಾನತೆಯನ್ನು ಸಾಧಿಸಿಕೊಳ್ಳುವಲ್ಲಿ ಇದು ಅತ್ಯಂತ ಮಹತ್ವದ ಪರಿಣಾಮವನ್ನು ಉಂಟುಮಾಡಿದೆ. ಒಟ್ಟಾರೆ ಶಾಲಾ ಬಿಸಿಯೂಟ ಕಾರ್ಯಕ್ರಮ ಸಾಮಾಜಿಕ ಅಭಿವೃದ್ಧಿಗೆ ಮೂಲ ಅಡಿಪಾಯವಾಗಿದೆ ಎಂಬುದು ನಮ್ಮ ಅಧ್ಯಯನದ ಅನುಭವಗಳಿಂದ ಸ್ಪಷ್ಟವಾಗುತ್ತದೆ. ಇದನ್ನು ಕೇವಲ ಒಂದು ಕಾರ್ಯಕ್ರಮ ಎಂದು ಪರಿಗಣಿಸಿದರೆ ಇದರ ಮಹತ್ವ

ಸೀಮಿತ ಅರ್ಥಕ್ಕೆ ಕಟ್ಟುಬೀಳುತ್ತದೆ. ಆದರೂ ಪ್ರತಿಯೊಬ್ಬರ ಆಹಾರದ ಹಕ್ಕಿನ ದೃಷ್ಟಿಯಿಂದ ಇದು ಮಹತ್ವದ್ದಾಗಿದೆ. ಶಾಲಾ ಬಿಸಿಯೂಟ ಸರ್ಕಾರದ ಪ್ರಮುಖ ಭಾಗವಾಗುವುದರ ಜೊತೆಗೆ ಇದನ್ನು ಒಂದು ಸಾಮಾಜಿಕ ಚಳುವಳಿಯಾಗಿ ರೂಪಿಸುವುದು ಪ್ರತಿಯೊಬ್ಬರ ಸಾಮಾಜಿಕ ಹೊಣೆಗಾರಿಕೆಯಾಗಿದೆ. ನಿರ್ದಿಷ್ಟವಾಗಿ ಹೇಳುವುದಾದರೆ ಸಾಮಾಜಿಕ ಸಮಾನತೆಯ ಕಾಳಜಿಯಿರುವ ಪ್ರತಿಯೊಬ್ಬರಿಗೂ ಬಿಸಿಯೂಟ ಮಹತ್ವದ ಸಂಗತಿಯಾಗಬೇಕಾಗಿದೆ. ಶಾಲಾ ಬಿಸಿಯೂಟವನ್ನು ಈ ದಿಕ್ಕಿನೆಡೆಗೆ ನಡೆಸುವಲ್ಲಿ ಎಲ್ಲರೂ ಚಿಂತಿಸಬೇಕಾಗಿದೆ.

ಹೆಣ್ಣು ಮಕ್ಕಳ ಶಿಕ್ಷಣದ ಹಂಚಿಕೆಯಲ್ಲಿ ಮಹತ್ವವಾದ ಬೆಳವಣಿಗೆಯಾಗಲ್ಪಟ್ಟಿದೆ. ಹೀಗಿದ್ದರೂ ಕೆಲಸ ಪೂರ್ತಿಯಾಗಿಲ್ಲ. ಕೆಲವು ಗಂಭೀರವಾದ ಅಂಶಗಳನ್ನು ಸ್ಥಳೀಯವಾಗಿ ಹೆಚ್ಚಿನ ಸಂಶೋಧನೆ ಮಾಡಬೇಕಾದ, ಚರ್ಚಿಸಬೇಕಾದ ಅಗತ್ಯವಿದೆ. ಈ ಕೆಳಗಿನ ಅಂಶಗಳು ಪ್ರಸ್ತುತ ಅಧ್ಯಯನದ ಫಲಿತಗಳು ಹೌದು, ಮುಂದಿನ ಅಧ್ಯಯನಗಳಿಗೆ ಸೂಚನೆಗಳು ಹೌದು.

* ಕಮಲಾಪುರ ಪಟ್ಟಣ ಪಂಚಾಯತಿಯ ಒಟ್ಟು ಸಾಕ್ಷರತೆಯ ಪ್ರಮಾಣ ೫೬.೯ರಷ್ಟು ಇದ್ದರೆ ಪುರುಷರ ಸಾಕ್ಷರತೆ ಪ್ರಮಾಣ ಶೇಕಡ ೬೬.೯ರಷ್ಟು. ಇದರಲ್ಲಿ ಮಹಿಳಾ ಸಾಕ್ಷರತಾ ಪ್ರಮಾಣ ೪೬.೯ರಷ್ಟು ಇದೆ. ಇದೇ ರೀತಿ ಮತ್ತೊಂದು ಪ್ರದೇಶವಾದ ಕೊರಟಗೆರೆ ಪಟ್ಟಣ ಪಂಚಾಯತಿ ಒಟ್ಟು ಸಾಕ್ಷರತೆಗೆ ತುಲನೆ ಮಾಡಿದಾಗ ಕೊರಟಗೆರೆ ಸಾಕ್ಷರತೆ ಪ್ರಮಾಣ ಒಟ್ಟು ೭೯.೦೪ರಷ್ಟು ಇದ್ದರೆ, ಪುರುಷರ ಸಾಕ್ಷರತೆ ಪ್ರಮಾಣ ಶೇಕಡ ೮೬.೦೫ರಷ್ಟು ಇದೆ. ಇದರಲ್ಲಿ ಮಹಿಳೆಯರ ಸಾಕ್ಷರತಾ ಪ್ರಮಾಣ ೭೨.೦೧ರಷ್ಟಿದೆ. ಎರಡು ಪಟ್ಟಣ ಪಂಚಾಯಿತಿಗಳ ಸಾಕ್ಷರತಾ ಪ್ರಮಾಣವನ್ನು ನೋಡಿದಾಗ ಕೊರಟಗೆರೆ ಪಟ್ಟಣ ಪಂಚಾಯತಿಗಿಂತ ಕಮಲಾಪುರ ಪಟ್ಟಣ ಪಂಚಾಯಿತಿಯು ಸಾಕ್ಷರತಾ ಪ್ರಮಾಣದಲ್ಲಿ ಹಿಂದುಳಿದಿದ್ದು ಶೇಕಡ ೨೨.೦೫ರಷ್ಟು ಅಂತರ ಕಂಡುಬರುತ್ತದೆ. ಇದರಲ್ಲಿ ಮಹಿಳಾ ಸಾಕ್ಷರತೆ ಕೊರಟಗೆರೆಯಲ್ಲಿ ೭೨.೦೧ರಷ್ಟು ಇದ್ದರೆ, ಕಮಲಾಪುರದಲ್ಲಿ ಶೆಕಡ ೪೨.೯ರಷ್ಟು ಇದೆ. ಇವೆರಡರ ನಡುವಿನ ಅಂತರವು ಶೇಕಡ ೨೨.೦೫ರಷ್ಟು ಇದೆ.
* ಮಧ್ಯದಲ್ಲಿ ಶಾಲೆ ಬಿಡುವ ಮಕ್ಕಳ ಸಂಖ್ಯೆ ಕೊರಟಗೆರೆ ಪಟ್ಟಣದಲ್ಲಿ ನಾವು ಅಧ್ಯಯನಕ್ಕೆ ಒಳಪಡಿಸಿದ ಮುನ್ನೂರು ಕುಟುಂಬದಲ್ಲಿ ಒಟ್ಟು ಹದಿಮೂರು ಜನ ಮಕ್ಕಳು ಶಾಲೆ ಬಿಟ್ಟಿದ್ದಾರೆ. ಈ ಹದಿಮೂರು ಮಕ್ಕಳಲ್ಲಿ ಗಂಡುಮಕ್ಕಳ ಸಂಖ್ಯೆ ಆರು ಹೆಣ್ಣುಮಕ್ಕಳ ಸಂಖ್ಯೆ ಏಳು. ಅದೇ ರೀತಿ ಕಮಲಾಪುರ ಪಟ್ಟಣ ಪಂಚಾಯತಿಯಲ್ಲಿ ನಾವು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಮುನ್ನೂರು ಕುಟುಂಬಗಳಿಗೆ ಒಟ್ಟು ಅರವತ್ನಾಲ್ಕು ಮಕ್ಕಳು ಶಾಲೆಯಿಂದ ಹೊರಗುಳಿದಿದ್ದಾರೆ. ಅದರಲ್ಲಿ ಗಂಡುಮಕ್ಕಳ ಸಂಖ್ಯೆ ಇಪ್ಪತ್ತೇಳು, ಹೆಣ್ಣುಮಕ್ಕಳ ಸಂಖ್ಯೆ ಮುವತ್ತೇಳು. ಇವರೆಡರ ನಡುವಿನ ಅಂತರ ಐವತ್ತೊಂದರಷ್ಟು ಕಂಡುಬರುತ್ತದೆ. ಗಂಡುಮಕ್ಕಳಿಗಿಂತ ಹೆಣ್ಣುಮಕ್ಕಳು ಕಮಲಾಪುರದಲ್ಲಿ ಹೆಚ್ಚು ಶಾಲೆ ಬಿಟ್ಟಿರುವುದು

ಕಂಡುಬರುತ್ತದೆ. ಇದು ಶೈಕ್ಷಣಿಕವಾಗಿ ಹಿಂದುಳಿದ ಜಿಲ್ಲೆ ಮತ್ತು ಪ್ರದೇಶದ ಲಕ್ಷಣವೂ ಹೌದು.

* ಕೊರಟಗೆರೆ ಪಟ್ಟಣದಲ್ಲಿ ವಿದ್ಯಾವಂತರ ಪ್ರಮಾಣ ಅಧಿಕವಾಗಿರುವುದರಿಂದ ಅಲ್ಲಿ ಹೆಣ್ಣು ಮಕ್ಕಳು ೧೮ ವಯಸ್ಸಿನ ನಂತರ ವೈವಾಹಿಕ ಜೀವನಕ್ಕೆ ಕಾಲಿಟ್ಟರೆ, ಕಮಲಾಪುರದಲ್ಲಿ ಬಹುಸಂಖ್ಯಾತವಾಗಿ ೧೬ ವಯಸ್ಸಿನೊಳಗೆ ಹೆಣ್ಣು ಮಕ್ಕಳು ವೈವಾಹಿಕ ಜೀವನಕ್ಕೆ ಕಾಲಿರಿಸಿರುವುದು ಕಂಡುಬರುತ್ತದೆ. ಆರ್ಥಿಕವಾಗಿ ದುರ್ಬಲವಾಗಿರುವುದರಿಂದ ಮತ್ತು ಸಂಪ್ರದಾಯ, ಮೂಢನಂಬಿಕೆ ಇತ್ಯಾದಿ ಕಾರಣಗಳಿಂದ ಮಕ್ಕಳು ಶಿಕ್ಷಣದಿಂದ ವಂಚಿತರಾಗುತ್ತಿದ್ದಾರೆ.
* ಕಮಲಾಪುರ ಪಟ್ಟಣದ ಕುಟುಂಬಗಳಲ್ಲಿ ಮೌಢ್ಯತೆಗಳೇ ಹೆಚ್ಚಾಗಿರುವುದರಿಂದ ಗಂಡುಮಕ್ಕಳಿಗಿರುವಷ್ಟು ಪ್ರಾಶಸ್ತ್ಯ ಹೆಣ್ಣುಮಕ್ಕಳಿಗೆ ಎಲ್ಲಾ ಕ್ಷೇತ್ರಗಳಲ್ಲಿ ಶೋಚನೀಯವಾಗಿದೆ. ಈ ಅಂಶವು ಶೈಕ್ಷಣಿಕವಾಗಿ ಮುಂದುವರೆದ ಪ್ರದೇಶದಲ್ಲಿರುವ ಪಟ್ಟಣದಲ್ಲಿ ಹೆಚ್ಚಾಗಿ ಕಂಡುಬರುವುದಿಲ್ಲ.
* ಕೊರಟಗೆರೆ ಪಟ್ಟಣವು ತುಮಕೂರು ಜಿಲ್ಲೆಗೆ ಹತ್ತಿರವಿದ್ದು ಬೃಹತ್ ಪ್ರಮಾಣದ ಕೈಗಾರಿಕೆಗಳು ಸ್ಥಾಪನೆಯಾಗಿದ್ದರಿಂದ ಬಹುಸಂಖ್ಯಾತರಿಗೆ ಉದ್ಯೋಗಾವಕಾಶಗಳು ಲಭಿಸಿವೆ. ಈ ಕಾರಣಗಳಿಂದ ಸಹ ಶಿಕ್ಷಣಕ್ಕೆ ಉತ್ತೇಜನ ದೊರಕಿದೆ. ಆದರೆ ಕಮಲಾಪುರ ಪಟ್ಟಣದಲ್ಲಿ ಜನರಿಗೆ ವೃತ್ತಿಪರ ಕೆಲಸಕ್ಕೆ ಪ್ರಾಧಾನ್ಯತೆ ಇಲ್ಲದಿರುವುದರಿಂದ, ಅನಕ್ಷರಸ್ಥರು ಅಧಿಕ ಸಂಖ್ಯೆಯಲ್ಲಿ ಕಂಡುಬರುತ್ತಾರೆ.
* ಮಕ್ಕಳ ಶಿಕ್ಷಣದ ಬಗ್ಗೆ ಪೋಷಕರ ಮನೋಪ್ರವೃತ್ತಿ ಕಮಲಾಪುರ ಪಟ್ಟಣ ಪಂಚಾಯಿತಿಗಿಂತ ಕೊರಟಗೆರೆ ಪಟ್ಟಣ ಪಂಚಾಯಿತಿಯಲ್ಲಿ ಉತ್ತಮ ಅಭಿಪ್ರಾಯವಿದೆ.
* ಅಧ್ಯಯನಕ್ಕೆ ಒಳಪಡಿಸಿದ ಎರಡೂ ಪ್ರದೇಶಗಳಲ್ಲಿ ಎಸ್.ಸಿ.; ಎಸ್.ಟಿ.; ಓ.ಬಿ.ಸಿ., ಮತ್ತು ಮುಸ್ಲಿಂ ಈ ಸಾಮಾಜಿಕ ಗುಂಪುಗಳಿಗೆ ಸೇರಿದ ಹೆಣ್ಣುಮಕ್ಕಳು ಶಾಲೆಯಲ್ಲಿ ಉಳಿಯಲು ವಿಶೇಷವಾದ ಕಾಳಜಿವಹಿಸುವುದು ಅವಶ್ಯಕವಾಗಿದೆ.
* ೧೦-೧೮ನೇ ವಯಸ್ಸಿನ ಹೆಣ್ಣುಮಕ್ಕಳು ಶಾಲೆಯಿಂದ ದೂರ ಉಳಿದಿರುವುದನ್ನು ಕುರಿತು ಇನ್ನುಷ್ಟು ಸಂಶೋಧನಾ ಅಧ್ಯಯನಗಳನ್ನು ನಡೆಸಲು ಗಮನ ನೀಡಬೇಕು.
* ರಾಜ್ಯದ ಶೈಕ್ಷಣಿಕ ಗುಣಮಟ್ಟ ಬೆಳವಣಿಗೆ ಮತ್ತು ರಾಜ್ಯ ಸರ್ಕಾರದಿಂದ ಅನುದಾನ ಹಾಗೂ ಮಾನ್ಯತೆ ಪಡೆದ ಎಲ್ಲಾ ಶಾಲೆಗಳಲ್ಲಿ ಹೆಣ್ಣು ಮಕ್ಕಳಿಗೆ ಉಚಿತ ಸಮಾನ ಶಿಕ್ಷಣ ದೊರಕಿಸಲು ಪ್ರಯತ್ನಿಸಬೇಕು.
* ಮಹಿಳಾ ಶಿಕ್ಷಕರ ಸಂಖ್ಯೆ ಹೆಚ್ಚಿಸುವುದು. ಆ ಮೂಲಕ ಹೆಣ್ಣುಮಕ್ಕಳ ಮತ್ತು ತರುಣಾವಸ್ಥೆಯ ಆರೋಗ್ಯ ಪೋಷಣೆಗೆ ಸ್ಥಳೀಯ ಪಂಚಾಯತ್ ರಾಜ್ಯ ಸಂಸ್ಥೆಗಳು ಮತ್ತು ಶಿಕ್ಷಣ ಇಲಾಖೆಯ ನಡುವಿನ ಔಪಚಾರಿಕ ಸಂಬಂಧವನ್ನು ಅಭಿವೃದ್ಧಿಗೊಳಿಸುವುದು ಅಗತ್ಯವಾಗಿದೆ.

* ಕುಟುಂಬದ ಆರ್ಥಿಕ ಶೋಷಣೆ ಅಂದರೆ ಹೆಣ್ಣು ಮಗು ಹೆಚ್ಚು ಕಲಿಯಬಾರದು, ಹೆಚ್ಚು ಕಲಿತರೆ, ಅವಳಿಗೆ ಉತ್ತಮ ಉದ್ಯೋಗ ಸಿಕ್ಕರೆ, ವಿದ್ಯಾವಂತ ಗಂಡನನ್ನು ಹುಡುಕುವ ಸಮಸ್ಯೆ ಎಂದು ಪೋಷಕರು ತಿಳಿದಿದ್ದಾರೆ. ಈ ಕುರಿತು ಅವರಿಗೆ ಅರಿವು ಮೂಡಿಸುವ ಕಾರ್ಯಕ್ರಮದ ಅಗತ್ಯವಿದೆ.

* ಅಧ್ಯಯನ ನಡೆಸಿದ ಒಂದು ಪಟ್ಟಣ ಪಂಚಾಯ್ತಿಯು (ಕಮಲಾಪುರ) ಶೈಕ್ಷಣಿವಾಗಿ ಹಿಂದುಳಿಯಲು, ಮತ್ತೊಂದು ಪಂಚಾಯಿತಿ ಶೈಕ್ಷಣಿಕವಾಗಿ ಮುಂದುವರಿಯಲು (ಕೊರಟಗೆರೆ) ಸ್ಥಳೀಯ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಮತ್ತು ರಾಜಕೀಯ ಅಂಶಗಳು ಕಾರಣವಾಗಿದೆಂಬುದನ್ನು ನಮ್ಮ ಅಧ್ಯಯನವು ದೃಢಪಡಿಸಿದೆ. ಹೀಗಾಗಿ ನಮ್ಮ ಅಧ್ಯಯನದ ಫಲಿತಗಳು ಸೂಚಿಸುವಂತೆ ಶೈಕ್ಷಣಿಕ ಯೋಜನೆಗಳನ್ನು ಮತ್ತು ಶೈಕ್ಷಣಿಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಸ್ಥಳೀಯ ಸಾಮಾಜಿಕ ಪರಿಸರದ ಆಧಾರದ ಮೇಲೆ ರೂಪಿಸಬೇಕಾಗಿದ ಅಗತ್ಯವಿದೆ.

* ವಾರ್ಡ್ ಹಂತದಲ್ಲಿರುವ ಪ್ರತಿಯೊಂದು ಸಾಮಾಜಿಕ ಗುಂಪುಗಳ ಜೊತೆಗೆ ಮಕ್ಕಳ ಶಿಕ್ಷಣ ಕುರಿತು ಸಾಮಾನ್ಯ ಪೂರ್ವಸಿದ್ಧತೆ ಮಾಡಬೇಕಾಗಿದೆ.

* ಸಮಾಜದಲ್ಲಿ ಆಚರಣೆಯಲ್ಲಿರುವ ಲಿಂಗ-ತಾರತಮ್ಯವನ್ನು ತೊಡೆದುಹಾಕಿ ಮಹಿಳೆಯರ ಘನತೆ, ಗೌರವ ಹಾಗೂ ಸಾಮಾಜಿಕ ಸ್ಥಾನಮಾನಗಳನ್ನು ಉನ್ನತಿಗೊಳಿಸುವುದು. ಮಹಿಳಾ ಶಿಕ್ಷಣ ಕುರಿತಂತೆ ಕುಟುಂಬ ಮಟ್ಟದಲ್ಲೇ ಇರುವ ಲಿಂಗ ತಾರತಮ್ಯವನ್ನು ಪರಿಹರಿಸಲು ಒತ್ತುಕೊಡುವುದು.

* ಅನಕ್ಷರಸ್ಥ ಪೋಷಕರಿಗೆ ಹೆಣ್ಣುಮಕ್ಕಳ ಶಿಕ್ಷಣದ ಮಹತ್ವ ತಿಳಿಸುವಂತಹ ಕಾರ್ಯವಾಗಬೇಕಾಗಿದೆ (ಅರಿವು ಮೂಡಿಸಲು ಪ್ರಯತ್ನಿಸಬೇಕು). ಲಿಂಗ ಸಮಾತನೆಗೆ ಅತ್ಯವಶ್ಯಕವಾಗಿ ಒತ್ತು ಕೊಡಬೇಕು. ಇದನ್ನು ಕಾನೂನಿಗಿಂತ ಮಿಗಿಲಾಗಿ, ಜನರು ಸ್ವಯಂಸ್ಫೂರ್ತಿಯಿಂದ ಬೆಂಬಲಿಸುವಂತಾಗಬೇಕು.

* ಹೆಣ್ಣು ಮಕ್ಕಳ ನಿತ್ಯ ಬದುಕಿನ ವಿವಾದಾಂಶಗಳು ಅವರಿಗೆ ಸಂಬಂಧಪಟ್ಟ ಗಂಡು ಮತ್ತು ಹೆಣ್ಣು ಮಕ್ಕಳ ಶಿಕ್ಷಣ ಒಳಗೊಂಡ ಸಂಘಟನೆ ಮತ್ತು ಸ್ಪಷ್ಟ ಕಲ್ಪನೆಗಳು ಸ್ಥಳೀಯರಿಗೆ ನೀಡಬೇಕಾಗಿದೆ. ಮಹಿಳಾ ಮಂಡಳಿ ಅಥವಾ ಸ್ವ-ಸಹಾಯ ಗುಂಪುಗಳು ಮಹಿಳಾ ಅಧಿಕಾರಕ್ಕೆ ಶಿಕ್ಷಣ ಎಂದು ಹೇಳುವ ಜೊತೆಗೆ ಅದಕ್ಕೆ ಜೀವಕಳೆ ತುಂಬುವುದು ಅವಶ್ಯವಾಗಿದೆ.

* ವಿಜ್ಞಾನ ಬಲಪಡಿಸುವ ರಾಷ್ಟ್ರೀಯ ಕಾರ್ಯಕ್ರಮ ಮತ್ತು ಎಲ್ಲಾ ಹೆಣ್ಣು ಮಕ್ಕಳ ಶಾಲೆಗಳಲ್ಲಿ ಗಣಿತ ಕಲಿಸುವ ಯೋಜನೆಯ ಜೊತೆಗೆ ಹೆಣ್ಣು ಮಕ್ಕಳ ಶಾಲೆಗಳಲ್ಲಿ

ಶಿಕ್ಷಣದಲ್ಲಿ ಇರುವ ಲಿಂಗಾಧಾರಿತ ಅಸಮಾನತೆ ಹಾಗೂ ಅಲ್ಲಿನ ಲಿಂಗಸಂಬಂಧಿ ಆಯಾಮಗಳನ್ನು ಶಿಕ್ಷಕರಿಗೆ ಮತ್ತು ಮಕ್ಕಳಿಗೆ ತಿಳಿಸಲು ಆಯಾ ಸ್ಥಳೀಯ ಮಟ್ಟದಲ್ಲಿ ಪ್ರತಿ ಶಾಲೆಯ ಪರಿಸರಕ್ಕೆ ಹೊಂದಿಕೆಯಾಗುವ ಕಾರ್ಯಕ್ರಮಗಳನ್ನು ಜಾರಿಗೆ ತರಬೇಕಾಗಿದೆ.

• • •

# ೧. ಆಕರಗ್ರಂಥಗಳು


ಅಬ್ದುಲ್ ಅಜೀಜ್ ಮತ್ತು ವಾಸುಕಿ ಕೆ.ಜಿ. (ಸಂ.), ೧೯೯೭, ಕರ್ನಾಟಕದ ಆರ್ಥಿಕತೆ, ಕನ್ನಡ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಅನ್ನಪೂರ್ಣೇಶ್ವರಿ, ೨೦೦೨, ಮಹಿಳಾ ಮತ್ತು ಅಭಿವೃದ್ಧಿ, ಮಾನವಾಭಿವೃದ್ಧಿ ಅಧ್ಯಯನಗಳ ಕೇಂದ್ರ, ರಾಮಕೃಷ್ಣ ನಗರ, ಮೈಸೂರು

ಅಂಜು ಗ್ರೋವರ್, ೨೦೦೨, ಭಾರತದಲ್ಲಿ ಲಿಂಗಸಮಾನತೆ, ಯೋಜನಾ ತಿಂಗಳ ಪತ್ರಿಕೆ, ಸಂ. ೧೭, ಸಂಚಿಕೆ ೧೦, ಮೇ ತಿಂಗಳು

ಅಣ್ಣಿಗೇರಿ ಯಮನೂರಪ್ಪ, ೨೦೦೬, ಜಾಗತೀಕರಣ V/s ಬಾಲಕಾರ್ಮಿಕರು, ಹೊನ್ನಾರು ಮಾಸ ಪತ್ರಿಕೆ, ಸಂಪುಟ ೩, ಸಂಚಿಕೆ ೩೨, ನವೆಂಬರ್

ಅಭಿಶಂಕರ ಕೆ., ೧೯೬೯, ಮೈಸೂರು ಗೆಜೆಟಿಯರ್, ತುಮಕೂರು ಡಿಸ್ಟ್ರಿಕ್ಟ್, ಕರ್ನಾಟಕ ರಾಜ್ಯ ಸರ್ಕಾರ, ಬೆಂಗಳೂರು

ಅರವಿಂದ ಚೊಕ್ಕಾಡಿ, ೨೦೦೭, ಶಿಕ್ಷಣ ದೃಷ್ಟಿ, ಸುಮುಖ ಪ್ರಕಾಶನ, ವಿದ್ಯಾರಣ್ಯನಗರ, ಮಾಗಡಿರಸ್ತೆ, ಬೆಂಗಳೂರು

ಅರವಿಂದ ಚೊಕ್ಕಾಡಿ, ೨೦೦೭, ಬದುಕಿಗಾಗಿ ಶಿಕ್ಷಣ, ಲೋಹಿಯಾ ಪ್ರಕಾಶನ, ಕಪ್ಪಗಲ್ಲು ರಸ್ತೆ, ಬಳ್ಳಾರಿ

ಅಗರ್‌ವಾಲ್, ೨೦೦೦, ಆ್ಯನ್ ಅಸೆಸ್‌ಮೆಂಟ್ ಆಫ್ ಟ್ರೆಂಡ್ ಇನ್ ಆಕ್ಸಸ್ ಆಂಡ್ ರಿಟೆನ್ಷನ್, ನ್ಯಾಷನಲ್ ಇನ್ಸ್‌ಟಿಟ್ಯೂಟ್ ಆಫ್ ಎಜುಕೇಷನಲ್ ಪ್ಲಾನಿಂಗ್ ಆಂಡ್ ಅಡ್ಮಿನಿಸ್ಟ್ರೇಶನ್, ನ್ಯೂ ಡೆಲ್ಲಿ

ಅಗ್ನಿಹೋತ್ರಿ ಎ., ಆಂಡ್ ಶಿವಸ್ವಾಮಿ ಜಿ., ೧೯೯೩, ಟೋಟಲ್ ಲಿಟ್ರೆಸಿ ಕ್ಯಾಂಪೇನ್ ಇನ್ ದಿ ಸುಂದರ್‌ಗ್ರಾ ಡಿಸ್ಟ್ರಿಕ್ಟ್ ಆಫ್ ಒರಿಸ್ಸಾ, ಡೈರೆಕ್ಟರೇಟ್ ಆಫ್ ಅಡಲ್ಟ್ ಎಜುಕೇಷನ್, ನ್ಯೂ ಡೆಲ್ಲಿ.

ಅಗ್ನಿಹೋತ್ರಿ, ಸತೀಶ್., ೧೯೯೫, ಮಿಸ್ಸಿಂಗ್ ಫಿಮೇಲ್ಸ್ : ಎ ಡಿಸ್ ಅಗ್ರಿಗ್ರೇಟೆಡ್ ಅನಾಲಿಸಿಸ್, ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ೧೯ ಆಗಸ್ಟ್

ಆಚಾರ್ಯ, ಪೋರಮೇಶ್, ಆಂಡ್ ಅಸೋಸಿಯೇಟ್ಸ್, ೧೯೯೬, ಎಜುಕೇಟಿಂಗ್ ವೆಸ್ಟ್ ಬೆಂಗಾಲ್ : ಪ್ರಾಬ್ಲಮ್ಸ್ ಆಫ್ ಪಾರ್ಟಿಸಿಪೇಟರಿ ಮ್ಯಾನೇಜ್‌ಮೆಂಟ್, ಶಿಕ್ಷಾ ಭವನ, ಕಲ್ಕತ್ತ

ಇಂದಿರಾ ಆರ್., ೨೦೦೨, ಮಹಿಳೆ ಸಮಾಜ ಮತ್ತು ಸಂಸ್ಕೃತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಉಷಾ ಎಂ., ೨೦೦೪, ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಉದಯಕುಮಾರ ಇರ್ವತ್ತೂರು ಮತ್ತು ತೀ.ನಂ. ಶ್ರೀಧರ್, ೨೦೦೧-೦೨ ಮಹಿಳಾ ಅಭಿವೃದ್ಧಿಯನ್ನು ರೂಪಿಸಿದ ಅಗತ್ಯ ಮತ್ತು ಅನಿವಾರ್ಯತೆಗಳು ಒಂದು ಚಿಂತನೆ, ಅಭಿವೃದ್ಧಿ ಅಧ್ಯಯನ ಪತ್ರಿಕೆ, ಸಂಪುಟ ೧, ಸಂಚಿಕೆ ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಡಿಸೆಂಬರ್ ಮೇ

ಉಷಾ ರಾಮಕುಮಾರ್, ಗೋವಿಂದರಾಜು, ೨೦೦೨, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಹಿಳಾ ಶಿಕ್ಷಣದ ಪ್ರಗತಿ ಒಂದು ವಿಶ್ಲಷಣೆ, ಮಹಿಳಾ ಅಧ್ಯಯನ ಪತ್ರಿಕೆ, ಸಂಪುಟ ೪, ಸಂಚಿಕೆ ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕಂಬರ್ಗಿ ಆರ್., ೧೯೯೧, ಚೈಲ್ಡ್ ಲೇಬರ್ ಇನ್ ದಿ ಇಂಡಿಯನ್ ಸಬ್‌ಕಾಂಟಿನೆಂಟ್ ಸೇಜ್, ನ್ಯೂ ಡೆಲ್ಲಿ

ಕರ್ನಾಟಕದಲ್ಲಿ ಮಾನವ ಅಭಿವೃದ್ಧಿ, ೧೯೯೯, ಯೋಜನಾ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು

ಕಬೀರ್, ನೈಲ, ೨೦೦೧, ಡಿಪ್ರವೇಶನ್, ಡಿಸ್‌ಕ್ರಿಮಿನೇಶನ್ ಅಂಡ್ ಡೆಲಿವರಿ ಕಮ್‌ಟೀಂಗ್ ಎಕ್ಸ್‌ಪ್ಲನೇಶನ್ಸ್ ಫರ್ ಚೈಲ್ಡ್ ಲೇಬರ್ ಅಂಡ್ ಎಜುಕೇಷನಲ್ ಫೆಲ್ಯೂರ್ ಇನ್ ಸೌತ್ ಏಷಿಯಾ, ವರ್ಕಿಂಗ್ ಪೇಪರ್-೧೩೫, ಇನ್ಸ್‌ಟಿಟ್ಯೂಟ್ ಆಫ್ ಡೆವಲಪ್‌ಮೆಂಟ್ ಸ್ಟಡೀಸ್

ಕೃಷ್ಣಾಜಿ ಎನ್., ೨೦೦೦, ಪಾವರ್ಟಿ, ಜೆಂಡರ್ ಆ್ಯಂಡ್ ಸ್ಕೂಲಿಂಗ್ : ಎ ಸ್ಟಡಿ ಆಫ್ ಟೂ ಡಿಸ್ಟ್ರಿಕ್ಟ್ ಇನ್ ಆಂಧ್ರ ಪ್ರದೇಶ್, ಇನ್, ವೈಧ್ಯನಾಥನ್. ಎ ಆ್ಯಂಡ್ ಪಿ.ಆರ್.ಜಿ ನಾಯರ್, (ಎಡ್), ಎಲಿಮೆಂಟರಿ ಎಜುಕೇಷನ್ ಇನ್ ರೂರಲ್ ಇಂಡಿಯಾ : ಎ ಗ್ರಾಸ್ ರೂಟ್ಸ್ ವ್ಯೂ, ಸೇಜ್ ಪಬ್ಲಿಕೇಷನ್ಸ್, ನ್ಯೂಡೆಲ್ಲಿ

ಕೊಥಾರಿ ಬ್ರಿಜ್ ಆ್ಯಂಡ್ ಪಿ.ಜಿ.ವಿ. ಶೇರಿ ಚಂದ್, ೨೦೦೩, ರೀಡಿಂಗ್ ಬಿಯಾಂಡ್ ದಿ ಆಲ್ಫಾಬೆಟ್ಸ್, ಸೇಜ್ ಪಬ್ಲಿಕೇಷನ್ಸ್, ನ್ಯೂಡೆಲ್ಲಿ

ಕುಲಕರ್ಣಿ ಎನ್.ಕೆ., ೧೯೯೭, **ಸಮಗ್ರ ಶಿಕ್ಷಣ**, ಮಿರಾಂಬಿಕ ಮುದ್ರಣಾಲಯ, ಶ್ರೀ ಅರವಿಂದ ಸಂಕೀರ್ಣ, ೯ನೇ ಅಡ್ಡರಸ್ತೆ, ಜೆ.ಪಿ. ನಗರ, ಬೆಂಗಳೂರು

ಕಮಲಾ ಹಂಪನಾ ಡಾ., ೨೦೦೩, **ಚೊಗಸೆ**, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು

ಕರೂರ ಎನ್.ಜಿ., ೨೦೦೩, **ಶಿಕ್ಷಣ ಮಾರ್ಗ**, ಸ್ವಪ್ನ ಬುಕ್‌ಹೌಸ್, ಗಾಂಧಿನಗರ, ಬೆಂಗಳೂರು

ಕೃಷ್ಣಕುಮಾರ್ ಸಿ.ಪಿ. ಮತ್ತು ಶಿವರಾಮು ಕಾಡನಕುಪ್ಪೆ (ಸಂಪಾದಕರು), ೨೦೦೧, **ಸುವರ್ಣ ಶಿಕ್ಷಣ**, ವಿದ್ಯಾವರ್ಧಕ ಸಂಘ(ರಿ), ಶೇಷಾದ್ರಿ ಅಯ್ಯರ್ ರಸ್ತೆ, ಮೈಸೂರು

ಕರೂರ ಎನ್.ಜಿ., ೧೯೯೯, **ಶಿಕ್ಷಣದ ಪರಮಗುರಿ**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

**ಕನ್ನಡ ವಿಷಯ ಕೋಶ (ಕರ್ನಾಟಕ)**, ೨೦೦೫ (ಪರಿಷ್ಕೃತ), ಸಂಪುಟ ೧, ಕುವೆಂಪು ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಪ್ರಸಾರಾಂಗ, ಮಾನಸ ಗಂಗೋತ್ರಿ, ಮೈಸೂರು

ಕಿಶೋರಿ ನಾಯಕ ಕೆ. (ಸಂ.), ೨೦೦೭, **ಲಿಂಗತ್ವ ಸಮನ್ವಾಯ**, ಮಂಗಳೂರು ವಿಶ್ವವಿದ್ಯಾಲಯ, ಮಹಿಳಾ ಅಧ್ಯಯನ ಕೇಂದ್ರ, ಮಂಗಳ ಗಂಗೋತ್ರಿ, ಮಂಗಳೂರು

ಕುಮಾರ್ ಟಿ.ಎಂ., ೨೦೦೪, **ಪ್ರಾಥಮಿಕ ಶಿಕ್ಷಣ ಒಂದು ಚರ್ಚೆ**, ಶ್ರೀದೇವಿ ಪ್ರಕಾಶನ, ನಾಗಸಂದ್ರ ಪೋಸ್ಟ್, ಬೆಂಗಳೂರು

ಗವರ್ನಮೆಂಟ್ ಆಫ್ ಇಂಡಿಯಾ, ೧೯೮೬, *ನ್ಯಾಷನಲ್ ಪಾಲಿಸಿ ಆನ್ ಎಜುಕೇಷನ್*, ನ್ಯೂಡೆಲ್ಲಿ

ಗವರ್ನಮೆಂಟ್ ಆಫ್ ಇಂಡಿಯಾ, ೧೯೯೨, ನ್ಯಾಷನಲ್ ಪಾಲಿಸಿ ಆನ್ ಎಜುಕೇಷನ್, (ರಿವೈಸ್ಡ್), ನ್ಯೂಡೆಲ್ಲಿ

ಗವರ್ನಮೆಂಟ್ ಆಫ್ ಇಂಡಿಯಾ, ೧೯೯೩, *ಸಿ.ಎ.ಬಿ.ಇ. ಕಮಿಟಿ ಆನ್ ಡಿಸೆಂಟ್ರಲೈಜ್ಡ್ ಮ್ಯಾನೇಜ್‌ಮೆಂಟ್ ಆಫ್ ಎಜುಕೇಷನ್*, ಮಿನಿಷ್ಟ್ರಿ ಆಫ್ ಹ್ಯೂಮನ್ ರಿಸೋರ್ಸ್ ಡೆವಲ್ಪಮೆಂಟ್, ಡಿಪಾರ್ಟ್‌ಮೆಂಟ್ ಆಫ್ ಎಜುಕೇಷನ್, ನ್ಯೂಡೆಲ್ಲಿ

ಗವರ್ನಮೆಂಟ್ ಆಫ್ ಕರ್ನಾಟಕ, ೧೯೯೯, *ಹ್ಯೂಮನ್ ಡೆವಲಪ್‌ಮೆಂಟ್ ರಿಪೋರ್ಟ್*, ಡಿಪಾರ್ಟಮೆಂಟ್ ಆಫ್ ಪ್ಲಾನಿಂಗ್, ಬೆಂಗಳೂರು

ಗವರ್ನಮೆಂಟ್ ಆಫ್ ಕರ್ನಾಟಕ, ೨೦೦೧, *ಸ್ಕೂಲ್ ಡೆವಲಪ್‌ಮೆಂಟ್ ಅ್ಯಂಡ್ ಮಾನಿಟರಿಂಗ್ ಕಮಿಟಿ (ಎಸ್.ಡಿ.ಎಂ.ಸಿ.)*, ರೆಕಮಂಡೆಷನ್ ಆಫ್ ದಿ ಸ್ಟೇಟ್ ಟಾಸ್ಕ್‌ಫೋರ್ಸ್ ಆಫ್ ಎಜುಕೇಷನ್, ಡಿಪಾರ್ಟ್‌ಮೆಂಟ್ ಆಫ್ ಎಜುಕೇಷನ್, ಬೆಂಗಳೂರು

ಗೋವಿಂದ ಆರ್ ಅಂಡ್ ವರ್ಗೀಸ್ ಎನ್.ವಿ., ೧೯೯೩, 'ಕ್ವಾಲಿಟಿ ಆಫ್ ಪ್ರೈಮರಿ ಸ್ಕೂಲಿಂಗ್ : ಇನ್ ಎಮ್‌ಪೆರಿಕಲ್ ಸ್ಟಡಿ', *ಜರ್ನಲ್ ಆಫ್ ಎಜುಕೇಷನಲ್ ಪ್ಲ್ಯಾನಿಂಗ್ ಅಂಡ್ ಆಡ್ಮಿನಿಸ್ಟ್ರೇಶನ್*, ೭

ಗೋವಿಂದ ಆರ್., ೧೯೯೭, ಡಿಸೆಂಟ್ರಲೈಜೆಷನ್ ಆಫ್ ಎಜುಕೇಷನಲ್ ಮ್ಯಾನೇಜ್‌ಮೆಂಟ್ ಎಕ್ಸ್‌ಪೀರಿಯನ್ಸ್ ಫ್ರಮ್ ಸೌತ್ ಏಷಿಯಾ, ಯು.ಎನ್.ಇ. ಎಸ್.ಸಿ.ಓ ; ಎನ್.ಐ.ಇ.ಪಿ.ಎ.

ಗೋವಿಂದ, ೨೦೦೨.ಎ, ಇಂಡಿಯಾ ಎಜುಕೇಷನ್ ರಿಪೋರ್ಟ್, ಎನ್.ಐ.ಇ.ಪಿ.ಎ ಆ್ಯಂಡ್ ಯು.ಎನ್.ಇ.ಎಸ್.ಇ.ಸಿ.ಓ. ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂ ಡೆಲ್ಲಿ

ಗೋವಿಂದ ಆರ್., ೨೦೦೨.ಬಿ, ಇಂಡಿಯಾ ಎಜುಕೇಶನ್ ರಿಪೋರ್ಟ್ : ಎ ಪ್ರೊಫೈಲ್ ಆಫ್ ಬೇಸಿಕ್ ಎಜುಕೇಷನ್, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂಡೆಲ್ಲಿ.

ಗೋವಿಂದ ಆರ್., ೨೦೦೩.ಎ, ಕಮ್ಯೂನಿಟಿ ಪಾರ್ಟಿಸಿಪೇಶನ್ ಆ್ಯಂಡ್ ಎಂಪವರ್‌ಮೆಂಟ್ ಇನ್ ಪ್ರೈಮರಿ ಎಜುಕೇಷನ್, ಸೇಜ್ ಪಬ್ಲಿಕೇಷನ್ಸ್, ನ್ಯೂಡೆಲ್ಲಿ.

ಗೋವಿಂದ ಆರ್., ೨೦೦೩.ಬಿ, ಡೈನಾಮಿಕ್ಸ್ ಆಫ್ ಡಿಸೆಂಟ್ರಲೈಜ್ಡ್ ಮ್ಯಾನೆಜ್‌ಮೆಂಟ್ ಇನ್ ಪ್ರೈಮರಿ ಎಜುಕೇಶನ್: ಪಾಲಿಸಿ ಆ್ಯಂಡ್ ಪ್ರಾಕ್ಟೀಸ್ ಇನ್ ರಾಜಸ್ಥಾನ್ ಆ್ಯಂಡ್ ಮಧ್ಯಪ್ರದೇಶ್, ಇನ್, ಗೋವಿಂದ ಆರ್., (ಎಡ್) *ಕಮ್ಯೂನಿಟಿ ಪಾರ್ಟಿಸಿಪೇಶನ್ ಆ್ಯಂಡ್ ಎಂಪವರ್‌ಮೆಂಟ್ ಇನ್ ಪ್ರೈಮರಿ ಎಜುಕೇಷನ್*, ಸೇಜ್ ಪಬ್ಲಿಕೇಷನ್ಸ್, ನ್ಯೂಡೆಲ್ಲಿ.

ಗೋವಿಂದ. ಆರ್., ೧೯೯೯, ಡೈನಾಮಿಕ್ಸ್ ಆಫ್ ಡಿಸೆಂಟ್ರಲೈಜಡ್ ಮೆನೆಜ್‌ಮೆಂಟ್ ಆಂಡ್ ಕಮ್ಯುನಿಟಿ ಎಮ್‌ಪವರ್‌ಮೆಂಟ್ ಇನ್ ಪ್ರೈಮರಿ ಎಜುಕೇಷನ್ : ಎ ಕಂಪ್ಯಾರಿಟೀವ್ ಎನಾಲಿಸಿಸ್ ಆಫ್ ಪಾಲಿಸಿ ಆಂಡ್ ಪ್ರಾಕ್ಟೀಸ್ ಇನ್ ಟು ಸ್ಟೇಟ್ಸ್ ಆಫ್ ಇಂಡಿಯಾ, ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಎಜುಕೇಷನಲ್ ಪ್ಲ್ಯಾನಿಂಗ್ ಆಂಡ್ ಅಡ್ಮಿನ್ಸ್ಟ್ರೇಶನ್, ನ್ಯೂ ಡೆಲ್ಲಿ.

ಗೋವಿಂದ. ಆರ್., ೨೦೦೨, ಇಂಡಿಯಾ ಎಜುಕೇಷನ್ ರಿಪೋರ್ಟ್, ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೆಸ್, ನ್ಯೂ ಡೆಲ್ಲಿ.

ಗೋವಿಂದ. ಆರ್., ೨೦೦೩, ಕಮ್ಯುನಿಟಿ ಪಾರ್ಟಿಸಿಪೇಶನ್ ಆಂಡ್ ಎಂಪವರ್‌ಮೆಂಟ್ ಆಫ್ ಪ್ರೈಮರಿ ಎಜುಕೇಷನ್, ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೆಸ್, ನ್ಯೂ ಡೆಲ್ಲಿ.

ಗಂಗಾಧರಪ್ಪ ಎನ್.ಆರ್., ೨೦೦೪, ಶಿಕ್ಷಣದ ಮೂಲತತ್ವಗಳು, ರೇಖಾ ಪ್ರಕಾಶನ, ನಂ. ೧೨೭೫, ತರಳೂರು ಬಡಾವಣೆ, ದಾವಣಗೆರೆ

ಗೋಪಾಲ್ ಸಿ.ಆರ್., ೨೦೦೪, ಸಾಕ್ಷರತಾ ಸಿದ್ಧಾಂತ, ಕಾರ್ಯನೀತಿ ಮತ್ತು ಆಚರಣೆ : ಅರ್ಧ ಶತಮಾನದ ಅನುಭವ, ಸಾಕ್ಷರತಾ ಅಧ್ಯಯನ, ಸಂಚಿಕೆ ೫, ಸಂಶೋಧನಾ ವಿಭಾಗ, ರಾಜ್ಯ ಸಂಪನ್ಮೂಲ ಕೇಂದ್ರ ಕರ್ನಾಟಕ, ಮೈಸೂರು

ಗೋವಿಂದರಾಜು, ೨೦೦೬, ಕರ್ನಾಟಕದಲ್ಲಿ ಮಹಿಳಾ ಶಿಕ್ಷಣದ ಪ್ರಗತಿ : ಒಂದು ಅವಲೋಕನ, ಮಹಿಳಾ ಅಧ್ಯಯನ ಸಂಯುಕ್ತ ಸಂಚಿಕೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

ಗಾಯಿತ್ರೀ ನಾವಡ, ೨೦೦೩, ಸ್ತ್ರೀ ಶಿಕ್ಷಣ ಮತ್ತು ಸಮಾನತೆ, ಮಹಿಳಾ ಸಂಕಥನ, ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪ್ರಾಧಿಕಾರ, ಚಾಮರಾಜಪೇಟೆ, ಬೆಂಗಳೂರು

ಚಂದ್ರಪೂಜಾರಿ ಎಂ., ೨೦೦೧, ದೇಶೀಯತೆಯ ನೆರಳಿನಲ್ಲಿ ವಿಕೇಂದ್ರೀಕರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಚಂದ್ರಪೂಜಾರಿ ಎಂ., ೨೦೦೨, ಸಮುದಾಯ ಮತ್ತು ಸಹಭಾಗಿತ್ವ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಚಂದ್ರಶೇಖರಯ್ಯ ಪಿ., ೨೦೦೭, ಶಿಕ್ಷಣ ದರ್ಶನ, ಸುಮುಖ ಪ್ರಕಾಶನ, ವಿದ್ಯಾರಣ್ಯ ನಗರ, ಮಾಗಡಿ ರಸ್ತೆ, ಬೆಂಗಳೂರು

ಚಂದ್ರಶೇಖರ್ ಟಿ.ಆರ್., ೧೯೯೩, ಅಭಿವೃದ್ಧಿ ಮೀಮಾಂಸೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಚಂದ್ರಶೇಖರ್ ಟಿ.ಆರ್., ೧೯೯೯, ಅಮರ್ತ್ಯಸೇನ್ ಅಭಿವೃದ್ಧಿ ಅಧ್ಯಯನಗಳು, ಕ್ರೈಸ್ಟ್ ಕಾಲೇಜು, ಬೆಂಗಳೂರು

ಚಂದ್ರಶೇಖರ್ ಟಿ.ಆರ್., ೨೦೦೩, ಕರ್ನಾಟಕ ಅಭಿವೃದ್ಧಿಯ ಸಾಮಾಜಿಕ ನೆಲೆಗಳು, ಸಿವಿಜಿ ಪ್ರಕಾಶನ, ಬೆಂಗಳೂರು

ಚಂದ್ರಶೇಖರ್ ಟಿ.ಆರ್., ೨೦೦೪, ಗ್ರಾಮೀಣ ಅಭಿವೃದ್ಧಿ ಮತ್ತು ವಿಕೇಂದ್ರೀಕರಣ ರಾಜಕೀಯ ವೈಫಲ್ಯದ ಒಂದು ಸಂಕಥನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಚಂದ್ರಶೇಖರ್ ಟಿ.ಆರ್. (ಸಂ), ೨೦೦೫., ದಲಿತ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಚಂದ್ರಶೇಖರ್ ಟಿ.ಆರ್., ೧೯೯೪, ಬಳ್ಳಾರಿ ಜಿಲ್ಲೆ ನಿಸರ್ಗ ಸಂಪತ್ತು, ಪ್ರಭು ಪ್ರಿಂಟಿಗ್ ಪ್ರೆಸ್, ಗದಗ

ಚಂದ್ರಕಲಾ ಬಿದರಿ, ೨೦೦೫, ಚಿಂತನ ಚಲುವರಿದಾಗ, ಸಂಸ್ಕೃತಿ ಪ್ರಕಾಶನ, ಸೇಡಂ ಗುಲಬರ್ಗಾ

ಚಂದ್ರಶೇಖರ್ ಟಿ.ಆರ್., ೧೯೯೮, ಉತ್ಪಾದನಾ ಸಂಬಂಧಗಳು ಬಡತನ ಮತ್ತು ಬಡತನದ ಲಿಂಗೀಕರಣ ಒಂದು ಪ್ರಾದೇಶಿಕ ಅಧ್ಯಯನ, ಹೊಸಪೇಟೆ ಮೈಸಿಟಿ ಯುಗಾದಿ ವಿಶೇಷಾಂಕ

ಚಂದ್ರಶೇಖರ್ ಟಿ.ಆರ್. (ಸಂ), ೧೯೯೯, ಜಿಲ್ಲಾ ಅಭಿವೃದ್ಧಿ ಅಧ್ಯಯನ ಕೊಪ್ಪಳ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಚಂದ್ರಶೇಖರ್ ಟಿ.ಆರ್., ೨೦೦೪, ಅಂಕಿ-ಅಂಶಾಧಾರಿತ ಕರ್ನಾಟಕದಲ್ಲಿ ಕಾಣೆಯಾದ ಮಹಿಳೆಯರು, ಮಹಿಳಾ ಅಧ್ಯಯನ, ಸಂಪುಟ ೫. ಸಂಚಿಕೆ ೧-೨, ಜನವರಿ-ಡಿಸೆಂಬರ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಚಂದ್ರಶೇಖರ್ ಟಿ.ಆರ್., ೨೦೦೦, ಮಹಿಳೆ ಮತ್ತು ಅಭಿವೃದ್ಧಿ ಕಾರ್ಯಕ್ರಮಗಳು, ಮಹಿಳಾ ಅಧ್ಯಯನ, ಸಂಪುಟ ೨. ಸಂಚಿಕೆ ೧, ಜನವರಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಜಯಮ್ಮ ಎಚ್. ಕರಿಯಣ್ಣ, ೨೦೦೦, **ಹೆಣ್ಣಿನ ಸ್ಥಾನಮಾನ ಒಂದು ಪುನರವಲೋಕನ**, ಜಯಾ ಪ್ರಕಾಶನ, ವಿಜಯನಗರ ೨ನೇ ಹಂತ, ಬೆಂಗಳೂರು

ಜನಾರ್ದನ್, ೨೦೦೩, **ಕರ್ನಾಟಕ : ತಾಲ್ಲೂಕುವಾರು ಜನಸಂಖ್ಯೆ, ಅಕ್ಷರಸ್ಥರು ಮತ್ತು ಸಾಕ್ಷರತೆ : ೨೦೦೧**, *ಅಭಿವೃದ್ಧಿ ಅಧ್ಯಯನ ; ಸಮಾಜ ವಿಜ್ಞಾನ ಪತ್ರಿಕೆ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ, ಸಂಪುಟ-೨, ಸಂಚಿಕೆ-೧, ಜನವರಿ

ಜಫರಿ, ರೋಗರ್ ಅಂಡ್ ಬಸು, ಅಲಕ, ೧೯೯೬, **ಗರ್ಲ್ಸ್ ಸ್ಕೂಲಿಂಗ್ ಉಮೆನ್ಸ್ ಆಟೋನಮಿ ಅಂಡ್ ಫರ್ಟಿಲಿಟಿ ಚೇಂಜ್ ಇನ್ ಸೌತ್ ಏಷಿಯಾ**, ಸೇಜ್, ನ್ಯೂ ಡೆಲ್ಲಿ.

ಜೋಸೆಫ್ ಎ. ಥಾಮಸ್., ೨೦೦೦, **ಡೈನಮಿಕ್ಸ್ ಆಫ್ ಎಜುಕೇಷನಲ್ ಡೆವಲಪ್‌ಮೆಂಟ್ : ಎ ಕೇಸ್ ಸ್ಟಡಿ ಆಫ್ ಸೆಲೆಕ್ಟೆಡ್ ಬ್ಯಾಕ್‌ವರ್ಡ್ ವಿಲೇಜಸ್ಸ್**, ಇನ್ ಕೇರಳ, ಇನ್, ವೈದ್ಯನಾಥನ್ ಎ. ಆ್ಯಂಡ್ ಪಿ.ಆರ್.ಜಿ. ನಾಯರ್ (ಎಡ್) *ಎಲಿಮೆಂಟರಿ ಎಜುಕೇಶನ್ ಇನ್ ರೂರಲ್ ಇಂಡಿಯಾ : ಎ ಗ್ರಾಸ್ ರೂಟ್ಸ್ ವ್ಯೂ*, ಸೇಜ್ ಪಬ್ಲಿಕೇಷನ್ಸ್, ನ್ಯೂಡೆಲ್ಲಿ

ಜಯಮಂಗಲಿ, ೨೦೦೨, **೬೯ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ**, ತುಮಕೂರು

ಜಯಣ್ಣ ಸಿ.ವಿ., ೨೦೦೫, **ಉದಯೋನ್ಮುಖ ಭಾರತದಲ್ಲಿ ಶಿಕ್ಷಣ**, ಸ್ವಪ್ನ ಬುಕ್‌ಹೌಸ್, ಗಾಂಧಿನಗರ, ಬೆಂಗಳೂರು

ಜಯಶೀಲ, ಶೌಕತ್ ಅಲಿ ಎಂ. ಮೇಗಲಮನಿ ಮತ್ತು ಸುಧಾಕರ ಎಸ್. (ಸಂ), ೨೦೦೭, **ಮಹಿಳೆ ಮತ್ತು ಅಭಿವೃದ್ಧಿ**, ಕಿಸಾನ್ ಪಬ್ಲಿಕೇಷನ್ಸ್, ಆಕಾಶ ಭವನ, ಮಂಗಳೂರು

ಜಯಕುಮಾರ ಅನಗೋಳ್ (ಕನ್ನಡಕ್ಕೆ), ೧೯೮೬, **ಭಾರತೀಯ ಶಿಕ್ಷಣದಲ್ಲಿ ಸಮಾನತೆ, ಗುಣ ಮತ್ತು ಪರಿಮಾಣ**, ಐಬಿಎಚ್ ಪ್ರಕಾಶನ, ಐದನೆಯ ಮುಖ್ಯರಸ್ತೆ, ಗಾಂಧಿನಗರ, ಬೆಂಗಳೂರು

ತುಕಾರಾಮ್ ಎಸ್., ೨೦೦೬, **ಒಂದು ದಾಪು ಮರಳಿ ಶಾಲೆಗೆ ಬರಬೇಕಾದ ಬಾಪು**, ಸಾಲುಹೆಜ್ಜೆ ಪತ್ರಿಕೆ, ಸಂಪುಟ ೨, ಸಂಚಿಕೆ ೯, ನವೆಂಬರ್ ತಿಂಗಳುರೇಣುಕ ಪ್ರಸನ್ನ ಮ.ಗಂ., ೧೯೭೯, ಪ್ರಚಲಿತ ಶಿಕ್ಷಣ ಒಂದು ಚಿಂತನೆ, ವಿಶ್ವನಾಥ ಪ್ರಕಾಶನ, ಸರಸ್ವತಿಪುರಂ, ಮೈಸೂರು

ದಯಾನಂದ್ ಡಾ., ೨೦೦೫, **ಲಿಂಗ ಅಸಮಾನತೆಯ ವಿಭಿನ್ನ ಮುಖಗಳು**, ಮಾನಸ ತಿಂಗಳ ಪತ್ರಿಕೆ, ಫೆಬ್ರವರಿ, ಮಾನ್ವಿ ಮುದ್ರಾಲಯ, ಬೆಂಗಳೂರು, ಪುಟ ೧೦

ದೇವೇಂದ್ರಕುಮಾರ ಹಕಾರಿ ಡಾ., (ಸಂ.), ೨೦೦೦, **ಗ್ರಾಮೀಣ ವೃತ್ತಿಗಳು**, ಕನ್ನಡ ಪುಸ್ತಕ ಪ್ರಾಧಿಕಾರ, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು

ದಾಸ್‌ಗುಪ್ತ ಆರ್.ಕೆ., ೨೦೦೦, **ಶಿಕ್ಷಣ ಮತ್ತು ಜನಸಂಖ್ಯೆ**, ಯೋಜನಾ ಪತ್ರಿಕೆ, ಆಗಸ್ಟ್ ಬೆಂಗಳೂರು

ನಂಬಿಸನ್, ಗೀತ ಬಿ., ೧೯೯೬, **ಈಕ್ವಿಟಿ ಇನ್ ಎಜುಕೇಶನ್ : ದಿ ಸ್ಕೂಲಿಂಗ್ ಆಫ್ ಡಿಲಿಟ್ ಚಿಲ್ಡ್ರನ್**, ಡಿಸ್‌ಕಷನ್ ಪೇಪರ್-೧೫, ಸ್ಟಡೀಸ್ ಆನ್ ಹ್ಯೂಮನ್ ಡೆವಲಪ್‌ಮೆಂಟ್ ಇನ್ ಇಂಡಿಯಾ, ಯು.ಎನ್.ಡಿ.ಪಿ, ನ್ಯೂ ಡೆಲ್ಲಿ.

ನಂಜುಂಡಪ್ಪ ಡಿ.ಎಂ., ಆ್ಯಂಡ್ ಅದರ್ಸ್., ೨೦೦೨, **ಹೈಪವರ್ ಕಮಿಟಿ, ಫಾರ್ ರೀ ಅಡ್ರೆಸಲ್ ಆಫ್ ರೀಜಿನಲ್ ಇಮ್‌ಬ್ಯಾಲನ್ಸ್**, (ಎಚ್.ಪಿ.ಸಿ.ಎಫ್.ಆರ್.ಆರ್.ಐ)ಗವರ್ನಮೆಂಟ್ ಆಫ್ ಕರ್ನಾಟಕ, ಬೆಂಗಳೂರು.

ನಾಗರಾಜನ್ ಆರ್., ೧೯೯೭, **ಲಾಂಡ್ ಹೋಲ್ಡಿಂಗ್, ಚೈಲ್ಡ್ ಲೇಬರ್ ಅಂಡ್ ಸ್ಕೂಲಿಂಗ್**, *ಜರ್ನಲ್ ಆಫ್ ರೂರಲ್ ಡೆವಲಪ್‌ಮೆಂಟ್*, ೧೬

ನಾಯರ್ ಕೆ.ಎನ್., ಶಿವಾನಂದನ್ ಪಿ., ಅಂಡ್ ರೆತ್‌ನಾಮ್ ವಿ.ಸಿ.ವಿ., ೧೯೮೪, ಎಜುಕೇಷನ್, **ಎಂಪ್ಲಾಯ್‌ಮೆಂಟ್ ಆಂಡ್ ಲ್ಯಾಂಡ್ ಹೋಲ್ಡಿಂಗ್ ಪ್ಯಾಟ್ರನ್ ಇನ್ ಎ ತಮಿಳ್ ವಿಲೇಜ್**, *ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ*, ೧೬-೨೩ ಜೂನ್.

ನಾಯರ್ ಪಿ.ಆರ್.ಜಿ., ೧೯೮೧, **ಪ್ರೈಮರಿ ಎಜುಕೇಷನ್ ಪಾಪುಲೇಷನ್ ಗ್ರೋತ್ ಅಂಡ್ ಸೋಶಿಯಲ್ ಎಕನಾಮಿಕ್ ಚೇಂಜ್ ಎ ಕಂಪ್ಯಾರಿಟೀವ್ ಸ್ಟಡಿ ವಿತ್ ಪರ್ಟಿಕ್ಯುಲರ್ ರೆಫರೆನ್ಸ್ ಟು ಕೇರಳ**, ಅಲೈಡ್, ನ್ಯೂ ಡೆಲ್ಲಿ.

ನ್ಯಾಷನಲ್ ಕೌನ್ಸಿಲ್ ಆಫ್ ಎಜುಕೇಷನಲ್ ರಿಸರ್ಚ್ ಅಂಡ್ ಟ್ರೈನಿಂಗ್, ೧೯೯೨, **ಫಿಫ್ತ್ ಆಲ್ ಇಂಡಿಯಾ ಎಜುಕೇಷನಲ್ ಸರ್ವೆ**, ೨ ವಾಲ್ಯೂಮ್ಸ್, (ಎನ್.ಸಿ.ಇ.ಆರ್. ಟಿ), ನ್ಯೂ ಡೆಲ್ಲಿ

ನ್ಯಾಷನಲ್ ಕೌನ್ಸಿಲ್ ಆಫ್ ಎಜುಕೇಷನಲ್ ರಿಸರ್ಚ್ ಅಂಡ್ ಟ್ರೈನಿಂಗ್, ೧೯೯೭, **ಸಿಕ್ಸ್ತ್ ಆಲ್ ಇಂಡಿಯ ಎಜುಕೇಷನಲ್ ಸರ್ವೆ**, ನ್ಯಾಷನಲ್ ಟೇಬಲ್, ವಾಲ್ಯೂಮ್-೧ (ಎನ್.ಸಿ.ಇ.ಆರ್.ಟಿ), ನ್ಯೂ ಡೆಲ್ಲಿ.

ನ್ಯಾಷನಲ್ ಲಿಟ್ರೆಸಿ ಮಿಷನ್, ೧೯೯೪, **ಆನ್ಯೂಯಲ್ ರಿಪೋರ್ಟ್ ೧೯೯೩-೯೪ ಲಿಟ್ರೆಸಿ ಆ್ಯಂಡ್ ಪೋಸ್ಟ್ ಲಿಟ್ರೆಸಿ ಕ್ಯಾಂಪೇನ್ಸ್ ಇನ್ ಇಂಡಿಯಾ**, ಡೈರೆಕ್ಟರೇಟ್ ಆಫ್ ಅಡಲ್ಟ್ ಎಜುಕೇಷನ್, ನ್ಯೂ ಡೆಲ್ಲಿ.

ನ್ಯಾಷನಲ್ ಲಿಟ್ರೆಸಿ ಮಿಷನ್, ೨೦೦೦, **ಲಿಟ್ರೆಸಿ ರೇಟ್ಸ್ : ಆ್ಯನ್ ಅನಾಲಿಸಿಸ್ ಬೇಸ್ಡ್ ಆನ್ ದಿ ಎನ್.ಎಸ್.ಎಸ್.ಓ. ಸರ್ವೇ**, ೧೯೯೮, ಡೈರೆಕ್ಟರೇಟ್ ಆಫ್ ಅಡಲ್ಟ್ ಎಜುಕೇಶನ್, ನ್ಯೂ ಡೆಲ್ಲಿ.

ನಾಗರಾಜು ಟಿ., ೨೦೦೫, ಭಾರತದಲ್ಲಿ ಶಿಕ್ಷಣ ಮತ್ತು ಸಮಾಜ, ಚೇತನ ಬುಕ್ ಹೌಸ್, ಮೈಸೂರು, ಪು. ೨೮೩-೨೮೭

ನರಸಿಂಹಾಚಾರ್ ಎ.ಎಲ್., ೨೦೦೬, ಉದಯೋನ್ಮುಖ ಭಾರತದಲ್ಲಿ ಶಿಕ್ಷಣ, ಭಾರತಿ ಪ್ರಕಾಶನ, ಸರಸ್ವತಿಪುರಂ, ಮೈಸೂರು

ನಾಯಕ್ ಜೆ.ಪಿ., ೧೯೯೦, ಭಾರತದಲ್ಲಿ ಪ್ರಾಥಮಿಕ ಶಿಕ್ಷಣ, ಗೀತಾ ಬುಕ್ ಹೌಸ್, ಮೈಸೂರು

ನಿರಂಜನಾರಾಧ್ಯ, ೨೦೦೪, ಶಾಲೆಗಳು ರಾಜಕೀಯ ಪಕ್ಷಗಳ ಶಾಲಾ ಕಚೇರಿಗಳಾಗಬೇಕೆ!, ಹೊಸತು ತಿಂಗಳ ಪತ್ರಿಕೆ ಡಿಸೆಂಬರ್

ನಿಖಿಲ್ ಕೋಲ್ಪೆ, ೨೦೦೬, ಗೊಂದಲಗಳ ಸಂತೆಯಾಗಿರುವ ಎಸ್.ಡಿ.ಎಂ.ಸಿ. ರಚನೆ ಪ್ರಕ್ರಿಯೆ, ಸಾಲುಹೆಜ್ಜೆ ಪತ್ರಿಕೆ, ಸಂಪುಟ ೨, ಸಂಚಿಕೆ ೭, ಸೆಪ್ಟೆಂಬರ್

ನಾರಾಯಣ ಎಂ., ೧೯೯೬, ಸಾಮಾಜಿಕ ಸಂಶೋಧನ ವಿಧಾನ, ಚೇತನ್ ಬುಕ್ ಹೌಸ್, ಚಾಮರಾಜಪೇಟೆ, ಜೋಡಿರಸ್ತೆ, ಮೈಸೂರು

ನಾಗರಾಜ ಹಬ್ಬು, ೨೦೦೬, ಬಡಮಕ್ಕಳಿಗೆ ಆಶಾದೀಪವಾದ ಸಮುದಾಯದ ವಸತಿನಿಲಯ, ಸಾಲುಹೆಜ್ಜೆ ಪತ್ರಿಕೆ, ಸಂ. ೨, ಸಂಚಿಕೆ ೮, ಅಕ್ಟೋಬರ್ ತಿಂಗಳು

ನಾಯಕ್ ಜೆ.ಪಿ. ಕನ್ನಡಕ್ಕೆ ಜಯಕುಮಾರ್ ಆನಗೋಳ್, ೧೯೮೬, ಭಾರತೀಯ ಶಿಕ್ಷಣದಲ್ಲಿ ಸಮತೆ, ಗುಣ ಮತ್ತು ಪರಿಮಾಣ, ಐಬಿಎಚ್ ಪ್ರಕಾಶನ, ೫ನೇ ಮುಖ್ಯರಸ್ತೆ, ಗಾಂಧಿನಗರ, ಬೆಂಗಳೂರು

ನಿಖಿಲ್ ಕೋಲ್ಪೆ, ೨೦೦೬, ಶಿಕ್ಷಣದ ಹಕ್ಕು, ತಾರೆಗೆ ಗುರಿ, ಶಿಕ್ಷಣದ ಹಕ್ಕು ಮಸೂದೆ ೨೦೦೫ರಲ್ಲಿ ಏನಿದೆ?, ಸಾಲುಹೆಜ್ಜೆ ಪತ್ರಿಕೆ, ಸಂಪುಟ ೨, ಸಂಚಿಕೆ ೨, ಮೇ ತಿಂಗಳು

ನಿರಂಜನಾರಾಧ್ಯ ವಿ.ಪಿ., ೨೦೦೮, ಸಾರ್ವಜನಿಕ ಶಿಕ್ಷಣ ವ್ಯವಸ್ಥೆಗೆ ಎಳ್ಳುನೀರು, ಸಾಲುಹೆಜ್ಜೆ ಪತ್ರಿಕೆ, ಸಂಪುಟ ೪, ಸಂಚಿಕೆ ೩, ಮೇ ತಿಂಗಳು

ಪದ್ಮಪ್ರಸಾದ್ ಎಸ್.ಪಿ., ೨೦೦೭, ಶಿಕ್ಷಣ ಮತ್ತು ರಾಷ್ಟ್ರೀಯ ಕಾಳಜಿಗಳು, ಸುಮುಖ ಪ್ರಕಾಶನ, ವಿದ್ಯಾರಣ್ಯ ನಗರ, ಬೆಂಗಳೂರು

ಪ್ರಶಾಂತ್ ಎಚ್.ಡಿ., ೨೦೦೩, ವೃದ್ಧರ ಪರಿಕಲ್ಪನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

ಪ್ರಶಾಂತ್ ಎಚ್.ಡಿ., ೨೦೦೪, ಶಾಲಾ ಬಿಸಿಯೂಟ ಅಧ್ಯಯನ ವರದಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

ಪ್ರಶಾಂತ್ ಎಚ್.ಡಿ., ೨೦೦೫, ಈಶಾನ್ಯ ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣ ಮತ್ತು ಸಮಾಜ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

ಪ್ರಶಾಂತ್ ಎಚ್.ಡಿ., ೨೦೦೬.ಎ, **ಶಾಲಾ ಶಿಕ್ಷಣದಲ್ಲಿ ವಿಕೇಂದ್ರೀಕರಣ : ಎಸ್.ಡಿ.ಎಂ.ಸಿ. ಕಾರ್ಯಕ್ಷಮತೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

ಪ್ರಶಾಂತ್ ಎಚ್.ಡಿ., ೨೦೦೬.ಬಿ, **ಶಾಲಾ ಶಿಕ್ಷಣ,** ಅಭಿವೃದ್ಧಿ ಪಥ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ಮತ್ತು ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು.

ಪ್ರಶಾಂತ್ ಎಚ್.ಡಿ., ೨೦೦೮, **ಶಾಲಾ ಶಿಕ್ಷಣದ ಸಾರ್ವತ್ರೀಕರಣ : ದಲಿತ ಮಕ್ಕಳ ಸ್ಥಿತಿ,** ಕನ್ನಡ ವಿಶ್ವವಿದ್ಯಾಲಯದ ಅಧ್ಯಯನಾಂಗಕ್ಕೆ ಸಲ್ಲಿಸಿದ ಸಂಶೋಧನ ಅಧ್ಯಯನ ವರದಿ, ಅಪ್ರಕಟಿತ

ಡೆನ್ ಜಿಲ್ ಸಲ್‌ಡಾನ, ೧೯೯೯, **ರೆಸಿಡ್ಯೂಯಲ್ ಲಿಟ್ರೆಸಿ ಅಂಡ್ ಅನ್‌ಇವನ್ ಡೆವಲಪ್‌ಮೆಂಟ್-I,** ಪೇಟರ್ನಡ್ ಕಾನ್‌ಸನ್‌ಟ್ರೇಶನ್ ಆಫ್ ಲಿಟ್ರೆಸಿ, *ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ,* ಜುಲೈ, ೩

ಡ್ರೀಜ್, ಜೀನ್ ಅಂಡ್ ಲೋ ಜಾಸ್‌ಕಿ, ೧೯೯೫, **ಲಿಟ್ರೆಸಿ ಇನ್ ಇಂಡಿಯಾ ಅಂಡ್ ಚೈನಾ,** *ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ,* ೧೧ ನವೆಂಬರ್.

ಡ್ರೀಜ್, ಜೀನ್ ಆಂಡ್ ಸರೆನ್, ಮೃಣಾಲಿನಿ, ೧೯೯೫, **ಪ್ರೈಮರಿ ಎಜುಕೇಷನ್ ಅಂಡ್ ಎಕನಾಮಿಕ್,** *ಡೆವಲಪ್‌ಮೆಂಟ್ ಇನ್ ಚೈನಾ ಅಂಡ್ ಇಂಡಿಯಾ : ಓವರ್ ವ್ಯಾ ಅಂಡ್ ಟೂ ಕೇಸ್ ಸ್ಟಡೀಸ್.*

ಡ್ರೀಜ್ ಜೀನ್ ಅಂಡ್ ಸೆನ್ ಅಮರ್ತ್ಯ, ೧೯೯೫.ಎ, **ಇಂಡಿಯಾ : ಎಕನಾಮಿಕ್ ಡೆವಲಪ್‌ಮೆಂಟ್ ಅಂಡ್ ಸೋಶಿಯಲ್ ಅಪರ್‌ಚ್ಯುನಿಟಿ,** ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೆಸ್, ಡೆಲ್ಲಿ.

ಡ್ರೀಜ್ ಜೀನ್, ಅಂಡ್ ಸೆನ್ ಅಮರ್ತ್ಯ, ೧೯೯೫.ಬಿ, **ಬೇಸಿಕ್ ಎಜುಕೇಷನ್ ಆಸ್ ಎ ಪೊಲಿಟಿಕಲ್ ಇಶ್ಯು,** ಜರ್ನಲ್ ಆಫ್ ಎಜುಕೇಷನ್ ಪ್ಲಾನಿಂಗ್ ಅಂಡ್ ಅಡ್ಮಿನಿಸ್ಟ್ರೇಶನ್ ೯

ಡ್ರೀಜ್ ಜೀನ್ ಆ್ಯಂಡ್ ಸೇನ್ ಅಮರ್ತ್ಯ, ೧೯೯೫.ಸಿ, **ಇಂಡಿಯಾ : ಎಕನಾಮಿಕ್ ಡೆವಲಪ್‌ಮೆಂಟ್ ಆ್ಯಂಡ್ ಸೋಶಿಯಲ್ ಆಪರ್ಚುನಿಟಿ,** ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂ ಡೆಲ್ಲಿ.

ಡ್ರೀಜ್ ಜೀನ್ ಆಂಡ್ ಸೆನ್ ಅಮರ್ತ್ಯ, ೧೯೯೬, **ಇಂಡಿಯನ್ ಡೆವಲಪ್‌ಮೆಂಟ್ : ಸೆಲೆಕ್ಟೆಡ್ ರಿಜನಲ್ ಪರಸ್ಪೆಕ್‌ಟೀವ್ಸ್,** ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೆಸ್, ನ್ಯೂ ಡೆಲ್ಲಿ.

ಡ್ರೀಜ್ ಜೀನ್ ಮತ್ತು ಅಮರ್ತ್ಯ ಸೆನ್, ೨೦೦೧, **ಇಂಡಿಯಾ ಡೆವಲಪ್‌ಮೆಂಟ್ಸ್ ಅಂಡ್ ಪಾರ್ಟಿಸಿಪೇಷನ್,** ಆಕ್ಸ್‌ಫರ್ಡ್ ಯೂನಿವರ್ಸಿಟಿ, ನ್ಯೂ ಡೆಲ್ಲಿ.

ಡ್ರೀಜ್ ಜೀನ್ ಆ್ಯಂಡ್ ಕಿಂಗ್‌ಡಂ, ಗೀತಾ ಗಾಂಧಿ, ೨೦೦೧, **ಸ್ಕೂಲ್ ಪಾರ್ಟಿಸಿಪೇಶನ್ ಇನ್ ರೂರಲ್ ಇಂಡಿಯಾ,** *ರಿವ್ಯೂ ಆಫ್ ಡೆವಲಪ್‌ಮೆಂಟ್ ಎಕನಾಮಿಕ್ಸ್,* ೫.

ತಿಲಕ್ ಜೆ.ಬಿ.ಜಿ, ೧೯೯೬, **ಹೌ ಫ್ರೀ ಈಸ್ ಫ್ರಿ ಪ್ರೈಮರಿ ಎಜುಕೇಷನ್ ಇನ್ ಇಂಡಿಯಾ,** *ಎಕನಾಮಿಕ್ ಆ್ಯಂಡ್ ಪೊಲಿಟಿಕಲ್ ವಿಕ್ಲಿ,* ೩ ಫೆಬ್ರುವರಿ.

ತಿಲಕ್ ಜೆ.ಬಿ.ಜಿ, ೨೦೦೦.ಎ, **ಹೌಸ್‌ಹೋಲ್ಡ್ ಎಕ್ಸ್‌ಪೆಂಡಿಚರ್ ಆನ್ ಎಜುಕೇಶನ್ ಇನ್ ಇಂಡಿಯಾ,** ಎ ಫ್ರಿಲಿಮಿನರಿ ಎಜುಕೇಶನ್ ಆಫ್ ದಿ ೫೨ ರೌಂಡ್ ಆಫ್ ದಿ ನ್ಯಾಷನಲ್ ಸ್ಯಾಂಪಲ್ ಸರ್ವೇ, ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಎಜುಕೇಶನ್ ಫ್ಲ್ಯಾನಿಂಗ್ ಆ್ಯಂಡ್ ಆಡ್ಮಿನಿಸ್ಟ್ರೇಶನ್, ನ್ಯೂ ಡೆಲ್ಲಿ.

ಪ್ರಶಾಂತ್ ಎಚ್.ಡಿ., ೨೦೦೫, **ಈಶಾನ್ಯ ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣ ಮತ್ತು ಸಮಾಜ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

ಪ್ರಶಾಂತ್ ಎಚ್.ಡಿ., ೨೦೦೬, **ಶಾಲಾ ಶಿಕ್ಷಣದಲ್ಲಿ ವಿಕೇಂದ್ರೀಕರಣ ಎಸ್.ಡಿ.ಎಮ್.ಸಿ. ಕಾರ್ಯಕ್ಷಮತೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

ಪ್ರಶಾಂತ್ ಎಚ್.ಡಿ., ೨೦೦೮, **ಶಾಲಾ ಶಿಕ್ಷಣದ ಸಾರ್ವತ್ರೀಕರಣ ದಲಿತ ಮಕ್ಕಳ ಸ್ಥಿತಿ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ಅಧ್ಯಯನಾಂಗಕ್ಕೆ ಸಲ್ಲಿಸಿದ ಅಧ್ಯಯನ ವರದಿ.

ಪ್ರಸಾದ್, ಕೆ.ವಿ. ಈಶ್ವರ್, ೧೯೮೭, **ವೇಸ್ಟೇಜ್, ಸ್ಟ್ಯಾಗ್‌ನೇಷನ್ ಆ್ಯಂಡ್ ಇನ್ ಈಕ್ವಾಲಿಟಿ ಆಫ್ ಅಪರ್‌ಚ್ಯುನಿಟಿ ಇನ್ ರೂರಲ್ ಪ್ರೈಮರಿ ಎಜ್ಯುಕೇಶನ್ : ಎ ಕೇಸ್ ಸ್ಟಡಿ ಆಫ್ ಆಂಧ್ರ ಪ್ರದೇಶ,** ಮಿನಿಸ್ಟ್ರಿ ಆಫ್ ಹ್ಯೂಮನ್ ರಿಸರ್ಚ್ ಡೆವಲಪ್‌ಮೆಂಟ್, ನ್ಯೂ ಡೆಲ್ಲಿ.

ಫಿಲ್ಮ್, ಡಿಯಾನ್ ಅಂಡ್ ಫ್ರಿತ್‌ಚೆತ್ತ್, ಲ್ಯಾನ್ಟ್, ೧೯೯೯, **ಎಜುಕೇಷನಲ್ ಎನ್‌ರೋಲ್‌ಮೆಂಟ್ ಅಂಡ್ ಅಟೈನ್‌ಮೆಂಟ್ ಇನ್ ಇಂಡಿಯಾ : ಹೌಸ್‌ಹೋಲ್ಡ್ ವೆಲ್ತ್, ಜೆಂಡರ್ ವಿಲೇಜ್ ಅಂಡ್ ಸ್ಟೇಟ್ ಇಫೆಕ್ಟ್ಸ್,** *ಜನರಲ್ ಆಫ್ ಎಜುಕೇಷನಲ್ ಪ್ಲಾನಿಂಗ್ ಅಂಡ್ ಅಡ್ಮಿನಿಸ್ಟ್ರೇಷನ್,* ೧೩.

ಬಸವರಾಜ ಸಬರದ, ೨೦೦೬, **ಶೈಕ್ಷಣಿಕ ನೆಲೆ ಹಾಗೂ ಮಹಿಳಾ ಸಬಲೀಕರಣ,** ಮಹಿಳಾ ಅಧ್ಯಯನ, ಸಂಯುಕ್ತ ಸಂಚಿಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಬಾಟಿ, ಕಿರಣ್, ಜೆ.ಪಿ. ಶಿವಕುಮಾರ್ ಆ್ಯಂಡ್ ಅದರ್ಸ್, ೧೯೯೭, **ಕ್ಲಾಸ್ ಸ್ಟ್ರಗಲ್,** *ಇಂಡಿಯಾ ಟು ಡೇ,* ೧೩ ಅಕ್ಟೋಬರ್

ಬಾಟಿ, ಕಿರಣ್, ೧೯೯೮, **ಎಜುಕೇಷನಲ್ ಡಿಪ್ರವೇಶನ್ ಇನ್ ಇಂಡಿಯಾ : ಎ ಸರ್ವೇ ಆಫ್ ಫೀಲ್ಡ್ ಇನ್‌ವೆಸ್ಟಿಗೇಶನ್ಸ್,** ಪಬ್ಲಿಷ್ಡ್ ಇನ್ *ಎಕನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ,* ೪ ಜುಲೈ ಆ್ಯಂಡ್ ೧೦ ಜುಲೈ

ಬೂರ್ರಾ, ನೇಹ್ರಾ, ೧೯೯೫, **ಬಾರ್ನ್ ಟು ವರ್ಕ್ಸ್ : ಚೈಲ್ಡ್ ಲೇಬರ್ ಇನ್ ಇಂಡಿಯಾ,** ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂ ಡೆಲ್ಲಿ

ಬ್ಯಾನರ್ಜಿ, ರುಕ್ಮಿಣಿ, ೧೯೯೫, **ಡೋಂಟ್ ಬ್ಲೇಮ್ ಇಟ್ ಆನ್ ಪಾವರ್ಟಿ ಅಲೋನ್,** *ಬಿಸ್ನೆಸ್ ಸ್ಟ್ಯಾಂಡರ್ಡ್,* ೨೩ ಡಿಸೆಂಬರ್.

ಬ್ಯಾನರ್ಜಿ, ರುಕ್ಮಿಣಿ, ೧೯೯೮, **ವೈ ಡೋಂಟ್ ಚಿಲ್ಡ್ರನ್ಸ್ ಕಂಪ್ಲೀಟ್ ಪ್ರೈಮರಿ ಸ್ಕೂಲ್ : ಎ ಕೇಸ್ ಸ್ಟಡಿ ಆಫ್ ಎ ಲೊ-ಇನ್‌ಕಮ್ ನೈಬರ್-ಹುಡ್ ಇನ್ ಡೆಲ್ಲಿ,** *ಎಕನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ,* ೪ ಜುಲೈ ಆ್ಯಂಡ್ ೧೦ ಜುಲೈ

ಬ್ಯಾನರ್ಜಿ, ಸುಮಂತ್, ೧೯೯೨, ಯೂಸಸ್ ಆಫ್ ಲಿಟ್ರಸಿ : ಟೋಟೆಲ್ ಲಿಟ್ರಸಿ ಕ್ಯಾಂಪೆನ್ ಇನ್ ತ್ರಿ ವೆಸ್ಟ್ ಬೆಂಗಾಲ್ ಡಿಸ್ಟ್ರಿಕ್ಟ್, *ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ*, ೨೯ ಫೆಬ್ರವರಿ

ಭಾರತ ಸರ್ಕಾರ, ೧೯೯೩.ಎ, ಎಜುಕೇಷನ್ ಫರ್ ಆಲ್ : ದಿ ಇಂಡಿಯಾ ಸೀನ್, ಮಿನಿಸ್ಟ್ರಿ ಆಫ್ ಹ್ಯೂಮನ್ ರಿಸೋರ್ಸ್ ಡೆವಲಪ್‌ಮೆಂಟ್, ನ್ಯೂ ಡೆಲ್ಲಿ

ಭಾರತ ಸರ್ಕಾರ, ೧೯೯೩.ಬಿ, ಎಜುಕೇಷನ್ ಫರ್ ಆಲ್ : ದಿ ಇಂಡಿಯಾ ಸೀನ್ ವೈಡನಿಂಗ್ ಹೊರೈಸಾನ್ಸ್, ಮಿನಿಸ್ಟ್ರಿ ಆಫ್ ಹ್ಯೂಮನ್ ರಿಸೋರ್ಸ್ ಡೆವಲಪ್‌ಮೆಂಟ್, ನ್ಯೂ ಡೆಲ್ಲಿ

ಭಾಸ್ಕರ ರಾವ್ ಬಿ., ೧೯೮೨, **ಇಂದಿನ ಶಿಕ್ಷಣ ಪದ್ಧತಿ ಅಸಂಗತ ಅವೈಜ್ಞಾನಿಕ**, ನವಕರ್ನಾಟಕ ಪಬ್ಲಿಕೇಶನ್ಸ್ ಪ್ರೈ., ಲಿಮಿಟೆಡ್, ಬೆಂಗಳೂರು

ಭೈರಪ್ಪ ಕೆ., ೨೦೦೧, **ಶಿಕ್ಷಣದ ಸಮಾಜಶಾಸ್ತ್ರ**, ಕೆಂಬ್ರಿಡ್ಜ್ ಪಬ್ಲಿಕೇಶನ್ ಕೋ. ಪ್ರೈವೇಟ್ ಲಿಮಿಡೆಟ್, ಬೆಂಗಳೂರು

ಮಾಲಿನಿ ಭಟ್ಟಾಚಾರ್ಯ, ೨೦೦೩, **ಭಾರತದಲ್ಲಿ ಶಿಕ್ಷಣ ಮತ್ತು ಮಹಿಳೆ**, ಅಚಲ ತಿಂಗಳ ಪತ್ರಿಕೆ, ಜುಲೈ

ಮೊಗಳ್ಳಿ ಗಣೇಶ್, ೧೯೯೯, **ದಲಿತರು ಮತ್ತು ಜಾಗತೀಕರಣ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಮಹಾಬಲೇಶ್ವರ ರಾವ್, ೧೯೮೫, **ಅಸಮಾನತೆ ನಾಡಿನಲ್ಲಿ ಶಿಕ್ಷಣ**, ಪ್ರ.ಜನವಾದಿ ಪ್ರಕಶನ, ಗುಂಡ್ಮಿ, ಸಾಸ್ತಾನ್ ಉಡುಪಿ ತಾ., ದಕ್ಷಿಣ ಕನ್ನಡ ಜಿಲ್ಲೆ, ಪು. ೭೪-೭೫

ಮುರಳಿ ಮೋಹನ ಕಾಟಿ, ೨೦೦೫, **ಮಾರಾಟ ಶಿಕ್ಷಣ**, ಪುಸ್ತಕ ಪ್ರೀತಿ ಪ್ರಕಾಶನ, ಸುಭಾಷ್ ಸ್ಟೂಡೆಂಟ್ಸ್ ಮತ್ತು ಯೂತ್ ಅಸೋಸಿಯಷನ್, ಆನೇಕಲ್ಲು, ಬೆಂಗಳೂರು ನಗರ ಜಿಲ್ಲೆ

ಮೀರಾ ಎಲ್.ಜಿ., ೨೦೦೬, **ಕುಟುಂಬ ವ್ಯವಸ್ಥೆ ಮತ್ತು ಲಿಂಗಭೇದ**, ಹೊನ್ನಾರು ಮಾಸಪತ್ರಿಕೆ, ಸಂ. ೩, ಸಂಚಿಕೆ ೧, ಜನವರಿ

ಮಹೇಶ್ ತಿಪ್ಪಶೆಟ್ಟಿ, ೧೯೯೫, **ಸಾಮಾಜಿಕ ಆಲೋಚನೆ**, ದಾಳಿಂಬ ಪ್ರಕಾಶನ, ಹುನಗುಂದ, ಪು. ೯೫

ಮಹಾಬಲೇಶ್ವರ ರಾವ್, ೧೯೯೨, **ಬಹುಮುಖ ಶಿಕ್ಷಣ**, ಎಸ್.ಬಿ.ಎಸ್. ಪಬ್ಲಿಷರ್ಸ್ ಅ್ಯಂಡ್ ಡಿಸ್ಟ್ರಿಬ್ಯೂಟರ್ಸ್, ರೈಲ್ವೆ ಪ್ಯಾರಲರ್ ರೋಡ್, ಬೆಂಗಳೂರು

ಮಂಗಳಾ ಪ್ರಿಯದರ್ಶಿನಿ ಡಿ., ೨೦೦೭, **ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ ಒಂದು ಪ್ರವೇಶಿಕೆ**, ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಮುಳಗುಂದ ಚ.ವಿ., ಜಿ.ಎಂ. ಹೆಗಡೆ (ಸಂ.), ೨೦೦೬, **ಸುವರ್ಣ ಕರ್ನಾಟಕ : ಸಮಾಜ ಮತ್ತು ಸಂಸ್ಕೃತಿ**, ಸಾಹಿತ್ಯ ಪ್ರಕಾಶನ, ಕೊಪ್ಪೀಕರ್ ಬೀದಿ, ಹುಬ್ಬಳ್ಳಿ

ಮೀನಾಕ್ಷಿ ಬಾಳಿ, ೨೦೦೮, **ಮಹಿಳೆ, ಶಿಕ್ಷಣ-ಅಭಿವೃದ್ಧಿ**, ಸಾಲುಹೆಜ್ಜೆ ಪತ್ರಿಕೆ, ಮೇ ತಿಂಗಳು

ರವೀಂದ್ರನಾಥ ಕೆ., ೨೦೦೫, ಬಳ್ಳಾರಿ ಜಿಲ್ಲಾ ದರ್ಶನ, ಪ್ರಸಾಂರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ

ರತ್ನಮ್ಮ ಎನ್.ಎನ್., ೨೦೦೪, ಮಹಿಳೆ ಮತ್ತು ಸಾಕ್ಷರತೆ, ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು

ರಾಮಯ್ಯಂಗಾರ್ ಎಚ್.ಜೆ., ೧೯೯೪, ಕೆಲವು ಶಿಕ್ಷಣ ಪದ್ಧತಿಗಳು, ಎಚ್.ಜೆ. ರಾಮಯ್ಯಂಗಾರ್, ಬಸವನಗುಡಿ, ಬೀದಿ ಅಡ್ಡರಸ್ತೆ,ಬೆಂಗಳೂರು

ರೇಖಾ ವಾಜೀರ್, ೨೦೦೧, ದಿ ಜೆಂಡರ್ ಗ್ಯಾಪ್ ಇನ್ ಬೇಸಿಕ್ ಎಜ್ಯುಕೇಷನ್, ಎನ್‌ಜಿಒ ಆಸ್ ಚೇಂಜ್ ಏಜೆನ್ಸಿ, ಸೇಜ್, ನ್ಯೂಡೆಲ್ಲಿ

ರಾಜ ಎಮ್., ೧೯೯೦, ಎಜುಕೇಷನ್ ಡೆವಲಪ್‌ಮೆಂಟ್ ಆ್ಯಂಡ್ ಸೊಸೈಟಿ, ವಿಕಾಸ್ ಪಬ್ಲಿಶಿಂಗ್ ಹೌಸ್, ನ್ಯೂ ಡೆಲ್ಲಿ.

ರಾಜನ್ ಎಸ್.ಐ., ಆ್ಯಂಡ್ ಮೋಹನ್ ಚಂದ್ರನ್ ಪಿ., ೨೦೦೦, ಇನ್‌ಫ್ಯಾಂಟ್ ಆ್ಯಂಡ್ ಚೈಲ್ಡ್ ಮಾರ್ಟಾಲಿಟಿ ಎಸ್ಟಿಮೇಟ್ಸ್, ೧೯೯೧ ಸೆನ್ಸೆಸ್, *ಎಕನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ*, ೧೬ ಡಿಸೆಂಬರ್.

ರಾಮಚಂದ್ರನ್, ವಿಮಲ., ೧೯೯೯, ಅಡಲ್ಟ್ ಎಜುಕೇಷನ್ : ಎ ಟೇಲ್ ಆಫ್ ಎಂಪವರ್‌ಮೆಂಟ್ ಡಿನೈಡ್, *ಎಕನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ*, ವಾಲ್ಯೂಮ್. ನಂ.೧೫, ಪು. ೩೪೯೯೩

ರಾಮಚಂದ್ರನ್, ವಿಮಲ್, ೨೦೦೩.ಎ, ಕಮ್ಯೂನಿಟಿ ಪಾರ್ಟಿಸಿಪೇಶನ್ ಆ್ಯಂಡ್ ಎಂಪವರ್‌ಮೆಂಟ್ ಇನ್ ಪ್ರೈಮರಿ ಎಜುಕೇಷನ್ : ಡಿಸ್‌ಕಷನ್ ಆಫ್ ಎಕ್ಸ್‌ಪೀರಿಯನ್ಸ್ ಫ್ರಮ್ ರಾಜಸ್ಥಾನ್, ಇನ್, ಗೋವಿಂದ ಆರ್., (ಎಡ್) *ಕಮ್ಯೂನಿಟಿ ಪಾರ್ಟಿಸಿಪೇಶನ್ ಆ್ಯಂಡ್ ಎಂಪವರ್‌ಮೆಂಟ್ ಇನ್ ಪ್ರೈಮರಿ ಎಜುಕೇಷನ್*, ಸೇಜ್ ಪಬ್ಲಿಕೇಷನ್ಸ್, ನ್ಯೂಡೆಲ್ಲಿ.

ರಾಮಚಂದ್ರನ್ ವಿಮಲ, ೨೦೦೩.ಬಿ, ಗೆಟಿಂಗ್ ಚಿಲ್ಡ್ರನ್ ಬ್ಯಾಕ್ ಟು ಸ್ಕೂಲ್ : ಕೇಸ್ ಸ್ಟಡಿ ಇನ್ ಪ್ರೈಮರಿ ಎಜುಕೇಷನ್, ಸೇಜ್ ಪಬ್ಲಿಕೇಷನ್ಸ್, ನ್ಯೂಡೆಲ್ಲಿ

ರಾವ್, ನಿತ್ಯ, ೧೯೯೩, ಟೋಟಲ್ ಲಿಟ್ರಸಿ ಕ್ಯಾಂಪೈನ್ ಎ ಫೀಲ್ಡ್ ರಿಪೋರ್ಟ್ಸ್, *ಎಕನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ*, ೮ ಮೇ

ರೇಖಾ ಕೌಲ್., ೧೯೯೩, ಕಾಸ್ಟ್, ಕ್ಲಾಸ್ ಆ್ಯಂಡ್ ಎಜುಕೇಷನ್, ಸೇಜ್, ನ್ಯೂಡೆಲ್ಲಿ

ರೇಖಾ ಕೌಲ್, ೨೦೦೧, ಅಸೆಸಿಂಗ್ ಪ್ರೈಮರಿ ಎಜುಕೇಶನ್ ಗೋಯಿಂಗ್ ಬಿಯಾಡ್ ದಿ ಕ್ಲಾಸ್‌ರೂಂ, *ಎಕನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ*, ಜನವರಿ ೧೩

ರೇಣುಕಪ್ಪ ಜಿ.ಎಸ್., ೨೦೦೪, ಶಿಕ್ಷಣದ ಬುನಾದಿ, ಶಿವಾರ್ಚಿತ ಪ್ರಕಾಶನ, ನಂ. ೨೭, ಮೊದಲನೇ ಅಡ್ಡರಸ್ತೆ, ಆದರ್ಶನಗರ, ತುಮಕೂರು

ರೋಹಿಡೇಕರ್ ಎಸ್.ಆರ್., ೧೯೯೫, ೨೧ನೇ ಶತಮಾನಕ್ಕಾಗಿ ಶಿಕ್ಷಣದ ಉದ್ದೇಶಗಳು, ಕರ್ನಾಟಕ ಎಜ್ಯುಕೇಷನ್ ಬೋರ್ಡ್, ಧಾರವಾಡ

ಲಿಥಿನ್ ಜಿ.ಕೆ., (೨೦೦೦), 'ಚಿಲ್ಡ್ರನ್ ವರ್ಕ್ಸ್ ಅಂಡ್ ಎಜುಕೇಷನ್', *ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ*, ೧೦-೧೭, ಜೂನ್.

ವರ್ಲ್ಡ್ ಬ್ಯಾಂಕ್, ೧೯೯೭, **ಡೆವಲಪ್‌ಮೆಂಟ್ ಇನ್ ಪ್ರಾಕ್ಟೀಸ್ : ಪ್ರೈಮರಿ ಎಜುಕೇಷನ್ ಇನ್ ಇಂಡಿಯಾ**, ಅಲೈಡ್ ಪಬ್ಲಿಷಿಂಗ್, ನ್ಯೂ ಡೆಲ್ಲಿ

ವಾಸವಿ ಎ.ಆರ್, ೨೦೦೦, **ಎಕ್ಸ್‌ಕ್ಲೂಷನ್, ಎಲಿಮಿನೇಷನ್ ಆ್ಯಂಡ್ ಆಪರ್ಚುನಿಟಿ ಪ್ರೈಮರಿ ಸ್ಕೂಲ್ಸ್ ಆ್ಯಂಡ್ ಸ್ಕೂಲಿಂಗ್ ಇನ್ ಸೆಲೆಕ್ಟೆಡ್ ರೀಜನ್ಸ್ ಆಫ್ ಇಂಡಿಯಾ**, ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಅಡ್ವಾನ್ಸ್ಡ್ ಸ್ಟಡೀಸ್, ಬೆಂಗಳೂರು

ವಾಸಂತಿ.ಎ.ಆರ್., ೨೦೦೦, **ಎಕ್ಸ್‌ಕ್ಲೂಷನ್ ಎಲಿಮಿನೇಷನ್ ಆ್ಯಂಡ್ ಅಪರ್ಚುನಿಟೀಸ್ : ಪ್ರೈಮರಿ ಸ್ಕೂಲ್ಸ್ ಆ್ಯಂಡ್ ಸ್ಕೂಲಿಂಗ್ ಇನ್ ಸೆಲೆಕ್ಟೆಡ್ ರೀಜನ್ಸ್ ಆಫ್ ಇಂಡಿಯಾ**, ಡ್ರಾಫ್ಟ್ ರಿಪೋರ್ಟ್, ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಅಡ್ವಾನ್ಸ್ ಸ್ಟಡೀಸ್, ಬೆಂಗಳೂರು

ವೇನರ್, ಮೈರಾನ್, ೧೯೯೧, **ಚೈಲ್ಡ್ ಆ್ಯಂಡ್ ದಿ ಸ್ಟೇಟ್ ಇನ್ ಇಂಡಿಯಾ : ಚೈಲ್ಡ್ ಲೇಬರ್ ಆ್ಯಂಡ್ ಎಜುಕೇಷನ್ ಪಾಲಿಸಿ ಇನ್ ಕಂಪ್ಯಾರಿಟಿವ್ ಪರ್‌ಸ್ಪೆಪೆಕ್ಟಿವ್**, ಪ್ರಿನ್ಸ್‌ಟನ್ ಯುನಿವರ್ಸಿಟಿ ಪ್ರೆಸ್, ಪ್ರಿನ್ಸ್‌ಟನ್

ವೈದ್ಯನಾಥನ್.ಎ. ಆ್ಯಂಡ್ ಪಿ.ಆರ್.ಜಿ. ನಾಯರ್ (೨೦೦೦), *ಎಲಿಮೆಂಟರಿ ಎಜ್ಯುಕೇಷನ್ ಇನ್ ರೂರಲ್ ಇಂಡಿಯಾ: ಎ ಗ್ರಾಸ್ ರೂಟ್ಸ್ ವ್ಯೂ*, ಸೇಜ್, ಪಬ್ಲಿಕೇಷನ್ಸ್, ನ್ಯೂಡೆಲ್ಲಿ

ವೈಸರ್ಸ್ ಪಿ., ಗುಂಬೆರ್ ಎ., ಆ್ಯಂಡ್ ವೈಸರ್ಕ್ಯ ಎಲ್, (೧೯೯೩), 'ಲಿಟ್ರೆಸಿ ಆ್ಯಂಡ್ ಪ್ರೈಮರಿ ಎಜುಕೇಷನ್ ಇನ್ ಇಂಡಿಯಾ, ೧೯೮೦-೮೧ ಟು ೧೯೯೧', *ಜರ್ನಲ್ ಆಫ್ ಎಜುಕೇಷನಲ್ ಪ್ಲಾನಿಂಗ್ ಆ್ಯಂಡ್ ಅಡ್ಮಿನಿಸ್ಟ್ರೇಶನ್,೭.*

ಶ್ರೀವಾತ್ಸವ, ರವಿ, ೧೯೯೭, **ಅಸೆಸ್ ಟು ಬೇಸಿಕ್ ಎಜುಕೇಷನ್ ಇನ್ ಉತ್ತರ ಪ್ರದೇಶ್ : ರಿಸಲ್ಟ್ಸ್ ಫ್ರಮ್ ಫೀಲ್ಡ್ ಸರ್ವೆ,** *ಪ್ರಾಜೆಕ್ಟ್ ಆನ್ ಸ್ಟ್ರಾಟಜಿಸ್ ಆ್ಯಂಡ್ ಫೈನಾನ್ಸಿಂಗ್ ಫಾರ್ ಹ್ಯೂಮನ್ ಡೆವಲಪ್‌ಮೆಂಟ್,* ಯು.ಎನ್.ಡಿ.ಪಿ, ನ್ಯೂ ಡೆಲ್ಲಿ

ಶ್ರೀವಾತ್ಸವ, ರವಿ, ೨೦೦೧.ಎ, **ಇನ್ ಇಕ್ವಲಿಟಿ ಆ್ಯಂಡ್ ಎಜ್ಯುಕೇಷನಲ್ ಸೆಕ್ಯೂರಿಟಿ**, ಇನ್ ಮಹೇಂದ್ರ ದೇವ್ ಎಟ್ ಆಲ್ (೨೦೦೧)

ಶ್ರೀ ವಾತ್ಸವ, ರವಿ, ೨೦೦೧.ಬಿ, **ಅಸೆಸ್ ಟು ಬೇಸಿಕ್ ಎಜುಕೇಷನ್ ಇನ್ ರೂರಲ್ ಉತ್ತರ ಪ್ರದೇಶ್**, ಇನ್ ವೈಧ್ಯನಾಥನ್ ಆ್ಯಂಡ್ ನಾಯರ್ (೨೦೦೦)

ವರದಾ ಶ್ರೀನಿವಾಸ, ೧೯೯೯, **ಮಹಿಳೆಯ ಸ್ಥಿತಿಗತಿ ಅಂದು-ಇಂದು**, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

ವನಜಾ ವೆಂ., ೨೦೦೩, ಹೆಣ್ಣು ಹಕ್ಕು ಹೋರಾಟ, ಸಮತಾ ಅಧ್ಯಯನ ಕೇಂದ್ರ, ಮೈಸೂರು

ವನಮಾಲಾ ಕಟ್ಟೀಗೌಡರ, ೧೯೯೯, ಮಹಿಳೆಯ ಸ್ಥಿತಿಗತಿ, ಮಹಿಳಾ ಅಧ್ಯಯನ ಪತ್ರಿಕೆ, ಸಂಪುಟ ೧, ಸಂಚಿಕೆ ೨ ಜುಲೈ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿಲ್‌ಫ್ರೆಡ್ ಡಿಸೋಜ, ೨೦೦೬, ರೈತರಿಗೆ ಆಸೆ ಕಂಪನಿಗಳಿಗೆ ಲಾಭದ ದಾಹ, ಶಿಕ್ಷಣದಿಂದ ವಂಚಿತರಾಗುತ್ತಿರುವ ಕಂದಮ್ಮಗಳು, ಸಾಹುಹೆಜ್ಜೆ ಪತ್ರಿಕೆ, ಸಂಪುಟ ೨, ಸಂಚಿಕೆ ೯, ನವೆಂಬರ್ ತಿಂಗಳು

ವೈದ್ಯನಾಥ ಮಿಶ್ರ, ೨೦೦೦, ಶಿಕ್ಷಣದಲ್ಲಿ ಸಂಸ್ಕೃತಿ ಗಾಂಧೀ ವಿಚಾರಧಾರೆ, ಯೋಜನಾ ಪತ್ರಿಕೆ, ಅಕ್ಟೋಬರ್

ಶರ್ಮ, ಕೆ.ಎಸ್., ೨೦೦೦, ಜನತೆಗಾಗಿ ಶೈಕ್ಷಣಿಕ ಪ್ರಕ್ರಿಯೆ : ಸಹಸ್ರಮಾನದ ಒಂದು ಸವಾಲು, ಪುರೋಗಾಮಿ ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ

ಶಿರೂರ ಬಿ.ವ್ಹಿ., ೨೦೦೧, ಸಂಶೋಧನ ಸ್ವರೂಪ, ಅನ್ನಪೂರ್ಣ ಪ್ರಕಾಶನ, ನಂ. ೧೩, ಮಂಜುನಾಥ ನಗರ, ಹುಬ್ಬಳ್ಳಿ

ಶಿವರಾಜ ಬಿ.ಕೆ. ಮತ್ತು ವಿಠೋಬ ಭೀಮಣ್ಣ, ೨೦೦೫, ಶಿಕ್ಷಣ ಮತ್ತು ಪ್ರಾದೇಶಿಕ ಅಸಮತೋಲನ, ಸಂವಾದ ಮಾಸ ಪತ್ರಿಕೆ, ಸ್ಫೂರ್ತಿಧಾಮ, ಅಂಜನಾನಗರ, ಬೆಂಗಳೂರು

ಶ್ರೀಮತಿ ಎಚ್.ಎಸ್., ೨೦೦೧, ಆಧುನಿಕ ಭಾರತದಲ್ಲಿ ಮಹಿಳೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಶೈಲಜಾ ಹಿರೇಮಠ, ೨೦೦೩, ಸ್ತ್ರೀಕಥನ, ಭುವನ ಪ್ರಕಾಶನ, ಹೊಸಪೇಟೆ ತಾ., ಬಳ್ಳಾರಿ ಜಿಲ್ಲೆ

ಶೈಲಜಾ ಎಂ.ಸಿ., ೨೦೦೭, ದಲಿತ ಮಹಿಳೆಯರ ಧಾರುಣ ಸ್ಥಿತಿ, ಸಾಲುಹೆಜ್ಜೆ ಪತ್ರಿಕೆ, ಸಂಪುಟ ೩, ಸಂಚಿಕೆ ೯ ಮತ್ತು ೧೦, ನವೆಂಬರ್-ಡಿಸೆಂಬರ್ ತಿಂಗಳು

ಶೈಲಜಾ ಎಂ.ಸಿ., ೨೦೦೬, ಕೇರಳದ ಮಹಿಳೆಯರ ಸ್ಥಿತಿಗತಿ ಒಂದು ಅಲೋಕನ, ಸಾಲುಹೆಜ್ಜೆ ಪತ್ರಿಕೆ, ಸಂಪುಟ ೨, ಸಂಚಿಕೆ ೪, ಜೂನ್ ತಿಂಗಳು

ಶಿವಚಿತ್ತಪ್ಪ ಕೆ. (ಸಂ.), ೨೦೦೬, ಮಹಿಳಾ ಸಬಲೀಕರಣದ ವಿಭಿನ್ನ ನೆಲೆಗಳು, ಲಕ್ಷ್ಮಿ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್, ನಂ. ೩೪೧, ಕಾಳಮ್ಮನ ಗುಡಿ ಬೀದಿ, ಮೈಸೂರು

ಷರೀಫಾ ಕೆ., ೨೦೦೬, ಮಹಿಳೆ ಮತ್ತು ಜಾಗತೀಕರಣ, ಹೊನ್ನಾರು ಮಾಸಪತ್ರಿಕೆ, ಸಂಪುಟ ೪, ಸಂಚಿಕೆ ೧, ಜನವರಿ ತಿಂಗಳು

ಸರೋಜಾ ಕೆ., ೨೦೦೪, ಮಹಿಳೆ ಮತ್ತು ಸಮೂಹ ಮಾಧ್ಯಮಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸರೋಜಾ ಕೆ., ೨೦೦೧, ಮಹಿಳೆ ಮತ್ತು ಆರೋಗ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸರೋಜ ಬಿ. ಮತ್ತು ವೆಂಕಟೇಶ್ ಕೆ., ೨೦೦೬, ಹೈದ್ರಾಬಾದ್ ಕರ್ನಾಟಕ ವರ್ತಮಾನದ ತಲ್ಲಣಗಳು, ಪಲ್ಲವ ಪ್ರಕಾಶನ, ಭುವನಗಿರಿ ಕಾಲೋನಿ, ಸಿರುಗುಪ್ಪ ರೋಡ್, ಬಳ್ಳಾರಿ

ಸೂರ್ಯಕಾಂತ ಶೀಲವಂತರು, ೨೦೦೩, ಸ್ವತಂತ್ರ ಭಾರತದಲ್ಲಿ ಶಿಕ್ಷಣ ಮತ್ತು ಶ್ರೇಷ್ಠ ಶಿಕ್ಷಣ ತಜ್ಞರು, ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ, ಸರಸ್ವತಿ ಗೋದಾಮ, ಗುಲಬರ್ಗಾ

ಸುಂದರ ಕೇನಾಜಿ, ಮಂಡೆಕೋಲು, ೨೦೦೬, ಸರ್ಕಾರಿ ಶಾಲೆಗಳಲ್ಲಿ ಮಕ್ಕಳ ಶಿಕ್ಷಣ ಪೋಷಕರು ಎಡವಿರುವುದು ಎಲ್ಲಿ, ಹೊನ್ನಾರು ಮಾಸ ಪತ್ರಿಕೆ, ಸಂ. ೩, ಸಂಚಿಕೆ ೩೦, ಸೆಪ್ಟೆಂಬರ್ ತಿಂಗಳು

ಸೆನ್ಸಸ್ ಆಫ್ ಇಂಡಿಯಾ, ೨೦೦೧, ಪ್ರೈಮರಿ ಸೆನ್ಸಸ್ ಅಬ್‌ಸ್ಟ್ರಾಕ್ ಕರ್ನಾಟಕ, ಡೈರೆಕ್ಟರ್ ಜನರಲ್ ಪಾಪುಲೇಶನ್ ಡೈರೆಕ್ಟರೇಟ್ ಆಫ್ ಸೆನ್ಸಸ್ ಆಪರೇಶನ, ಬೆಂಗಳೂರು

ಸುನಂದಮ್ಮ ಆರ್., ೨೦೦೬, ಗ್ರಾಮೀಣ ಪ್ರದೇಶಗಳಿಗೆ ಜಂಡರ್ ತಿಳುವಳಿಕೆ ಕಾರ್ಯಕ್ರಮಗಳ ಅಗತ್ಯ ಒಂದು ಪರಿಶೀಲನೆ, ಮಹಿಳಾ ಅಧ್ಯಯನ ಪತ್ರಿಕೆ, ಸಂಪುಟ ೮, ಸಂಚಿಕೆ ೧, ಜನವರಿ ಜೂನ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಹಿರೇಮಠ ಸಿ.ಜಿ. ತಳವಾರ ಜಿ.ಕೆ. ಮತ್ತು ಉಗರಗೋಳ ಎಂ.ಬಿ. (ಸಂ), ೨೦೦೬, ಆಧುನಿಕ ಶಿಕ್ಷಣದ ಒಲವುಗಳು, ನಿಶಾಂತ ಪ್ರಕಾಶನ, ಸೀಮಿಕೇರಿ, ಬಾಗಲಕೋಟೆ

**ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧಗಳು**

ಕುರುಹುರಿ ವೆಂಕಟ ಜಗನ್ನಾಥ್ ರಾವ್, ೨೦೦೩, ಎನ್‌ರೋಲ್‌ಮೆಂಟ್ ಅಂಡ್ ಡ್ರಾಪೌಟ್ ಇನ್ ಪ್ರೈಮ ಎಜ್ಯುಕೇಷನ್ ಆಫ್ ಟ್ರೈಬಲ್ಸ್ (ಎ ಕಂಪ್ಯಾರಿಟಿವ್ ಸ್ಟಡಿ ಆಫ್ ಸಬ್ ಪ್ಲ್ಯಾನ್ ಅಂಡ್ ನಾನ್ ಸಬ್ ಪ್ಲ್ಯಾನ್ ಏರಿಯಾಸ್ ಇನ್ ವಿಜಯನಗರ ಡಿಸ್ಟ್ರಿಕ್ಟ್ ಆಂಧ್ರಪ್ರದೇಶ್), ಪಿಎಚ್.ಡಿ. ಮಹಾಪ್ರಬಂಧ, ಅಪ್ರಕಟಿತ, ಆಂಧ್ರ ವಿಶ್ವವಿದ್ಯಾಲಯ

ಕೃಷ್ಣ ಜೆ., ೨೦೦೦, ಮಾನವ ಅಭಿವೃದ್ಧಿಯ ಪ್ರಾದೇಶಿಕ ಆಯಾಮಗಳ ಅಧ್ಯಯನ, ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಮಲ್ಲಿಕಾರ್ಜುನ ಕಿಚಡಿ, ೨೦೦೩, ಬಳ್ಳಾರಿ ಜಿಲ್ಲೆ ಬೇಡ ಸಮುದಾಯದ ಶಿಕ್ಷಣದ ಪ್ರಗತಿ, ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಮುದ್ದವೀರಪ್ಪ ಕೆ.ಪಿ., ೨೦೦೪, ತುಮಕೂರು ಜಿಲ್ಲೆಯ ಕೋಟೆಕೊತ್ತಲುಗಳ ಜಾನಪದೀಯ ಅಧ್ಯಯನ, ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ವೆಂಕಟೇಶ್ ಎಂ., ೨೦೦೭, ನೀರಾವರಿ ನಿರ್ವಹಣೆಯಲ್ಲಿ ನೀರು ಬಳಕೆದಾರರ ಸಹಕಾರ ಸಂಘಗಳ ಪಾತ್ರ, ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಶಿವತಾರಕ, ೧೯೯೯, ತುಮಕೂರು ಜಿಲ್ಲೆಯ ಪುರಾತತ್ವ ಕುರುಹುಗಳು, ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸುಧಾಕರ್ ಬಿ.ಎಸ್., ೨೦೦೭, ಬಳ್ಳಾರಿ ಜಿಲ್ಲೆಯ ಜನಪದ ವೈದ್ಯ ಒಂದು ವೈಜ್ಞಾನಿಕ ಅಧ್ಯಯನ, ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸುಮಂಗಲಾ ಅತ್ತಿಗೇರಿ, ೨೦೦೭, ಕೃಷಿ ಜಾನಪದ ಮತ್ತು ಮಹಿಳೆ, ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸುನಂದ, ೨೦೦೭, ಲಿಂಗವ್ಯವಸ್ಥೆ ಮತ್ತು ನಿಷೇಧಗಳು, ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಬಾಲರಾಜು ಎಚ್., ೨೦೦೨, ಸಮುದಾಯದಲ್ಲಿ ಭಾಗವಹಿಸುವಿಕೆಯ ಮುಖಾಂತರ ಶೈಕ್ಷಣಿಕ ಅಭಿವೃದ್ಧಿ ಬಳ್ಳಾರಿ ಜಿಲ್ಲೆ ಒಂದು ಅಧ್ಯಯನ, ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

• • •

## ೨. ಪ್ರಶ್ನಾವಳಿ

೧. ಗ್ರಾಮದ ಹೆಸರು ೨. ತಾಲ್ಲೂಕಿನ ಹೆಸರು ೩. ಜಿಲ್ಲೆಯ ಹೆಸರು

೪. ಕುಟುಂಬದ ಮುಖ್ಯಸ್ಥನ ಹೆಸರು ೫. ಕುಟುಂಬದ ಸದಸ್ಯರ ಸಂಖ್ಯೆ

೬. ಕುಟುಂಬದ ಮುಖ್ಯಸ್ಥನ ವಿದ್ಯಾಹ್ಯತೆ

೭. ಧರ್ಮ ೮. ಜಾತಿ ೯. ಉಪಜಾತಿ

೧೦. ಮಾತೃಭಾಷೆ ೧೧. ಕುಟುಂಬದ ವಿವರ

ಅ. ವಿಭಕ್ತ ಕುಟುಂಬ

ಬ. ಅವಿಭಕ್ತ ಕುಟುಂಬ

ಕುಟುಂಬದ ಸದಸ್ಯರ ವಿವರ

| ಕ್ರ.ಸಂ. | ಸದಸ್ಯರ ಸಂಖ್ಯೆ | ಕುಟುಂಬದ ಮುಖ್ಯಸ್ಥನೊಂದಿಗೆ ಸಂಬಂಧ | ಲಿಂಗ ಗಂ/ಹೆಣ್ಣು | ವಯಸ್ಸು | ವಿದ್ಯಾರ್ಹತೆ ಕಲಿಯುತ್ತಿರುವ ತರಗತಿ | ಮಾಧ್ಯಮ |
|---|---|---|---|---|---|---|
| | | | | | | |
| | | | | | | |
| | | | | | | |
| | | | | | | |
| | | | | | | |
| | | | | | | |
| | | | | | | |
| | | | | | | |
| | | | | | | |
| | | | | | | |
| | | | | | | |

೧೨. ಕುಟುಂಬದ ಆದಾಯದ ಮೂಲಗಳು

| | | |
|---|---|---|
| ಅ. ಕೃಷಿ | ಮಾಸಿಕ ಆದಾಯ | ವಾರ್ಷಿಕ ಆದಾಯ |
| ನೀರಾವರಿ | | |
| ತೋಟಗಾರಿಕೆ | | |
| ಬ. ವ್ಯಾಪಾರ | ಮಾಸಿಕ ಆದಾಯ | ವಾರ್ಷಿಕ ಆದಾಯ |
| ಸಣ್ಣ | | |
| ಮಾಧ್ಯಮ | | |
| ದೊಡ್ಡ | | |
| ಕ. ಉದ್ಯೋಗ | ಮಾಸಿಕ ಆದಾಯ | ವಾರ್ಷಿಕ ಆದಾಯ |
| ಸರ್ಕಾರಿ | | |
| ಖಾಸಗಿ | | |
| ಡ. ಗೃಹ ಕೈಗಾರಿಕೆ | ಮಾಸಿಕ ಆದಾಯ | ವಾರ್ಷಿಕ ಆದಾಯ |
| ಇ. ವರಮಾನ | ಮಾಸಿಕ ಆದಾಯ | ವಾರ್ಷಿಕ ಆದಾಯ |
| ಕೃಷಿ | | |
| ಕೂಲಿ | | |
| ಕೃಷಿಯೇತರ (ಎಲ್ಲಾ ಮೂಲಗಳಿಂದ) | | |

೧೩. ನಿಮ್ಮ ವಾರ್ಷಿಕ ಆದಾಯದಿಂದ ನಿಮ್ಮ ಮಕ್ಕಳಿಗೆ ಉತ್ತಮ ಶಿಕ್ಷಣ ನೀಡಲು ಸಾಧ್ಯವಾಗುತ್ತದೆಯೇ?

ಹೌದು/ಇಲ್ಲ

೧೪. ಪ್ರಾಥಮಿಕ ಶಾಲೆಗೆ ಒಂದು ಮಗುವನ್ನು ಕಳುಹಿಸಲು ನಿಮಗೆ ತಗಲುವ ವಾರ್ಷಿಕ ಖಾಸಗಿ ವೆಚ್ಚ?

ಎ. ೨೦೦ ಕ್ಕಿಂತ ಕಡಿಮೆ

ಬಿ. ೨೫೦-೩೦೦

ಸಿ. ಎರಡು ಮಕ್ಕಳಿಗೆ ಸಮಾನ ವೆಚ್ಚವಾಗುತ್ತದೆ.

